# ನವಕರ್ನಾಟಕ : ಇತ್ತೀಚಿನ ಕೆಲವು ಪ್ರಕಟಣೆಗಳು




₹125




₹100




₹90




₹190




₹190




₹200




₹65




₹190




₹175



₹50




₹95




₹150

ಬ್ಯಾಂಕ್ ಖಾತೆಯ ವಿವರಗಳು : Current A/c No. 0788201010612. IFSC Code CNRB0000788 ಕೆನರಾ ಬ್ಯಾಂಕ್, ಮಾಧವನಗರ, ಬೆಂಗಳೂರು

ಮೂರು ವರ್ಷದ 'ಹೊಸತು' ಚಂದಾದಾರರಿಗೆ 20% ಸೋಡಿ. ಇತರರಿಗೆ 10% ಸೋಡಿ. ನಿವ್ವಳ ₹ 250ಕ್ಕಿಂತ ಕಡಿಮೆ ಮೊಬಲಗಿನ ಬೇಡಿಕೆಗಳಿಗೆ ಅಂಚೆವೆಚ್ಚ ₹ 40 ಪ್ರತ್ಯೇಕ

ಹಣವನ್ನು ಡಿ.ಡಿ., ಎಂ.ಓ. ಮೂಲಕ ಕಳಿಸಿ ಅಥವಾ ನಮ್ಮ ಪುಸ್ತಕ ಮಳಿಗೆಗೆ ಭೇಟಿ ನೀಡಿ

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**

11, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ 5159, ಕುಮಾರ ಪಾರ್ಕ್ ಪೂರ್ವ
ಬೆಂಗಳೂರು – 560 001. ಫೋನ್ : 080-22161900/14 ಮೊಬೈಲ್ : 9480686858
e-mail : navakarnataka@gmail.com http://navakarnataka.blogspot.in

ಆನ್‌ಲೈನ್ ಮೂಲಕವೂ ಲಭ್ಯ  Shop Online www.navakarnataka.com

ಶಾಖೆಗಳು : ಬೆಂಗಳೂರು ✆ 22203106 :: ಮಂಗಳೂರು ✆ 2441016 ✆ 2425161 :: ಮೈಸೂರು ✆ 2424094 :: ಕಲಬುರಗಿ ✆ 224302

# ಹೊಸತು

ಒಳಗೇನಿದೆ?

ನೆಮ್ಮದಿಯ ನಾಳೆ ನಮ್ಮದು




**ಚಿತ್ರಗಳು :** ಕಮಲಂ ಅರಸು, ನಾಮದೇವ ಕಾಗದಗಾರ, ತನು, ಉಮೇಶ ಹಿರೇಮಠ, ಗೋಪಿ ಹಿರೇಬೆಟ್ಟು, ಎನ್. ಆರ್. ಹೆಗಡೆ, ಆದರ್ಶ ಪೈ

**ಮುಖಪುಟ : ರಶಿಯಾ ಕ್ರಾಂತಿಯ ಸಂದರ್ಭದ ಝಿನೈದಾ ಅವರ ಕಲಾಕೃತಿ 'ಕಂಟ್ರಿ ಗರ್ಲ್'**

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು



ಮಹಾತ್ಮ ಗಾಂಧಿ ೧೫೦ನೇ ಜನ್ಮದಿನೋತ್ಸವವನ್ನು ಗಾಂಧಿವಾದಿಗಳು, ಗಾಂಧಿ ವಿರೋಧಿಗಳು, ಕೊಲೆಪಾತಕರೂ ಎಲ್ಲರೂ ಆಚರಿಸಿದರು. ದೇಶ ವಿದೇಶಗಳಲ್ಲಿ ಇದನ್ನು ಆಚರಿಸಲಾಯಿತು. ಯಥಾಪ್ರಕಾರ ಮೋದಿ ಸರಕಾರದವರೂ ಆಡಂಬರದಿಂದ ಪೊರಕೆ ಹಿಡಿದು ಫೋಟೋ ತೆಗೆಸಿಕೊಂಡು ತಾಯ್ನಾಡನ್ನು ಸ್ವಚ್ಛಗೊಳಿಸಿದರು. ಎಲ್ಲ ಒಂದು ದಿನದ ಬಾಳು ಎನ್ನುವುದನ್ನು ಸಾಬೀತುಗೊಳಿಸಲಾಯಿತು. 'ಭಾರತ ಸ್ವಚ್ಛ ಭಾರತವಾಯಿತು.' ಆರು ವರ್ಷಗಳ ಹಿಂದೆ ಅಧಿಕಾರ ವಹಿಸಿಕೊಂಡ ಪ್ರಧಾನಿ ಮೋದಿ 'ಬಯಲು ಶೌಚ ಮುಕ್ತ ಭಾರತ'ದ ಅಭಿಯಾನ ಪ್ರಾರಂಭಿಸಿದರು. ಶುರುವಾಯಿತು ಹಳ್ಳಿ ಹಳ್ಳಿಗಳಲ್ಲಿ ಶೌಚಾಲಯಗಳ ನಿರ್ಮಾಣ. ಖ್ಯಾತ ಹಿಂದಿ ನಟ 'ಬಾಗಿಲು ಬಂದ್' ಪ್ರಚಾರ ನಡೆಸಿ ದೃಶ್ಯ ಮಾಧ್ಯಮಗಳಲ್ಲಿ ಮೆರೆದು ಹಣ ಸಂಪಾದಿಸಿದರು.

ಈ ವರ್ಷ ಮೋದಿಯವರು ಗಾಂಧಿ ಜಯಂತಿಯ ದಿನ ಘೋಷಿಸಿಯೇ ಬಿಟ್ಟರು: "ಭಾರತ ಬಯಲು ಶೌಚ ಮುಕ್ತ ರಾಷ್ಟ್ರವಾಗಿದೆ" ಎಂದು. ಮರುದಿನವೇ ಮಾಧ್ಯಮಗಳು ಅವರ ಈ ಘೋಷಣೆಯನ್ನು ಪ್ರಚುರಪಡಿಸಿದುವು. ಆದರೆ ಪ್ರಧಾನಿಯವರ ಈ ಘೋಷಣೆ ಎಷ್ಟು ಸರಿ ಎಂದು ವಿಮರ್ಶೆ ಪತ್ರಿಕೆಗಳಲ್ಲಿ ಪ್ರಾರಂಭವಾಯಿತು. ಸಂಪಾದಕೀಯಗಳು ಬಂದವು. "ಬಯಲು ಶೌಚ : ಘೋಷಣೆಯೇನೋ ಆಕರ್ಷಕ, ವಸ್ತುಸ್ಥಿತಿ ಬೇರೆಯೇ ಇದೆ", "ಬಯಲು ಶೌಚ ಮುಕ್ತ ಘೋಷಣೆ ನಂಬಲರ್ಹ" ಎಂಬ ಶೀರ್ಷಿಕೆಯಡಿ ಅಂಕಿಅಂಶಗಳು, ಚಿತ್ರಗಳ ಸಮೇತ ವರದಿಗಳು ಪ್ರಕಟಗೊಂಡವು. ಬಹುತೇಕ ಕಡೆಗಳಲ್ಲಿ ಶೌಚಾಲಯಗಳೇನೋ ನಿರ್ಮಾಣಗೊಂಡಿವೆ. ಆದರೆ ನೀರು ಇಲ್ಲವಾಗಿದೆ. ನಮ್ಮ ಬೆಂಗಳೂರಿನ ರಸ್ತೆಗಳಲ್ಲಿ ನಡೆದಾಡಿದರೆ ಗೊತ್ತಾಗುತ್ತದೆ ನಗರ ನೈರ್ಮಲ್ಯ ಹೇಗೆ ಕಾಪಾಡಿಕೊಳ್ಳಲಾಗಿದೆ ಎನ್ನುವುದು. ಅವೈಜ್ಞಾನಿಕವಾಗಿ ಜಾರಿಯಾಗಿರುವ ಈ ಯೋಜನೆ ತಜ್ಞರ ಅಭಿಪ್ರಾಯದ ಪ್ರಕಾರ ವಿಫಲವಾಗುವ ಸಾಧ್ಯತೆಯೇ ಹೆಚ್ಚು. ಸರಕಾರ ನೀಡಿರುವ ಅಂಕಿ–ಅಂಶಗಳಲ್ಲೇ ಗೊಂದಲವಿದೆ. ಪ್ರಧಾನಿ ನರೇಂದ್ರ ಮೋದಿ ಸಂದರ್ಭಕ್ಕೆ ತಕ್ಕಹಾಗೆ ಘೋಷಣೆಗಳನ್ನು ನೀಡುವುದರಲ್ಲಿ ನಿಪುಣರು. ಅವರ ಯಾವ ಘೋಷಣೆಯೂ ಸ್ವಚ್ಛವಾಗಿಲ್ಲ. ಎಲ್ಲವೂ ಬುರುಡೆ. ಅಧಿಕಾರ ಹಿಡಿಯುವ ತಂತ್ರಗಾರಿಕೆ ಅರಿವುಳ್ಳವರು ನಮ್ಮ ಪ್ರಧಾನಿ. ಕಪ್ಪು ಹಣತಂದು ತುಂಬಿಸಿಯಾಯಿತು. ಭಾರತದಲ್ಲೇ ತಯಾರಿಸಿ ಅಭಿಯಾನ ಯಶಸ್ವಿಯಾಯಿತು. ವಿದೇಶೀ ಬಂಡವಾಳ ಓತಪ್ರೋತವಾಗಿ ಹರಿದುಬಂತು. ಈ ಎಲ್ಲ ಸಾಧನೆಗಳನ್ನು ನಾವು ನೋಡುತ್ತಿದ್ದೇವೆ. ಎಲ್ಲ ಅವೈಜ್ಞಾನಿಕ ಎನ್ನುವುದು ನಿಜವಾಗಿದೆ, ನಿಜವಾಗುತ್ತಿದೆ. ನಮ್ಮ ಆರ್ಥಿಕಾಭಿವೃದ್ಧಿಯೇ ಅದಕ್ಕೆ ಸಾಕ್ಷಿ. ಏನೇ ಅಂಕಿಅಂಶಗಳನ್ನು ಹರಿಯಬಿಟ್ಟರೂ ವಸ್ತುಸ್ಥಿತಿಯೇ ಬೇರೆ.

✴ ✴ ✴

'ರಾಷ್ಟ್ರದ್ರೋಹ' ಎನ್ನುವ ಪರಿಕಲ್ಪನೆ ಬಂದದ್ದೇ ಯುರೋಪಿನಲ್ಲಿ. ಶತಮಾನಗಳ ಹಿಂದೆ ರಾಜಮಹಾರಾಜರುಗಳು, ಚಕ್ರವರ್ತಿಗಳ ಕಾಲದಲ್ಲಿ 'ರಾಜದ್ರೋಹ'ದ ಒಳಸಂಚುಗಳೇ ರಾಷ್ಟ್ರದ್ರೋಹವಾಯಿತು. ಈ ಕಾನೂನನ್ನು ಅಧಿಕೃತವಾಗಿ ಕಂಡು ಭಾರತದಲ್ಲಿ ಜಾರಿಗೊಳಿಸಿದ್ದು ಬ್ರಿಟಿಷರ ಆಡಳಿತಾವಧಿ ಕಾಲದಲ್ಲೇ. ರಾಷ್ಟ್ರದ್ರೋಹದ ಆಪಾದನೆಯನ್ನು ಬ್ರಿಟಿಷ್ ಸರಕಾರ ಪ್ರಯೋಗಿಸಿದ್ದು ೧೮೯೭ರಲ್ಲಿ. ಅದು 'ಸ್ವರಾಜ್ಯ ನಮ್ಮ ಜನ್ಮಸಿದ್ಧ ಹಕ್ಕು' ಎಂದು ಘೋಷಿಸಿದ ಬಾಲಗಂಗಾಧರ ತಿಲಕರ ಮೇಲೆ. ಸ್ವಾತಂತ್ರ್ಯ ಹೋರಾಟ ಕಾಲದಲ್ಲಿ ಈ ರಾಷ್ಟ್ರದ್ರೋಹದ ಆಪಾದನೆಯ ಮೇಲೆ ನೇಣುಗಂಬ ಏರಿದವರೆಷ್ಟೋ ಮಂದಿ.

ಈಗ ಇಪ್ಪತ್ತೊಂದನೆ ಶತಮಾನದ ಕಾಲದಲ್ಲಿ ಪ್ರಧಾನಿ ಮೋದಿಯನ್ನು ಟೀಕಿಸಿದವರೆಲ್ಲ ದೇಶದ್ರೋಹಿಗಳೇ. ಭಿನ್ನಮತಕ್ಕೆ ಅವಕಾಶವೇ ಇಲ್ಲವಾಗಿದೆ. ದೆಹಲಿಯ ಜವಹರಲಾಲ್ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳ ಮೇಲೆ

***(೭ನೇ ಪುಟಕ್ಕೆ)***



# ಸಂಪಾದಕೀಯ

## ಕರ್ನಾಟಕ : ಕಂಡ ಕನಸು ನಡೆದದಾರಿ

ಸಮಸ್ತ ಕರ್ನಾಟಕದ ಜನತೆಗೆ 'ಹೊಸತು' ಬಳಗದಿಂದ ರಾಜ್ಯೋತ್ಸವದ ಶುಭಾಶಯಗಳು. ಕನ್ನಡ ರಾಜ್ಯೋತ್ಸವಕ್ಕೆ ಅಂದರೆ, ಭಾಷಾವಾರು ಪ್ರಾಂತಗಳ ರಚನೆಯಾಗಿ, ಆರು ದಶಕಗಳು ಕಳೆದುಹೋದವು. ಪ್ರತಿ ವರ್ಷ ನವೆಂಬರ್ ೧ರಿಂದ ಇಡೀ ತಿಂಗಳು ಒಂದು ರೀತಿಯ ಭಾಷಾ ಅಸ್ಮಿತೆಯ ಸಂಚಲನ ಆರಂಭವಾಗುತ್ತದೆ. ಒಂದೆಡೆ ಸರಕಾರಿ ಕಾರ್ಯಕ್ರಮಗಳು, ಕನ್ನಡ ಸಂಘ ಸಂಸ್ಥೆಗಳ ಕಾರ್ಯಕ್ರಮಗಳು, ರಾಜ್ಯೋತ್ಸವ ಪ್ರಶಸ್ತಿಗಳು, ಕನ್ನಡ ಧ್ವಜದ ಮೆರವಣಿಗೆ, ಕನ್ನಡಾಂಬೆಯ ಪೂಜೆ ಹೀಗೆ ವಿವಿಧ ರೀತಿಯ ಚಟುವಟಿಕೆಗಳು ಉತ್ಸಾಹದಿಂದ ಕೂಡಿರುತ್ತವೆ. ಕನ್ನಡ ರಾಜ್ಯೋತ್ಸವವನ್ನೂ ಸಹ ಸ್ವಾತಂತ್ರ್ಯ ದಿನಾಚರಣೆಯ ರೀತಿಯಲ್ಲಿಯೇ ಆಚರಿಸಲಾಗುತ್ತಿದೆ. ಬಹುತೇಕ ಕಡೆಗಳಲ್ಲಿ ಕನ್ನಡ ಭಾಷೆಯ ಕುರಿತ ಹೆಮ್ಮೆ, ನಾಡಿನ ಮಹತ್ವ ಕುರಿತು ಮಾತನಾಡಲಾಗುತ್ತಿದೆ. ಆದರೆ ಕನ್ನಡ ನಾಡು ರೂಪಗೊಂಡ ಬಗೆ, ಅದಕ್ಕೆ ನಡೆದ ಹೋರಾಟಗಳು, ಏಕೀಕರಣದ ಉದ್ದೇಶಗಳು, ಅಂದಿನ ಸ್ಥಿತಿಗತಿ, ಇಂದು ನಾವು ತಲುಪಿರುವ ದೂರ, ಈ ಏಕೀಕರಣಗೊಂಡ ಕರ್ನಾಟಕದ ಸಾಧನೆ, ಮಿತಿ, ಸಾಧ್ಯತೆಗಳ ಕುರಿತು ಗಂಭೀರವಾದ ಚರ್ಚೆಗಳು ನಡೆಯುತ್ತಿರುವುದು ಕಡಿಮೆ.

ಕರ್ನಾಟಕ ಏಕೀಕರಣಗೊಂಡ ನಂತರ ಸಾಧನೆಗಳೇ ಆಗಿಲ್ಲ ಎನ್ನುವುದು ತಪ್ಪಾಗುತ್ತದೆ. ಆದರೆ ಈ ಸಾಧನೆಗಳು ಸಮಗ್ರವಾಗಿವೆಯೇ? ವ್ಯಾಪಕವಾಗಿವೆಯೇ? ಅರವತ್ತರ ದಶಕದ ನಂತರ ಸ್ವತಂತ್ರ ಭಾರತದ ಅಭಿವೃದ್ಧಿಯ ಭಾಗವಾಗಿಯೇ ಬೆಳೆದ ಕರ್ನಾಟಕ, ಭಾರತದ ಸ್ವಾತಂತ್ರ್ಯದ, ಏಕೀಕರಣದ ಆಶಯಗಳನ್ನು ಪೂರೈಸಿಕೊಳ್ಳಲು ಸಾಧ್ಯವಾಗಿದೆಯೇ ಎಂದು ಗಂಭೀರವಾದ ಚರ್ಚೆಗಳಾಗಬೇಕಿದೆ. ಸಾಮಾನ್ಯವಾಗಿ ಕನ್ನಡ ರಾಜ್ಯೋತ್ಸವವನ್ನು ಕನ್ನಡ ಭಾಷೆಗೆ ಸೀಮಿತವಾಗಿ ನೋಡಲಾಗುತ್ತದೆ. 'ಕಾವೇರಿಯಿಂದ ಮಾ ಗೋದಾವರಿ ವರಮಿರ್ದ ನಾಡದಾ ಕನ್ನಡದೊಳ್ ಭಾವಿಸಿದ ಜನಪದಂ...' ಎಂದು ಕವಿರಾಜ ಮಾರ್ಗಕಾರ ಹೇಳಿದ ಕನ್ನಡ ನಾಡಿನ ವಿಸ್ತಾರವನ್ನು ಹೆಮ್ಮೆಯಿಂದ ಮತ್ತೆ ಮತ್ತೆ ಹೇಳುತ್ತೇವೆ. ಕದಂಬರಿಂದ ವಿಜಯನಗರದ ಅರಸರವರೆಗಿನ ಕನ್ನಡ ನಾಡಿನ, ಕನ್ನಡದ ಅರಸರ ಪರಂಪರೆಯನ್ನು ಹೆಮ್ಮೆಯಿಂದ ನೆನೆಯುತ್ತೇವೆ. ಇದು ಭಾವುಕ ನೆಲೆಯಲ್ಲಿ ನಾಡುನುಡಿಯನ್ನು ಸ್ಮರಿಸುವ ಒಂದು ವಿಧಾನ. ಹಲವು ಸಂದರ್ಭಗಳಲ್ಲಿ ದಕ್ಷಿಣದಿಂದ ಉತ್ತರ ಭಾಗದವರೆಗೂ ವಿಸ್ತರಿಸಿದ ಕನ್ನಡ ನಾಡಿನ ಅರಸರ ಸಾಹಸಗಾಥೆಗಳನ್ನು, ಕನ್ನಡೇತರ ನೆಲದ ಮೇಲೆ ಅವರು ವಿಸ್ತರಿಸಿದ ಸಾಮ್ರಾಜ್ಯದ ಕತೆಗಳನ್ನು ಗರ್ವದಿಂದ ಹೇಳುತ್ತೇವೆ. ಇಂಥ ವಿಸ್ತಾರವಾದ, ಕಾವೇರಿಯಿಂದ ಗೋದಾವರಿವರೆಗಿನ ಜನಪದದ ವ್ಯಾಪ್ತಿ ಇಂದು ಸೀಮಿತವಾಗಿರುವ ಮತ್ತು ಇಂದಿನ 'ಕನ್ನಡ ಉಳಿಸಿ' ಎಂಬ ಘೋಷಣೆಗೆ ಬಂದು ತಲುಪಿರುವ ಸ್ಥಿತಿಯವರೆಗೂ ಆದ ಬೆಳವಣಿಗೆಯನ್ನು ಸರಕಾರಗಳಾಗಲೀ ಕನ್ನಡ ಸಂಘಟನೆ, ಸಂಸ್ಥೆಗಳಾಗಲೀ ಗಂಭೀರವಾಗಿ ಚಿಂತನೆಗೆ ಒಳಪಡಿಸುತ್ತಿಲ್ಲ.

ಒಂದು ಹಂತದಲ್ಲಿ ಕನ್ನಡ ನಾಡಿನ ಅರಸರು ಕಾಲಕಾಲಕ್ಕೆ ವಿಸ್ತರಿಸಿದ ಕರ್ನಾಟಕದ ಪ್ರಭುತ್ವವನ್ನು ಕೊನೆಯದಾಗಿ ತುಂಡರಿಸಿದ್ದು ಬ್ರಿಟಿಷರು. ವಿಜಯನಗರ ಪತನದ ನಂತರ ಬಂದ ಮುಸ್ಲಿಂ ಅರಸು ಮನೆತನಗಳು ಸ್ಥಳೀಯ ಕನ್ನಡ ಭಾಷೆಯ ಜೊತೆ ತಮ್ಮ ಭಾಷೆಗಳನ್ನೂ ಆಡಳಿತ ಭಾಷೆಯ ಭಾಗವಾಗಿಸಿದವು, ರಾಜ್ಯದ ಗಡಿಯನ್ನು ವಿಸ್ತರಿಸಿದ್ದವು. ಹೈದರಾಲಿಯ ಕಾಲದಲ್ಲಿ ೮೦,೦೦೦ ಚ.ಮೈಲಿ ವಿಸ್ತಾರ ಪಡೆದಿತ್ತು. ಟಿಪ್ಪು ಸುಲ್ತಾನನ ಕೊನೆಯ ದಿನದವರೆಗೂ ಕರ್ನಾಟಕ ಈಗಿರುವ ಗಡಿಗಿಂತಲೂ ಚಾಲುಕ್ಯ, ವಿಜಯನಗರ, ಆದಿಲ್ ಷಾಹಿಗಳ ಕಾಲದಂತೆ ಅಪಾರ ವಿಸ್ತಾರವಾದ ಪ್ರದೇಶವನ್ನು ಹೊಂದಿತ್ತು. ೧೭೯೯ರಲ್ಲಿ ಟಿಪ್ಪು ಸುಲ್ತಾನನ ಸೋಲು ಕೇವಲ ಒಬ್ಬ ಭಾರತೀಯ, ಕನ್ನಡದ ನೆಲದ ಅರಸನ ಸೋಲಾಗಿರಲಿಲ್ಲ. ಕನ್ನಡದ, ಕರ್ನಾಟಕದ ಅಖಂಡತೆಯ ವಿಸ್ತಾರದ, 'ಕಾವೇರಿಯಿಂದ ಗೋದಾವರಿಯ'ವರೆಗಿನ ನಾಡಿನ ಜನತೆಯ ಸೋಲೂ ಆಗಿತ್ತು. ಟಿಪ್ಪು ಸುಲ್ತಾನನನ್ನು ಸೋಲಿಸಿದ ಬ್ರಿಟಿಷರು ಮೊದಲು ಮಾಡಿದ ಕೆಲಸವೇ ಕನ್ನಡ ನಾಡನ್ನು ಹರಿದು ತುಂಡು ತುಂಡಾಗಿಸಿದ್ದು. ಸಾಮ್ರಾಜ್ಯಶಾಹಿ ವ್ಯವಸ್ಥೆಯ ತಂತ್ರದ ಭಾಗವಾಗಿ, ತಮ್ಮ ಆಡಳಿತದ ಅಡಿಯಲ್ಲಿ ಮೈಸೂರು ಪ್ರಾಂತ್ಯವನ್ನು ಮೈಸೂರು ಒಡೆಯರ ವಂಶಸ್ಥರಿಗೂ ಈಗಿನ ಹೈದರಾಬಾದ್ ಕರ್ನಾಟಕ ಪ್ರದೇಶವನ್ನು ಹೈದರಾಬಾದ್ ನಿಜಾಮನಿಗೂ ವಹಿಸಿದರು. ಬಳ್ಳಾರಿ ದಕ್ಷಿಣ ಕನ್ನಡ, ಕೊಳ್ಳೇಗಾಲ ಪ್ರದೇಶವನ್ನು ತಮ್ಮ ನೇರ ಆಡಳಿತದ ಮದ್ರಾಸ್ ಪ್ರಾಂತ್ಯಕ್ಕೆ ಸೇರಿಸಿದರು. ಕೊಡಗು ಪ್ರದೇಶವನ್ನು ಪ್ರತ್ಯೇಕ ರಾಜ್ಯ ಮಾಡಿ ನೇರ ಆಡಳಿತ ನಡೆಸಿದರು. ಉತ್ತರ ಕರ್ನಾಟಕವನ್ನು ಇಪ್ಪತ್ತೊಂದು ತುಕಡಿ ಮಾಡಿದರು. ಮುಂಬೈ ಪ್ರಾಂತ್ಯ, ಹೈದರಾಬಾದ ಸಂಸ್ಥಾನ, ಕೊಲ್ಲಾಪೂರ ಸಂಸ್ಥಾನ, ಮಿರಜ, ಜಮಖಂಡಿ, ಜತ್, ಅಕ್ಕಲಕೋಟ್, ಸೊಂಡೂರು, ರಾಮದುರ್ಗ, ಮುಧೋಳ, ಸವಣೂರು – ಹೀಗೆ ವಿವಿಧ ಪ್ರದೇಶದ ಸಂಸ್ಥಾನಿಕರಿಗೆ ಇಡೀ ಉತ್ತರ ಕರ್ನಾಟಕವನ್ನು ತಮ್ಮ ಪರವಾಗಿ ಆಡಳಿತ ಮಾಡಲು ವಹಿಸಿಕೊಟ್ಟರು. ಮುಂಬೈ ಪ್ರಾಂತ್ಯದ ಬಹುತೇಕ ಸಂಸ್ಥಾನಗಳು ಮರಾಠಾ ಸಂಸ್ಥಾನಿಕರ ಆಡಳಿತಕ್ಕೆ ಸೇರಿದ್ದವು. ಒಂದೆಡೆ ನಿಜಾಮ ಇನ್ನೊಂದೆಡೆ ಮರಾಠರ ಆಡಳಿತದಲ್ಲಿ ಕನ್ನಡ ಭಾಷೆ, ನೆಲ ಅನಾಥವಾಗಿತ್ತು. ನೇರವಾಗಿ ಕಂಪನಿ ಸರಕಾರದ ವ್ಯಾಪ್ತಿಗೆ ಒಳಪಟ್ಟ ಕೆಲವು ಪ್ರದೇಶದಲ್ಲಿ ಕನ್ನಡ ಸ್ವಲ್ಪ ಉಸಿರಾಡುತ್ತಿತ್ತು.




ತಿಂಗಳ ಪತ್ರಿಕೆ
**ಹೊಸತು**
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

ಸಂಪುಟ-೨೦ ಸಂಚಿಕೆ-೪ ನವೆಂಬರ್ ೨೦೧೯

■ **ಗೌರವ ಸಂಪಾದಕ**
ಜಿ. ರಾಮಕೃಷ್ಣ

■ **ಸಂಪಾದಕ-ಮುದ್ರಕ-ಪ್ರಕಾಶಕ**
ಸಿದ್ದನಗೌಡ ಪಾಟೀಲ

■ **ಸಹಸಂಪಾದಕರು**
ಎಂ. ಅಬ್ದುಲ್ ರೆಹಮಾನ್ ಪಾಷ
ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಎಸ್. ಸುರೇಂದ್ರ

■ **ವ್ಯವಸ್ಥಾಪಕ**
ಎ. ರಮೇಶ ಉಡುಪ

■ **ಮುದ್ರಣ**
**ಶ್ರೀ ವಿನಾಯಕ ಪ್ರಿಂಟರ್ಸ್**
೭೩೮/೧೧, ೭೦ನೇ ಅಡ್ಡರಸ್ತೆ
೫ನೇ ಬ್ಲಾಕ್, ರಾಜಾಜಿನಗರ
ಬೆಂಗಳೂರು – ೫೬೦ ೦೧೦

■ **ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧
ದೂರವಾಣಿ : ೨೨೧೬೯೧೧೧, ೨೨೧೬೯೧೧೨
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**

ಕ್ರಿ.ಶ. ೧೮೦೦ರಿಂದಲೇ ಮುಂಬೈ ಕರ್ನಾಟಕದಲ್ಲಿ ಕಂಪನಿ ಸರಕಾರ ಹಾಗೂ ಮರಾಠಾ ಸಂಸ್ಥಾನಿಕರ ವಿರುದ್ಧ ಕನ್ನಡಿಗರು ಧ್ವನಿ ಎತ್ತಿದ್ದಾರೆ. ೧೮೫೬ರಲ್ಲಿ ಧಾರವಾಡದಲ್ಲಿ ಕನ್ನಡ ಶಾಲೆಗಳನ್ನು ಆರಂಭಿಸಿದ್ದಾರೆ. ಕನ್ನಡ ಶಿಕ್ಷಕರನ್ನು ತಯಾರಿಸಲು ನಾರ್ಮಲ್ ಸ್ಕೂಲ್ ಆರಂಭಿಸಿದ್ದಾರೆ. ೧೮೯೦ರಲ್ಲಿ ಧಾರವಾಡದಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘ ನಂತರ ಬೆಂಗಳೂರಿನಲ್ಲಿ ಎಲ್ಲ ಭಾಗದ ಕನ್ನಡ ಸಾಹಿತಿಗಳು ಸೇರಿ ಸ್ಥಾಪಿಸಿದ ಕನ್ನಡ ಸಾಹಿತ್ಯ ಪರಿಷತ್ತು, ಕನ್ನಡ ಭಾಷಾ ಪ್ರದೇಶಗಳಲ್ಲಿ ಕನ್ನಡ ಸಂಘ ಸಂಸ್ಥೆಗಳು ಸ್ವಾತಂತ್ರ್ಯ ಹೋರಾಟದ ಜೊತೆಜೊತೆಗೆ ಕರ್ನಾಟಕ ಏಕೀಕರಣಕ್ಕಾಗಿ ಹೋರಾಟ ನಡೆಸಿದವು. ಕರ್ನಾಟಕ ಏಕೀಕರಣ ಪರಿಷತ್ತು, ಅಖಂಡ ಕರ್ನಾಟಕ ರಾಜ್ಯ ನಿರ್ಮಾಣ ಸಮಿತಿ ಹೀಗೆ ಹಲವಾರು ರಾಜ್ಯ ಮಟ್ಟದ ಸಂಘಟನೆಗಳು ನಿರಂತರ ಹೋರಾಟ ನಡೆಸಿದವು. ೧೯೨೦ರಲ್ಲಿ ಕಾಂಗ್ರೆಸ್ ಅಧಿವೇಶನದಲ್ಲಿ ಕರ್ನಾಟಕ ಏಕೀಕರಣದ ಪರವಾದ ನಿರ್ಣಯ ತೆಗೆದುಕೊಳ್ಳಲಾಯಿತು. ಭಾರತ ಕಮ್ಯುನಿಸ್ಟ್ ಪಕ್ಷ ೧೯೫೧ರ ತನ್ನ ರಾಜ್ಯ ಸಮ್ಮೇಳನದಲ್ಲಿ 'ಇಂದೇ ಆಗಲಿ ಒಂದೇ ಕರ್ನಾಟಕ' ಎಂಬ ಘೋಷಣೆಯೊಂದಿಗೆ ಕಿರುಹೊತ್ತಿಗೆ ಪ್ರಕಟಿಸಿತು. ಸಮಾಜವಾದಿ ಪಕ್ಷ ಏಕೀಕರಣ ಪರ ನಿರ್ಣಯ ಮಾಡಿತು. ಹೀಗೆ ಸ್ವತಂತ್ರ ಪೂರ್ವ ಸ್ವಾತಂತ್ರ್ಯಾನಂತರವೂ ತೀವ್ರ ಹೋರಾಟಗಳು ನಡೆದವು. ಆಂಧ್ರ, ಕರ್ನಾಟಕ, ಮಹಾರಾಷ್ಟ್ರ ಮುಂತಾದ ಕಡೆ ನಡೆದ ಭಾಷಾವಾರು ಪ್ರಾಂತ್ಯದ ಹೋರಾಟಕ್ಕೆ ಕೊನೆಗೂ ಮಣಿದ ಸ್ವತಂತ್ರ ಭಾರತದ ಕೇಂದ್ರ ಸರಕಾರ ೧೯೪೮ರಲ್ಲಿ ತಾತ್ವಿಕವಾಗಿ ಒಪ್ಪಿತು. ಆದರೆ ಧಾರ್ ಸಮಿತಿ, ನೆಹರೂ ಪಟೇಲ್ ಪಟ್ಟಾಭಿ ಸಮಿತಿ, ಕೇಳ್ಕರ್ ಸಮಿತಿ, ವಾಂಛೂ ಸಮಿತಿ, ಮಿಶ್ರಾ ಸಮಿತಿ, ಅಂತಿಮವಾಗಿ ೧೯೫೩ರಲ್ಲಿ ಫಜಲ್ ಅಲಿಯವರ ನೇತೃತ್ವದ ರಾಜ್ಯ ಪುನರ್ ವಿಂಗಡನಾ ಆಯೋಗ ರಚನೆಯಾಗಿ ಏಕೀಕರಣದ ಕನಸು ನನಸಾಯಿತು. ಭಾಷಾವಾರು ಪ್ರಾಂತ್ಯ ರಚನೆಗಾಗಿ ನಡೆದ ಹೋರಾಟಗಳ ಇತಿಹಾಸ ಸ್ವಾತಂತ್ರ್ಯ ಹೋರಾಟದಷ್ಟೇ ದೀರ್ಘ, ಸಮರಶೀಲವಾಗಿತ್ತು. ಇದಕ್ಕಾಗಿ ಆಂಧ್ರದಲ್ಲಿ ಉಪವಾಸ ಮಾಡಿದ ಪೊಟ್ಟಿ ಶ್ರೀರಾಮುಲು ಸಾವು, ಕರ್ನಾಟಕದ ಬಳ್ಳಾರಿಯಲ್ಲಿ ರಮಜಾನ್ ಸಾಬ ಎಂಬವರ ಸಾವು, ಹುಬ್ಬಳ್ಳಿಯಲ್ಲಿ ಅದರಗುಂಚಿ ಶಂಕರಗೌಡರ ಉಪವಾಸ, ೨೫೦೦೦ ಜನರಿಂದ ಕಾಂಗ್ರೆಸ್ ಅಧಿವೇಶನದ ಮುತ್ತಿಗೆ, ಲಾಟಿ ಚಾರ್ಜ್, ಬಂಧನ, ಏನೆಲ್ಲಾ ನಡೆದವು. ರಾಜ್ಯದಲ್ಲಿ, ಪಾರ್ಲಿಮೆಂಟ್‌ನಲ್ಲಿ ನಿರಂತರ ಹೋರಾಟ ಹೀಗೆ ಹರಿದು ಹಂಚಿಹೋಗಿದ್ದ ಕನ್ನಡ ಪ್ರದೇಶ, ಕನ್ನಡಿಗರ ಏಕತೆಗಾಗಿ ಏಕೀಕರಣಕ್ಕಾಗಿ ನಿರಂತರ ಹೋರಾಟ ನಡೆದಿವೆ. ಈ ಮಧ್ಯೆ ಎರಡು ಕರ್ನಾಟಕ, ನಾಲ್ಕು ಕರ್ನಾಟಕ ಸ್ಥಾಪನೆಯ ಪ್ರಸ್ತಾವನೆಗಳೂ ಬಂದು ಹೋದವು. ಅಂತಿಮವಾಗಿ ೧೯೫೬ ನವೆಂಬರ್ ೧ರಂದು ಏಕೀಕರಣಗೊಂಡ ಮೈಸೂರು ರಾಜ್ಯ ಘೋಷಣೆಯಾಯಿತು. ಈ ಮೈಸೂರು ರಾಜ್ಯಕ್ಕೆ ಕರ್ನಾಟಕ ಎಂದು ನಾಮಕರಣ ಮಾಡಲು ೧.೧೧.೧೯೭೩ರವರೆಗೂ ಕಾಯಬೇಕಾಯಿತು.

ಇಂದು ನಮ್ಮ ಕಣ್ಣೆದುರಿಗಿರುವ ಕರ್ನಾಟಕ ರಾಜ್ಯ ಉತ್ತರದಿಂದ ದಕ್ಷಿಣಕ್ಕೆ ಸುಮಾರು ೭೦೦ ಕಿ.ಮೀ. ಪೂರ್ವದಿಂದ ಪಶ್ಚಿಮಕ್ಕೆ ೪೦೦ ಕಿ.ಮೀ.ನಷ್ಟು ವಿಸ್ತಾರವನ್ನು ಹೊಂದಿದೆ. ಒಟ್ಟು ೭೪,೧೨೨ ಚ.ಮೈಲಿಯ ಭೌಗೋಲಿಕ ಪ್ರದೇಶವನ್ನು ಹೊಂದಿರುವ ಕರ್ನಾಟಕ ದೇಶದ ಎಂಟನೇ ದೊಡ್ಡ ರಾಜ್ಯ. ಏಕೀಕರಣ ಸಂದರ್ಭದಲ್ಲಿ ಕರ್ನಾಟಕದ ಜನಸಂಖ್ಯೆ ೧೯೫೧ರ ಜನಗಣತಿಯ ಪ್ರಕಾರ ೧೯,೪೦೧,೯೫೬. ಏಕೀಕರಣದ ನಂತರ ನಡೆದ ೧೯೬೧ರ ಜನಗಣತಿಯ ಪ್ರಕಾರ ಕರ್ನಾಟಕದ ಒಟ್ಟು ಜನಸಂಖ್ಯೆ ೨೩,೫೮೬,೭೭೨. ಇಂದಿನ ಅಂದರೆ, ೨೦೧೧ರ ಜನಗಣತಿಯ ಪ್ರಕಾರ ೬೧,೦೯೫,೨೯೭. ಇನ್ನೆರಡು ವರ್ಷ ಕಳೆದರೆ ಅಂದರೆ, ಮುಂದಿನ ಜನಗಣತಿಯ ವೇಳೆಗೆ ಕರ್ನಾಟಕದ ಜನಸಂಖ್ಯೆ ಏಳು ಕೋಟಿ ದಾಟುತ್ತದೆ. ಏಕೀಕರಣಗೊಂಡ ಕರ್ನಾಟಕ ಭೌಗೋಲಿಕವಾಗಿ ವೈವಿಧ್ಯಮಯವಾದ ಅಪಾರ ಸಂಪತ್ತನ್ನು ಹೊಂದಿದೆ. ಮಲೆನಾಡು, ಬಯಲುಸೀಮೆ, ಕರಾವಳಿ, ಅರಣ್ಯ ಪ್ರದೇಶ, ರಾಜ್ಯದ ಉದ್ದಗಲಕ್ಕೂ ಹರಿವ ನದಿಗಳು, ಚಿನ್ನ, ಉಕ್ಕು, ಗ್ರಾನೈಟ್, ಸಿಮೆಂಟ್, ಯುರೇನಿಯಂನಂಥ ಅಪಾರ ಖನಿಜ ಸಂಪತ್ತಿನ ಗಣಿಗಳು. ಕಾಫೀ, ಟೀ, ರಬ್ಬರ್, ಅಡಿಕೆ, ತೆಂಗು, ಕಬ್ಬು, ಹತ್ತಿ, ಜೋಳ, ಗೋದಿ, ರಾಗಿ, ದ್ವಿದಳ ಧಾನ್ಯಗಳು, ಎಣ್ಣೆ ಕಾಳುಗಳು, ನೂರಾರು ರೀತಿಯ ತರಕಾರಿ ಇಂಥ ಹಲವಾರು ವಾಣಿಜ್ಯ, ಆಹಾರ ಧಾನ್ಯ ಬೆಳೆವ ಫಲವತ್ತಾದ ಭೂಮಿಯನ್ನು ಹೊಂದಿದ ಕರ್ನಾಟಕ ಆರು ದಶಕಗಳ ನಂತರ ಸಾಧಿಸಬೇಕಾದಷ್ಟು ಅಭಿವೃದ್ಧಿಯನ್ನು ಸಾಧಿಸಿದೆಯೇ? ಕರ್ನಾಟಕ ಏಕೀಕರಣದ ಸಂದರ್ಭದಲ್ಲಿ ಯೋಚಿಸಬೇಕಾದ ಸಂಗತಿ.

ಖಂಡಿತ ಕರ್ನಾಟಕ ಸಾಕಷ್ಟು ಅಭಿವೃದ್ಧಿಯನ್ನು ಹೊಂದಿದೆ. ಆದರೆ ನಿರೀಕ್ಷಿಸಿದಷ್ಟಲ್ಲ. ಕಳೆದ ಎರಡು ದಶಕಗಳಿಂದ ಮತ್ತೆ ಪ್ರತ್ಯೇಕ ರಾಜ್ಯದ ಕೂಗು ಕೇಳುತ್ತಿದೆ. ಇನ್ನೂ ಹಳೇಮೈಸೂರು, ಮುಂಬೈ ಕರ್ನಾಟಕ, ಹೈದರಾಬಾದ್ ಕರ್ನಾಟಕ, ಕೊಡಗು ಪ್ರದೇಶಗಳ ಜನತೆ ಒಂದು ಎಂಬ ಭಾವ ಸಂಪೂರ್ಣವಾಗಿ ಆಗಿಲ್ಲ. ಪ್ರಾದೇಶಿಕ ಅಸಮಾನತೆ ಅದಕ್ಕೆ ಮುಖ್ಯ ಕಾರಣ. ಸ್ವಾತಂತ್ರ್ಯಪೂರ್ವದಲ್ಲಿ ಬ್ರಿಟಿಷರ ಜೊತೆಗಿದ್ದ ಮೈಸೂರು ಸಂಸ್ಥಾನ ಶಿಕ್ಷಣ, ಕೃಷಿ, ನೀರಾವರಿ, ಉದ್ದಿಮೆ ಹಲವಾರು ಕ್ಷೇತ್ರಗಳಲ್ಲಿ ಮುಂದುವರೆದ ರಾಜ್ಯವಾಗಿತ್ತು. ಮೈಸೂರಿನ ಕೆಲವು ಅರಸರ ಆಡಳಿತವೂ ಅದಕ್ಕೆ ಕಾರಣವಾಗಿತ್ತು. ಆದರೆ ಉತ್ತರದ ಮುಂಬೈ ಪ್ರಾಂತ್ಯ, ಹೈದರಾಬಾದ್ ಕರ್ನಾಟಕ ಅಂಥ ಅವಕಾಶಗಳನ್ನು ಪಡೆದಿರಲಿಲ್ಲ. ಮುಂಬೈ ಕರ್ನಾಟಕ ಬಹುತೇಕ ಮರಾಠಾ ಸಂಸ್ಥಾನಿಕರ, ಈಸ್ಟ್ ಇಂಡಿಯಾ ಕಂಪನಿಗಳ ಆಡಳಿತದಲ್ಲಿ ಅಭಿವೃದ್ಧಿಯಿಂದ ವಂಚಿತವಾಗಿತ್ತು. ನೇರ ಬ್ರಿಟಿಷ್ ಅಧಿಕಾರದ ಅವಧಿಯಲ್ಲಿ ಆ ಭಾಗದಲ್ಲಿ ತೀವ್ರವಾದ ಸ್ವಾತಂತ್ರ್ಯ ಹೋರಾಟ ನಡೆಯಿತು. ಆ ಮಧ್ಯೆಯೂ ಹೈದರಾಬಾದ್ ಕರ್ನಾಟಕಕ್ಕೆ ಹೋಲಿಸಿದರೆ ಶಿಕ್ಷಣ, ಉದ್ದಿಮೆ, ಕೃಷಿ ಕ್ಷೇತ್ರದಲ್ಲಿ ಸ್ವಲ್ಪಮಟ್ಟಿನ ಸುಧಾರಣೆ ಆಗಿತ್ತು. ಆದರೆ ಮೈಸೂರು ಸಂಸ್ಥಾನದಷ್ಟು ಅಭಿವೃದ್ಧಿ ಆಗಿರಲಿಲ್ಲ. ಹೈದರಾಬಾದ್ ನಿಜಾಮನ ದುರಾಡಳಿತದಲ್ಲಿ ನಲುಗಿಹೋಗಿದ್ದ ಹೈದರಾಬಾದ್ ಕರ್ನಾಟಕ



ತಿಂಗಳ ಪತ್ರಿಕೆ
**ಹೊಸತು**
ನವಕರ್ನಾಟಕ ಪ್ರಕಾಶನ



**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ₹ ೨೫/- |
| ವಾರ್ಷಿಕ ಚಂದಾ | ₹ ೩೦೦/- |
| ಮೂರು ವರ್ಷಕ್ಕೆ | ₹ ೬೦೦/- |

**ನವಕರ್ನಾಟಕ ಶಾಖೆಗಳು**

ಕೆಂಪೇಗೌಡ ರಸ್ತೆ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೦೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೯೪೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

ಸಂಪೂರ್ಣವಾಗಿ ಅಭಿವೃದ್ಧಿಯಿಂದ ವಂಚಿತವಾಗಿತ್ತು. ಭೌಗೋಲಿಕವಾಗಿಯೂ ಆ ಪ್ರದೇಶ ಒಣಭೂಮಿ ಮತ್ತು ಬರಗಾಲ ಪೀಡಿತ ಪ್ರದೇಶ; ಶಿಕ್ಷಣ, ಕೃಷಿ, ಉದ್ದಿಮೆ, ಆರೋಗ್ಯ ಎಲ್ಲ ಕ್ಷೇತ್ರಗಳಲ್ಲಿಯೂ ಆ ಪ್ರದೇಶ ರಾಜ್ಯದ ಇತರ ಪ್ರದೇಶಗಳಿಗಿಂತ ಹಿಂದುಳಿದಿತ್ತು. ಆದರೆ ಈ ಎಲ್ಲ ವೈಪರೀತ್ಯಗಳನ್ನು ಕಳೆದ ೬೩ ವರ್ಷಗಳಲ್ಲಿ ಸರಿ ಮಾಡುವ ಅವಕಾಶ ಕರ್ನಾಟಕದ ಸರಕಾರಗಳಿಗಿತ್ತು. ಉತ್ತರ ಕರ್ನಾಟಕದ ಅಭಿವೃದ್ಧಿಗೆ ಪ್ರಯತ್ನಗಳೇ ನಡೆದಿಲ್ಲವೆಂದಲ್ಲ. ಆದರೆ ಆಡಳಿತಗಾರರ ಮುನ್ನೋಟ ಹಾಗೂ ಸಮಯಬದ್ಧಯೋಜನೆಗಳ ಕೊರತೆ, ಮಾಡಿದ ಅಭಿವೃದ್ಧಿ ಯೋಜನೆಗಳ ಅಸಮರ್ಪಕ ಜಾರಿ ಮತ್ತು ರಾಜಕಾರಣಿಗಳ, ಅಧಿಕಾರಿಗಳ ಭ್ರಷ್ಟಾಚಾರ ಇವೆಲ್ಲವೂ ಹಿಂದುಳಿಯುವಿಕೆಗೆ ಕಾರಣವಾಗುತ್ತವೆ. ಇದರ ಹೊಣೆಯನ್ನು ರಾಜ್ಯ ಹಾಗೂ ಕೇಂದ್ರ ಸರಕಾರ ಮತ್ತು ಆ ಹಿಂದುಳಿದ ಪ್ರದೇಶಗಳ ರಾಜಕಾರಣಿಗಳು, ಜನಪ್ರತಿನಿಧಿಗಳು ಹೊರಬೇಕಾಗುತ್ತದೆ.

ಏಕೀಕರಣೋತ್ತರ ಅಭಿವೃದ್ಧಿ ಯೋಜನೆಗಳ ವಿಶ್ಲೇಷಣೆ, ವಿಮರ್ಶೆ ಮಾಡಿದರೆ ಪ್ರಾದೇಶಿಕ ಅಸಮಾನತೆ ಇನ್ನೂ ಬೆಳೆಯುತ್ತಲೇ ಇದೆ. ಹಾಗಂತ ದಕ್ಷಿಣ ಕರ್ನಾಟಕದ ಎಲ್ಲ ಜಿಲ್ಲೆ, ತಾಲ್ಲೂಕುಗಳು ಸಂಪೂರ್ಣವಾಗಿ ಅಭಿವೃದ್ಧಿ ಹೊಂದಿ ಹಾಲು, ಜೇನಿನ ಹೊಳೆ ಹರಿಯುತ್ತಿದೆ ಎಂದಲ್ಲ. ಆಂತರಿಕವಾಗಿ ದಕ್ಷಿಣ ಭಾಗದಲ್ಲಿಯೂ ತುಲನಾತ್ಮಕವಾಗಿ ಪ್ರಾದೇಶಿಕ ಅಸಮಾನತೆ ಇದೆ. ಕರ್ನಾಟಕದ ಒಟ್ಟು ೧೭೫ ತಾಲ್ಲೂಕು (ಮುಂಚಿನ)ಗಳಲ್ಲಿ ಅತ್ಯಂತ ಹಿಂದುಳಿದ ತಾಲ್ಲೂಕುಗಳ ಸಂಖ್ಯೆ ಉತ್ತರ ಕರ್ನಾಟಕ (ಮುಂಬೈ – ಹೈದರಾಬಾದ್)ದಲ್ಲಿ ೨೯ ಇದ್ದರೆ ದಕ್ಷಿಣ ಕರ್ನಾಟಕದಲ್ಲಿ ೧೩ ಇದೆ. ಉದ್ಯೋಗಕ್ಕೆ ಸಂಬಂಧಿಸಿದಂತೆ ಒಟ್ಟು ಕೆಲಸಗಾರರಲ್ಲಿ ಕೈಗಾರಿಕಾ ಕೆಲಸಗಾರರ ಸಂಖ್ಯೆಯಲ್ಲಿ ಉತ್ತರ ಕರ್ನಾಟಕದಲ್ಲಿ ಉದ್ಯೋಗಗಳ ಸಂಖ್ಯೆ ಶೇ. ೩.೭ ಇದ್ದರೆ ದಕ್ಷಿಣ ಕರ್ನಾಟಕದಲ್ಲಿ ಶೇ. ೬.೯ ಇದೆ. ಸಾರ್ವಜನಿಕ ಸಂಘಟಿತ ವಲಯದಲ್ಲಿ ಉದ್ಯೋಗಗಳ ಸಂಖ್ಯೆ ಉತ್ತರ ಕರ್ನಾಟಕದಲ್ಲಿ ಶೇ. ೩೫ ಇದ್ದರೆ ದಕ್ಷಿಣ ಕರ್ನಾಟಕದಲ್ಲಿ ಶೇ. ೬೫ ಇದೆ. ಸಂಘಟಿತ ಖಾಸಗಿವಲಯದಲ್ಲಿನ ಉದ್ಯೋಗದಲ್ಲಿ ಉತ್ತರದ ಪಾಲು ಶೇ. ೧೮, ದಕ್ಷಿಣದ ಪಾಲು ಶೇ. ೮೨. ಹೀಗೆ ಹಲವಾರು ವಿಷಯಗಳಲ್ಲಿ ಈ ಉತ್ತರ ದಕ್ಷಿಣದ ತಾರತಮ್ಯ ಬೆಳೆಯುತ್ತಲೇ ಇದೆ. ದೇಶಕ್ಕೇ ಚಿನ್ನ ಕೊಡುವ ರಾಯಚೂರು ಜಿಲ್ಲೆ ಆರೋಗ್ಯ ಕ್ಷೇತ್ರದಲ್ಲಿ ಚಿಂತಾಜನಕಸ್ಥಿತಿಯಲ್ಲಿದೆ. ಹೀಗೆ ಬಹುತೇಕ ಕ್ಷೇತ್ರಗಳಲ್ಲಿ ಅಸಮಾನತೆ ಇರುವಾಗಲೇ ಇಂದಿನ ಜಾಗತೀಕರಣ ನೀತಿಗಳು ಜನರನ್ನು ಇನ್ನೂ ಆತಂಕಕ್ಕೀಡು ಮಾಡುತ್ತಿವೆ. ಕೇಂದ್ರ ರಾಜ್ಯ ಸರಕಾರಗಳು ಇದನ್ನು ಗಂಭೀರವಾಗಿ ಪರಿಗಣಿಸದಿದ್ದರೆ ಮತ್ತೆ ಪ್ರತ್ಯೇಕತೆಯ ಧ್ವನಿ ತೀವ್ರವಾಗುತ್ತದೆ. ತ್ಯಾಗ ಬಲಿದಾನದಿಂದ ರೂಪಗೊಂಡ ಆಂಧ್ರ ಪ್ರದೇಶ ಮತ್ತೆ ಒಂದೇ ಭಾಷೆಯ ಎರಡು ರಾಜ್ಯಗಳಾಗಿ ವಿಂಗಡನೆಯಾಗಿದೆ. ಕರ್ನಾಟಕಕ್ಕೆ ಅದು ಮಾದರಿಯಾಗಬಾರದು.

ಶತಮಾನಗಳಿಂದ ಹೋರಾಡಿ ಒಂದಾದ ಕರ್ನಾಟಕ ಜಾತಿ, ಧರ್ಮ, ಪ್ರಾಂತ, ಪ್ರಾದೇಶಿಕ ಅಸಮಾನತೆ, ತಾರತಮ್ಯಗಳನ್ನು ನಿವಾರಿಸಿ ಒಂದಾಗಿಯೇ ಮುಂದುವರೆಯಬೇಕು. ಅಪಾರವಾದ, ಶಕ್ತಿಯುತವಾದ ಮಾನವ ಸಂಪನ್ಮೂಲ, ವೈವಿಧ್ಯಮಯ ನೈಸರ್ಗಿಕ ಸಂಪನ್ಮೂಲ, ಭಾಷೆ, ಪ್ರದೇಶದ ಸುದೀರ್ಘ ಇತಿಹಾಸ, ಸ್ವಾತಂತ್ರ್ಯ, ಏಕೀಕರಣ ಹೋರಾಟದ ಅನುಭವ ಹೊಂದಿದ ಕನ್ನಡನಾಡು – ಕರ್ನಾಟಕ ಭೌತಿಕವಾಗಿ, ಭಾವನಾತ್ಮಕವಾಗಿ ಒಂದಾಗಿ ಹಸಿವು, ಬಡತನ, ನಿರುದ್ಯೋಗ, ಅನಾರೋಗ್ಯಗಳಿಲ್ಲದ, ಸರ್ವತೋಮುಖ ಅಭಿವೃದ್ಧಿಯ, ಶಾಂತಿ – ಸಹಬಾಳ್ವೆಯ ನಾಡಾಗಿ ಬೆಳೆಯಬೇಕು. ಇದಕ್ಕೆ ನಾಡಿನ ಜನತೆ, ಜನಪ್ರತಿನಿಧಿಗಳು ಗಂಭೀರವಾಗಿ ತೊಡಗಿಕೊಳ್ಳಬೇಕು.

ಒಂದು ಹಚ್ಚ ಹಸಿರಿನ ಗದ್ದೆಯನ್ನು ,
ನಾಟಿ ನೆಡುವ ಗ್ರಾಮೀಣ ಹೆಣ್ಣನ್ನು ,
ಕೆಸರು ಹಚ್ಚಿದ ಕಾಲುಗಳನ್ನು ,
ಬಯಲ ಕಾಲುವೆ ಹೊತ್ತ ನೀರನ್ನು ,
ನೀರಿಗಾಗಿ ನಡೆದ ಉಪವಾಸ ಸತ್ಯಾಗ್ರಹವನ್ನು ,
ಗದ್ದೆಯ ಬದಿಯ ಮೇಲೆ ಕುಳಿತು ಸೇವಿಸಿದ
ಮಧ್ಯಾಹ್ನದ ಭೋಜನವನ್ನು ,
ಲಂಗೋಟಿಯ ಸಹಿತ
ಭೂಮಿ ಉಳಿದ ವ್ಯವಸಾಯಿಯನ್ನ ,
ಭಯವನ್ನುಂಟುಮಾಡಿದ ಹಾವನ್ನು ,
ಅದನ್ನು ಸಾವಕಾಶವಾಗಿ ಹಿಡಿದು
ಬುಟ್ಟಿಯಲ್ಲಿ ಹಾಕಿ ಕೊಂಡೊಯ್ದ
ಹಾವಾಡಿಗನನ್ನು ,
ಬಳೆ ಸದ್ದು ಮಾಡಿದ ಕರಗಳಲ್ಲಿ
ಮೀನು ಹಿಡಿದು ಬಂದ ಮಹಿಳೆಯನ್ನು ,
ಮುಳ್ಳಿನ ಮರದಲ್ಲಿ ತೂಗಿಕೊಂಡಿದ್ದ
ಜೋಳಿಗೆಯನ್ನು ,
ಪೈರಿಗೆ ಔಷಧ ಹೊಡೆಯುವವನ
ಅಪಸ್ವರದ ಕೂಗನ್ನು ,
ಗದ್ದೆಗಳ ಮಧ್ಯೆ ನೆಟ್ಟಗೆ ಸಾಗುತ್ತಿರುವ
ಹಳಿಗಳನ್ನು ,
ಹಳಿಗಳ ಮೇಲೆ ಯಾವಾಗೋ ಒಮ್ಮೆ
'ಧಡಕ್-ಧಡಕ್ ಅಂತ ಓಡಾಡುವ
ರೈಲು ಬಂಡಿಗಳನ್ನು ,
ಹೊತ್ತು ಹೊರಬರುವ
ಸುಗ್ಗಿಕಾಲದ ಎತ್ತಿನ ಗಾಡಿಗಳನ್ನು ,
ಮನೆಯ ಅಂಗಣದಲ್ಲಿ
ಗೂಡು ಕಟ್ಟಿದ್ದ ಗುಬ್ಬಚಿಯನ್ನು ,
ಇನ್ನು ಮನ್ನಾ ಮಾಡದ ರೈತರ ಸಾಲವನ್ನು ,
ಬಂದು ತಲುಪದ ಮಾನ್ಯವನ್ನು ,
ನೇಣಿಗೆ ಶರಣಾದ
ಪಕ್ಕದ ತೋಟದ ಮಂಜುನಾಥನ್ನ ,
ಸೊಮಾಲಿಯಾದಲ್ಲಿ
ಮಗುವನ್ನು ಸೀಳಿ
ತಿನ್ನೋಕೆ ಕಾದಿರುವ ಹದ್ದನ್ನು ,
ಬಯಲು ಭೂಮಿಗಳನ್ನು
ಸಂಹಾರ ಮಾಡಿದ ಕಟ್ಟಡಗಳನ್ನು
ದ್ವಿ ಚಕ್ರ ವಾಹನದ
ಹಿಂದಿನ ಗಾಲಿಯಲ್ಲಿ
ಸಿಗ್ಹಾಕಿಕೊಂಡೇ ಓಡಿ ಬರುವ
ಒಂದು ಒಣ ಹುಲ್ಲು
ನೆನಪಿಸುತ್ತದೆ.




**ಡಾ॥ ವಿ. ಪುಗಳೇಂದಿ**
ವಿವೇಕ್ ಮ್ಯಾನ್ಶನ್, ನಂ. ೪೬೭, ನಾಗಭೂಷಣ ಲೇಔಟ್
ವಿಜಯ ವಿಠ್ಠಲ ನಗರ, ಸಿರುಗುಪ್ಪ – ೫೮೩ ೧೨೧
ಬಳ್ಳಾರಿ ಜಿಲ್ಲೆ

(೩ನೇ ಪುಟದಿಂದ : ಈ ತಿಂಗಳು)

ದೇಶದ್ರೋಹದ ಆಪಾದನೆ ಹೊರಿಸಿದ್ದು ಈಗ ಹಳೆ ವಿಷಯ. ಖಾಸಗಿ ವಕೀಲನೊಬ್ಬನ ಆಪಾದನೆಯ ಮೇಲೆ ರಾಷ್ಟ್ರದ್ರೋಹದ ಆಪಾದನೆ ಹೊರಿಸುವುದು, ಎಫ್‌ಐಆರ್ ದಾಖಲಿಸುವುದು ಹೊಸ ವರಸೆ. ಬಿಹಾರ ಪೊಲೀಸರ ಈ ನಡವಳಿಕೆ ಖಂಡನಾರ್ಹ, ಈಚೆಗೆ ಉಲ್ಟಾ ಹೊಡೆದಿದ್ದಾಗ್ಯೂ. ಇದರ ಹಿಂದೆ ಯಾರ ಕೈವಾಡವಿದೆ ಎನ್ನುವ ಮೂಲ ತನಿಖೆಯಾಗಬೇಕಾಗಿದೆ. ಅಪವಾದ ಹೊರಿಸಿದವನ ಮೇಲೆ ಕ್ರಮಕೈಗೊಳ್ಳುವುದಕ್ಕಿಂತ...

ಲಿಂಚಿಂಗ್ ಎಂಬ ಸಮೂಹ ಸನ್ನಿ ಬಂದದ್ದೇ ಭಾಜಪ ಅತ್ಯಧಿಕ ಬಹುಮತದಿಂದ ಕೇಂದ್ರದಲ್ಲಿ ಅಧಿಕಾರ ವಹಿಸಿಕೊಂಡ ಮೇಲೆ. ಈಚೆಗೆ ಆರೆಸ್ಸೆಸ್ ಮುಖಂಡ ಮೋಹನ್ ಭಾಗವತ್ ಲಿಂಚಿಂಗ್ ಎನ್ನುವುದು ನಮ್ಮ ಸಂಸ್ಕೃತಿಯಲ್ಲಿ ಇಲ್ಲ ಎಂದು ವಿಜಯದಶಮಿ ದಿವಸ ಪ್ರಕಟಿಸಿದರೂ ಕೂಡ ಯಾರು ಇಂತಹ ಕೃತ್ಯಗಳನ್ನು ನಡೆಸುವವರು ಎಂಬುದು ನಮಗೆ ತಿಳಿದಿದೆ. ಈಚೆಗೆ ಬಿಹಾರದ ಮುಜರಫ್ ಠಾಣೆಯವರು ಖಾಸಗಿ ದೂರನ್ನು ಆಧರಿಸಿ ೪೯ ಮಂದಿ ಪ್ರತಿಷ್ಠಿತರ ಮೇಲೆ ಎಫ್‌ಐಆರ್ ದಾಖಲಿಸಿತು. ಈ ಪ್ರತಿಷ್ಠಿತರಲ್ಲಿ ಅಂಕಣಕಾರ ರಾಮಚಂದ್ರ ಗುಹಾ, ಖ್ಯಾತ ಚಿತ್ರ ನಿರ್ಮಾಪಕಿ ಅಪರ್ಣಾ ಸೇನ್, ಖ್ಯಾತ ನಿರ್ದೇಶಕ ಅಡೂರು ಗೋಪಾಲಕೃಷ್ಣ ಇವರುಗಳಿದ್ದಾರೆ. ಇವರು ಎಸಗಿದ ಅಪರಾಧವೆಂದರೆ ಹೆಚ್ಚುತ್ತಿರುವ ಲಿಂಚಿಂಗ್ ಪ್ರಕರಣಗಳ ಕುರಿತು ಕಳವಳ ವ್ಯಕ್ತಗೊಳಿಸಿ ಮೋದಿಗೆ ಪತ್ರ ಬರೆದದ್ದು. ರೊಮಿಲಾ ಥಾಪರ್, ನಾಸಿರುದ್ದೀನ್ ಷಾ, ಮಣಿರತ್ನಮ್ ಮೊದಲಾದ ನೂರಾರು ಖ್ಯಾತನಾಮರು ಕೃತ್ಯವನ್ನು ಖಂಡಿಸಿ ಹೇಳಿಕೆ ನೀಡಿದ ನಂತರವೇ ಬಿಹಾರದ ಪೊಲೀಸರು ಎಚ್ಚೆತ್ತುಕೊಂಡಿದ್ದು. ಪ್ರಕರಣದ ತನಿಖೆ ನಡೆದರೆ ಚೆನ್ನಾಗಿರುತ್ತೆ.

* * *

ಶೃಂಗಸಭೆಗಳು ತಮ್ಮ ಮುಖ್ಯತೆಯನ್ನು ಕಳೆದುಕೊಳ್ಳುತ್ತಿವೆಯೇ ಎಂಬ ಅನುಮಾನ ಬರತೊಡಗಿದೆ. ಎರಡನೇ ಮಹಾಯುದ್ಧದ ನಂತರ ಕಳೆದ ಶತಮಾನ ಉತ್ತರಾರ್ಧದಲ್ಲಿದ್ದ ಐತಿಹಾಸಿಕ ಮಹತ್ವ ಕಳೆದುಕೊಂಡಿದೆ ಅದು. ಈಗ ಶೃಂಗಸಭೆಗಳು ಮಾಮೂಲಾಗಿಬಿಟ್ಟಿವೆ: ಔಪಚಾರಿಕವಾಗಿರಲಿ ಇಲ್ಲವೆ ಅನೌಪಚಾರಿಕವಾಗಿರಲಿ. ಏನೇ ಆದರೂ ದೇಶಗಳ ಪ್ರಮುಖರ ಪರಸ್ಪರ ಭೇಟಿ ಎರಡು ದೇಶಗಳ ನಡುವಣ ಸಂಬಂಧಗಳನ್ನು ಭದ್ರಗೊಳಿಸುವುದು ಎನ್ನುವುದರಲ್ಲಿ ಸಂಶಯವಿಲ್ಲ. ಇತ್ತೀಚೆಗೆ ತಮಿಳುನಾಡಿನ ಮಾಮಲ್ಲಪುರಂ (ಮಹಾಬಲಿಪುರಂ) ನಲ್ಲಿ ಜರುಗಿದ ಅನೌಪಚಾರಿಕ ಭಾರತ–ಚೀನಾ ಶೃಂಗಸಭೆಯನ್ನು ಕುರಿತು ಭಾಜಪ ಅಬ್ಬರದ ಪ್ರಚಾರ ನಡೆಸಿದೆ. ಇದೊಂದು ಐತಿಹಾಸಿಕ ಸಂದರ್ಭ, ಎಲ್ಲ ಸಮಸ್ಯೆಗಳಿಗೂ ಪರಿಹಾರ ಸೂಚಕ ಎಂದು ಭಾಜಪ ಕೃಪಾಪೋಷಿತ ಮಾಧ್ಯಮಗಳಲ್ಲಿ ಪ್ರತಿಬಿಂಬಿಸಲಾಗುತ್ತಿದೆ.

ಸಮಸ್ಯೆಗಳು ಎರಡು ದೇಶಗಳ ಮಧ್ಯೆ ಬೇಕಾದಷ್ಟಿರುತ್ತವೆ. ಅವು ಚಿಟಿಕೆ ಹೊಡೆದಷ್ಟು ಸುಲಭವಾಗಿ ನಾಯಕರ ಮುಖಾಮುಖಿ ಭೇಟಿಯಿಂದ ಬಗೆಹರಿದುಬಿಡುತ್ತವೆ ಎನ್ನುವುದು ಸರಿಯಲ್ಲ. ಪ್ರಶ್ನೆಗಳು ಹಾಗೇ ಉಳಿದಿರುತ್ತವೆ. ಆದರೂ ಸಂಬಂಧಗಳಿಗೆ ಅಡ್ಡಿಯಾಗದು ಎನ್ನುವುದು ಸರಿ. ಹಾಗೆ ಭಾರತ–ಚೀನಾ ಸಂಬಂಧಗಳೂ ಕೂಡ ಸಾಕಷ್ಟು ಏರಿಳಿತಗಳನ್ನು ಕಂಡಿವೆ. ಗಡಿ ವಿವಾದದಿಂದ ಹಿಡಿದು ವಾಣಿಜ್ಯದವರೆಗೆ ನಾನಾ ಬಗೆಯ ಸಮಸ್ಯೆಗಳಿವೆ ಭಾರತ ಚೀಣಾಗಳ ಮಧ್ಯೆ. ಚೀಣಾದ ವುಹಾನ್‌ನಲ್ಲಿ ಕಳೆದ ವರ್ಷ ಇಂಥದೇ ಅನೌಪಚಾರಿಕ ಶೃಂಗಸಭೆ ಜರುಗಿತ್ತು. ಅನಂತರದ ಕಾಲದಲ್ಲಿ ಎರಡೂ ದೇಶಗಳಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ. ಹಾಂಗ್‌ಕಾಂಗ್‌ನಲ್ಲಿ ಚೀಣಾ ಪ್ರತಿರೋಧವನ್ನು ಎದುರಿಸುತ್ತಿದ್ದರೆ, ಭಾರತದಲ್ಲಿ ಕಾಶ್ಮೀರದ ಪರಿಸ್ಥಿತಿ ಬಿಗಡಾಯಿಸಿದೆ. ಇನ್ನೂ ಗಡಿ ವಿವಾದ, ವಾಣಿಜ್ಯ ವಹಿವಾಟುಗಳಲ್ಲಿ ವ್ಯತ್ಯಾಸ – ಹೀಗೆ ಹಲವು ಹದಿನೆಂಟು ಪ್ರಶ್ನೆಗಳು ಇವೆ. ಇವೆಲ್ಲವನ್ನೂ ಬದಿಗಿರಿಸಿ ಭಾರತ – ಚೀಣಾ ಸಂಬಂಧಗಳನ್ನು ಬಲಪಡಿಸುವುದೇ ಮಾಮಲ್ಲಪುರಂ ಶೃಂಗಸಭೆಯ ಉದ್ದೇಶ? ಅದು ತಕ್ಕಮಟ್ಟಿಗೆ ಆಗಿದೆ ಎನ್ನಬಹುದು. ಯಾವತ್ತಿನಂತೆ ಹೋದ ಕಡೆಯಲ್ಲೆಲ್ಲ ದಿರಿಸು ಬದಲಿಸುವುದರಲ್ಲಿ ಚಾಣಾಕ್ಷರಾದ ಪ್ರಧಾನಿ ಮೋದಿ ತಮಿಳುನಾಡಿನ ವೇಷ್ಟಿ, ಅಂಗವಸ್ತ್ರ, ಅಂಗಿಯನ್ನು ಧರಿಸಿ ಮೆರೆದದ್ದು ಮೋಜಿನ ವಿಷಯ. ಹಾಗೆಯೇ ಪ್ರಧಾನಿ ಮೋದಿ ಕಡಲತೀರದಲ್ಲಿ ಬಿದ್ದಿದ್ದ ಕಸ ಆಯುತ್ತಿರುವುದೂ ದೃಶ್ಯ ಮಾಧ್ಯಮಗಳಲ್ಲಿ ಹರಿದಾಡಿತು. ಎರಡೂ ದೇಶಗಳ ನಡುವಿನ ಸಮಸ್ಯೆಗಳು ಹಾಗೇ ಉಳಿದರೂ ಶೃಂಗಸಭೆ ಮಾತ್ರ ಬಾಜಾಭಜಂತ್ರಿಯಿಂದ ನಡೆಯಿತು.

* * *

ಶಿವಕುಮಾರ ಜೈಲು ಸೇರಿ ಕುಟುಂಬದವರ ಬೆನ್ನಟ್ಟಿದ ಮೇಲೆ ಈಗ ಪರಮೇಶ್ವರನ ಸರದಿ. ಇ.ಡಿ. ಕಿರುಕುಳ ಸಹಿಸಲಾರದೆ ಪರಮೇಶ್ವರರ ಆಪ್ತ ಕಾರ್ಯದರ್ಶಿಯ ಆತ್ಮಹತ್ಯೆ ಪ್ರಕರಣ ಬೇರೆ. ಮುಂದಿನ ಕುರಿ ಯಾರು ನೋಡಬೇಕು. ಅಂತೂ ವ್ಯವಸ್ಥಿತವಾಗಿ ನಡೆಯುತ್ತಿದೆ ಐಟಿ ಅಧಿಕಾರಿಗಳ ದಾಳಿ ಕಾಂಗ್ರೆಸ್ ನಾಯಕರುಗಳ ಮೇಲೆ. ಈ ಮಧ್ಯೆ ಪೈಪೋಟಿಯ ನಡುವೆಯೂ ಮಾಜಿ ಮುಖ್ಯಮಂತ್ರಿ ಸಿದ್ದರಾಮಯ್ಯ ವಿರೋಧ ಪಕ್ಷದ ನಾಯಕ. ಹೈಕಮಾಂಡ್ ಎನ್ನುವ ಕಾಂಗ್ರೆಸ್ಸಿನ ನಿರ್ಧಾರ. ಮುಂದೆ ನಡೆಯುವ ಉಪ ಚುನಾವಣೆಗಳಲ್ಲಿ ಗೊತ್ತಾಗುತ್ತೆ ಎಲ್ಲ.

ಉಪಚುನಾವಣೆಗಳ ಫಲಿತಾಂಶ ಯಡಿಯೂರಪ್ಪ ಸರಕಾರ ಭವಿಷ್ಯವನ್ನು ನಿರ್ಧರಿಸಲಿದೆ. 'ಆಪರೇಷನ್ ಸಕ್ಸೆಸ್ ಪೇಷೆಂಟ್ ಡೈಡ್' ಎನ್ನುವಂತಿದೆ ಪರಿಸ್ಥಿತಿ ರಾಜ್ಯದಲ್ಲಿ ಯಡಿಯೂರಪ್ಪಗೆ. ಮೂರು ಮೂರು ಉಪಮುಖ್ಯಮಂತ್ರಿಗಳ ಹೊತ್ತಿರುವ ಮುಖ್ಯಮಂತ್ರಿಗೆ ನಾಲ್ಕನೆಯ ಸ್ಥಾನಕ್ಕೆ ವಾಲ್ಮೀಕಿ ಜನಾಂಗದ ನಾಯಕ ಶ್ರೀರಾಮುಲು ಪಟ್ಟು ಹಿಡಿದಿದ್ದಾರೆ. ಭಾಜಪದ ಹೈಕಮಾಂಡ್ ಅಮಿತ್ ಷಾ – ನರೇಂದ್ರ ಮೋದಿ ಅವಕೃಪೆಗೆ ಒಳಗಾಗಿರುವ ಯಡಿಯೂರಪ್ಪ ಭವಿಷ್ಯವನ್ನು ತೀರ್ಮಾನಿಸುವವರೂ ಈ ದ್ವಯರೇ. ಯಾವುದಕ್ಕೂ ವರ್ಷಾಂತ್ಯದವರೆಗೆ ಮುಖ್ಯಮಂತ್ರಿ ಸೇಫ್. ಈ ಮಧ್ಯೆ ಭಾಜಪದ ಒಳಗೊಳಗೇ ಅತೃಪ್ತಿಯ ಹೊಗೆಯಾಡುತ್ತಿದ್ದು ಯಾವಾಗ ಉರಿದು ಹೊರಗೆ ಬೀಳುತ್ತದೋ! ಕರ್ನಾಟಕದ ಭಾಜಪದ ಸೂತ್ರಧಾರಿ ನಳಿನಕುಮಾರ ಕಟೀಲ ಮತ್ತು ಮುಖ್ಯಮಂತ್ರಿ ಯಡಿಯೂರಪ್ಪ ಮಧ್ಯೆ ಶೀತಲಸಮರ ಜೋರಾಗಿಯೇ ನಡೆದಿದೆ. ಯಡಿಯೂರಪ್ಪಗೆ ಕಡಿವಾಣ ಹಾಕಲೆಂದೇ ಹೈಕಮಾಂಡ್ ಹೊರಿಸಿರುವ ವ್ಯಕ್ತಿ ಮಂಗಳೂರಿನ ಈ ಕಟೀಲ. ಯಡಿಯೂರಪ್ಪ ನೇಮಕ ಮಾಡಿದ್ದವರನ್ನೆಲ್ಲ ಕಿತ್ತು ಹಾಕಿ ಹೊಸಬರನ್ನು ನೇಮಕ ಮಾಡಿಕೊಂಡಿದ್ದಾರೆ ಕಟೀಲ. ಇನ್ನು ಏನೇನು ಕಾಟ ಕೊಡುವರೋ ಕಟೀಲ. ಈಗಲೇ ಮೂವತ್ತು ಜಿಲ್ಲೆಗಳನ್ನು ಹೊಂದಿದೆ ಕರ್ನಾಟಕ ರಾಜ್ಯ. ಬಳ್ಳಾರಿಯನ್ನು ವಿಭಜನೆ ಮಾಡಿ ವಿಜಯನಗರ ಜಿಲ್ಲೆ ಸ್ಥಾಪಿಸುವ ಸೂಚನೆ ನೀಡಿ ಮುಖ್ಯಮಂತ್ರಿ 'ಪೆಂಡೋರಾ ಪೆಟ್ಟಿಗೆ' ತೆರೆದಿದ್ದಾರೆ. ಶುರುವಾಗಿದೆ ಹೊಸ ಜಿಲ್ಲೆಗಳಿಗೆ ಬೇಡಿಕೆ. ಹುಣಸೂರು ಸೇರಿ ಮತ್ತಿನ್ನೇನೋ ಬೇಡಿಕೆ ಬರತೊಡಗಿದೆ. ನಲವತ್ತಾದರೂ ಆಗಬಹುದೇನೋ! ಒಂಬತ್ತರಿಂದ ಮೂವತ್ತಕ್ಕೇರಿದ ಮೇಲೆ ಏನಾದರೂ ಚಿಂತೆ ಇಲ್ಲ. ಅಂದ ಹಾಗೆ ಪ್ರವಾಹ ಪರಿಹಾರಕ್ಕೆ ಯಡಿಯೂರಪ್ಪ ಕೇಂದ್ರದಿಂದ ಹಣ ಪಡೆಯಲು ನಡೆಸಿದ ಎಲ್ಲ ಪ್ರಯತ್ನಗಳೂ ವ್ಯರ್ಥ. ಮೋದಿ ಸರಕಾರ ಕರ್ನಾಟಕಕ್ಕೆ ನೀಡಿದ್ದು ಪುಡಿಕಾಸು ಕೇವಲ ೧೨೦೦ ಕೋಟಿ.

* * *

ಬೆಂಗಳೂರು ನಗರಪಾಲಿಕೆಯ ಮಹಾಪೌರ ಅಥವಾ ಮೇಯರ್ ಆಗಿ ಶಾಂತಿನಗರದ ಸದಸ್ಯ ಶ್ರೀ. ಎಂ. ಗೌತಮ್ ಕುಮಾರ್ ಆಯ್ಕೆಯಾಗಿದ್ದಾರೆ. ಆತನ ಕುಟುಂಬವು ದೇಶದ ಬೇರೊಂದು ರಾಜ್ಯದ ಮೂಲದ್ದು; ಬೆಂಗಳೂರಿನಲ್ಲಿ ನೆಲೆಸಿ ಬೆಂಗಳೂರಿಗರಾಗಿರಬಹುದು. ತನ್ನ ಪಕ್ಷದಲ್ಲಿ ಮುತುವರ್ಜಿಯಿಂದ ಕೆಲಸ ಮಾಡಿರಲಿಕ್ಕೆ ಸಾಕು. ಅಂದರೆ, ಕಂಟ್ರಾಕ್ಟ್ ಮುಂತಾದ ವ್ಯವಹಾರಗಳಲ್ಲಿ ಮುಂಚೂಣಿ ಪಾತ್ರ ವಹಿಸಿದ್ದಿರಬೇಕು. ವಲಸಿಗರು ಬೆಂಗಳೂರಿನಲ್ಲಿ ಚೆನ್ನಾಗಿ ವರ್ಧಿಸುತ್ತಿದ್ದಾರೆನ್ನಲು ಇಂತಹ ಕುಟುಂಬಗಳು ಸಾಕ್ಷಿಯಾಗಿವೆ. ಕರ್ನಾಟಕವನ್ನು ಕ್ರಿಕೆಟ್‌ನಲ್ಲಿ ಪ್ರತಿನಿಧಿಸುವ ಅಗರ್ವಾಲ್ ಎಂಬ ಯುವಕನೂ ಇದಕ್ಕೊಂದು ಪುರಾವೆ. ಮಹಾಪೌರರಾಗಿ ಮೂಲತಃ ಬೆಂಗಳೂರಿನವರಲ್ಲದ ವ್ಯಕ್ತಿಯೊಬ್ಬ ಆಯ್ಕೆಯಾಗಬಾರದೆಂಬ ನಿಯಮವೇನೂ ಇಲ್ಲ, ಆದರೆ ಈತನ ಆಯ್ಕೆಯು ದೆಹಲಿಯಲ್ಲಿ ಪಕ್ಷದ ಅಧ್ಯಕ್ಷ ಅಮಿತ್ ಶಾ ಸ್ವತಃ ಮಾಡಿದ್ದೆಂದು ಜಗಜ್ಜಾಹೀರಾಗಿದೆ. ಮುಖ್ಯಮಂತ್ರಿಯನ್ನು ಆಯ್ಕೆಮಾಡುವಂತೆ ಈಗ ಮಹಾಪೌರರನ್ನೂ ದೆಹಲಿಯಲ್ಲಿ ಆಯ್ಕೆ ಮಾಡುತ್ತಿದ್ದಾರೆಂಬುದು ಶೋಚನೀಯ. ಇನ್ನು ಮುಂದೆ ಬೇರೆ ನಗರಪಾಲಿಕೆಗಳಿಗೂ ದೆಹಲಿಯಲ್ಲಿ ಆಯ್ಕೆ ನಡೆಯುವುದರ ಮುನ್ಸೂಚನೆ ಇದು. ವಿಕೇಂದ್ರೀಕರಣದ

ಸೂತ್ರವನ್ನು ಅಳವಡಿಸಿಕೊಳ್ಳುವ ದಿಕ್ಕಿನಲ್ಲಿ ನಡೆಯ ಬೇಕಾದ್ದು ಯಾವುದೇ ಪ್ರಜಾಪ್ರಭುತ್ವದ ಮೂಲ ಲಕ್ಷಣ, ಆದರೆ ನಮ್ಮಲ್ಲಿ ಅದು ವಿರುದ್ಧ ದಿಕ್ಕಿನಲ್ಲಿ ನಡೆಯುತ್ತಿರುವುದು ವ್ಯವಸ್ಥೆಯ ಅಣಕವೇ ಸರಿ. ಕರ್ನಾಟಕ ಮೂಲದವರಲ್ಲದ ಮುಖ್ಯಮಂತ್ರಿಯನ್ನು ಪಡೆಯುವ ಸೌಭಾಗ್ಯವೂ ಕರ್ನಾಟಕಕ್ಕೆ ಇದೆಯೇನೋ ತಿಳಿದವರಾರು. ಬಹುಹಿಂದೆ ಮಧ್ಯಪ್ರದೇಶದ ಮುಖ್ಯಮಂತ್ರಿಯಾಗಿ ಕೈಲಾಸನಾಥ ಕಟ್ಜು ಎಂಬುವವರಿದ್ದರು. ಅವರು ಕಾಶ್ಮೀರ ಮೂಲದವರು, ಸರ್ವೋಚ್ಚ ನ್ಯಾಯಾಲಯದ ನಿವೃತ್ತ ನ್ಯಾಯಮೂರ್ತಿ ಶ್ರೀ. ಮಾರ್ಕಂಡೇಯ ಕಟ್ಜು ಅವರ ತಂದೆ. ಕರ್ನಾಟಕದಲ್ಲಿ ಅಂತಹ ಸನ್ನಿವೇಶವು ಸ್ವಾಗತಾರ್ಹ ಎಂದು ಹೇಳಲಾಗುವುದಿಲ್ಲ. ಬೆಂಗಳೂರಿನ ಹಲವು ಪ್ರದೇಶಗಳಲ್ಲಿ ಭಾರಿ ಜೈನಮಂದಿರಗಳು ತಲೆಯೆತ್ತಿವೆ, ಅಲ್ಲಿ ಪೂಜೆ ಸಲ್ಲಿಸುವ ಮಾರ್ವಾಡಿಗಳ ಸಂಖ್ಯೆ ಗಮನಾರ್ಹವಾಗಿ ಹೆಚ್ಚಿದೆ, ಇಡೀ ಬಡಾವಣೆಗಳು ಅವರದಾಗುತ್ತಿವೆ. ಹೀಗಿರುವಾಗ ಅವರ ಮಧ್ಯದಿಂದ ಒಬ್ಬ ಮುಖ್ಯಮಂತ್ರಿ ಮೂಡಿಬಂದರೆ ಅಚ್ಚರಿಯೇನೂ ಇರುವುದಿಲ್ಲ. ಜೈ ಕನ್ನಡ ಮಾತೆ!

✶ ✶ ✶

ಮಾಜಿ ಪ್ರಧಾನಿ ಶ್ರೀ. ಎಚ್. ಡಿ. ದೇವೇಗೌಡರು ಹೊಸ ರಾಜಕೀಯ ಪ್ರಜ್ಞೆಯನ್ನು ಬೆಳೆಸಿಕೊಂಡಿರುವಂತೆ ತೋರುತ್ತಿದೆ. ಅದರಿಂದ ನಮ್ಮ ರಾಜ್ಯಕ್ಕೆ ವಿಶೇಷ ಸೌಲಭ್ಯಗಳೇನೂ ದೊರೆಯುವ ಸಾಧ್ಯತೆ ಇಲ್ಲ. ಏನಿದು ಹೊಸ ಪ್ರಜ್ಞೆ? ಪ್ರಧಾನಿ ನರೇಂದ್ರ ಮೋದಿ ಮತ್ತು ಭಾಜಪ ಅಧ್ಯಕ್ಷ ಅಮಿತ್ ಶಾ ಅವರ ತಥಾಕಥಿತ ವರ್ಚಸ್ಸನ್ನು ಗುರುತಿಸುತ್ತಿರುವುದು. ದಿನಂಪ್ರತಿ ಆ ದಿಕ್ಕಿನಲ್ಲಿ ಅವರದೊಂದು ಹೇಳಿಕೆ ಪ್ರಕಟವಾಗುವುದು ಕೇವಲ ಕಾಕತಾಳೀಯ ಇರಲಾರದು. ರಾಜ್ಯದ ಮಾಜಿ ಸಚಿವ ಡಿ. ಕೆ. ಶಿವಕುಮಾರ, ಕೇಂದ್ರದ ಮಾಜಿ ಸಚಿವ ಪಿ. ಚಿದಂಬರಂ ಅವರ ಇಂದಿನ ರಗಳೆಗಳನ್ನು ಗಮನಿಸಿದರೆ ಬಹುಶಃ ಮಾನ್ಯ ದೇವೇಗೌಡರ ಹೇಳಿಕೆಗಳನ್ನು ಅರ್ಥೈಸಿಕೊಳ್ಳಲು ಸಾಧ್ಯವಾಗ ಬಹುದು. ದೇಶದಲ್ಲಿ ಇ. ಡಿ. ಗುಮ್ಮನ ಪ್ರಭಾವ ಸಾಕಷ್ಟು ಸಾಂದ್ರವಾಗಿದೆ ಎನ್ನೋಣವೆ?

✶ ✶ ✶

ಉದ್ದಾಮ ಸಾಹಿತಿ ಡಾ॥ ಎಸ್. ಎಲ್. ಭೈರಪ್ಪನವರು ಈ ಬಾರಿ ಮೈಸೂರಿನ ದಸರಾ ಉತ್ಸವವನ್ನು ಉದ್ಘಾಟಿಸಿ ತಮ್ಮ ಅಧ್ಯಯನ ಶಿಸ್ತಾದ ತತ್ತ್ವಶಾಸ್ತ್ರದ ಕೆಲವು ಪ್ರತಿಪಾದನೆಗಳನ್ನು ಖಡಾಖಂಡಿತವಾಗಿ ಮಂಡಿಸಿದರು. ಇದರಲ್ಲಿ ಒಂದು ನ್ಯೂನತೆ ಇದೆ : ಅದೇನೆಂದರೆ ತತ್ತ್ವಶಾಸ್ತ್ರದಲ್ಲಿ ಅಂತಹ ಖಂಡಿತತ್ವಕ್ಕೆ ಎಡೆಯೇ ಇಲ್ಲವೆಂಬುದು ಬಹುಶಃ ಡಾ॥ ಭೈರಪ್ಪನವರಿಗೂ ತಿಳಿದೇ ಇರುತ್ತದೆ. ಸರಸ್ವತಿ ಸಮ್ಮಾನ ಪುರಸ್ಕೃತರಾದ ಶ್ರೀಯುತರಿಗೆ ಅದು ತಿಳಿಯದಿರಲು ಸಾಧ್ಯವಿಲ್ಲ. ಬರ್ಟ್ರಂಡ್ ರಸೆಲ್ "ತತ್ತ್ವಶಾಸ್ತ್ರದ ಮೌಲ್ಯ" ಎಂಬ ತನ್ನ ಲೇಖನದಲ್ಲಿ ಇದನ್ನು ಸಾಂಗವಾಗಿ ಪ್ರತಿಪಾದಿಸಿದ್ದುದುಂಟು. ಇದಮಿತ್ಥಂ ಎಂದು ಒಂದು ತೀರ್ಮಾನವು ಸರ್ವಥಾ ಸಾಧ್ಯವಾದಾಗ ಅದು ತತ್ತ್ವಶಾಸ್ತ್ರದ ಕ್ಷೇತ್ರದಿಂದ ವಿಜ್ಞಾನದ ಕ್ಷೇತ್ರಕ್ಕೆ ಪ್ರವೇಶ ಪಡೆಯುತ್ತದೆಂಬುದು ಆ ಜಿಜ್ಞಾಸೆಯ ಸಾರ. ಶ್ರದ್ಧೆಯು ಸತ್ಯಕ್ಕೆ ಒಂದು ಪ್ರಮಾಣವಾಗಲಾರದು; ಏಕೆಂದರೆ ಪ್ರಮಾಣೀಕೃತವಾದುದರಲ್ಲಿ ಮಾತ್ರವೇ ಶ್ರದ್ಧೆ ಇರಿಸಿಕೊಳ್ಳುವುದು ಮಾನವನ ಇತಿಹಾಸದಲ್ಲಿ ಸಾಬೀತಾಗಿಲ್ಲ. ಉದಾಹರಣೆಗೆ, ದೇವರ ಅಸ್ತಿತ್ವದ ಪ್ರಶ್ನೆ. ಅವನ(ಳ) ಅಸ್ತಿತ್ವವನ್ನು ಕುರಿತು ವಿಪುಲವಾದ ಚರ್ಚೆಗಳು ನಡೆದಿವೆ, ನಡೆಯುತ್ತಿವೆ, ಮುಂದೆಯೂ ನಡೆಯುತ್ತಿರುತ್ತವೆ. ವಿಶ್ವ ಸಾಹಿತ್ಯದಲ್ಲಿ ಇದರ ಪ್ರತಿಫಲನವು ಸಾಂದ್ರವಾಗಿ ಕಂಡುಬಂದಿದೆ. ಸಮಾಜದ ಅಭಿವೃದ್ಧಿಯನ್ನು ಕುರಿತಂತೆ ಸಾಹಿತ್ಯವು ಸದಾ ಆಸಕ್ತಿ ತೋರುತ್ತದೆ; ಹಾಗೆಂದ ಮಾತ್ರಕ್ಕೆ ಸಾಹಿತ್ಯವು ಮತಧರ್ಮ ಮತ್ತು ದೇವರ ಅಸ್ತಿತ್ವವನ್ನು ಕುರಿತಂತೆ ನಿರಾಸಕ್ತಿಯನ್ನು ಹೊಂದಿರಲೇ ಬೇಕೆಂದೇನೂ ಇಲ್ಲ. ಆದರೆ ಭೈರಪ್ಪನವರು ಅಂದು ಕೊಂಡಿರುವಂತೆ ಪುರೋಗಾಮಿ ಸಾಹಿತಿಗಳೆಲ್ಲಾ ಮತಧರ್ಮವನ್ನು ದೂಷಿಸಬೇಕೆಂದಾಗಲಿ, ದೇವರನ್ನು ನಿರಾಕರಿಸುತ್ತಲೇ ಇರಬೇಕೆಂದಾಗಲಿ ಸೂತ್ರವೇನೂ ಇಲ್ಲ. ಪ್ರಗತಿಪರ ಸಾಹಿತಿಗಳೆಲ್ಲಾ ಈ ನೆಲೆಯಲ್ಲಿ ಇದ್ದೇ ತೀರುತ್ತಾರೆಂಬುದು ಭೈರಪ್ಪನವರ ಕಲ್ಪಿತ ಪ್ರಮೇಯ. ತಮ್ಮ ನಲವತ್ತಾರು ನಿಮಿಷಗಳ ಉದ್ಘಾಟನಾ ಭಾಷಣದಲ್ಲಿ ಸದರಿ ಸಾಹಿತಿವರ್ಯರು ವಿಜ್ಞಾನಿಗಳೆಲ್ಲಾ ದೇವರನ್ನು ಆತುಕೊಂಡಿದ್ದಾರೆಂಬ ಅರ್ಥ ಬರುವ ಮಾತುಗಳನ್ನಾಡಿದ್ದಾರೆ. ಅವರಿಗೇಕೆ ಈ ಭ್ರಾಂತಿಯುಂಟಾಗಿದೆಯೋ ತಿಳಿಯದು. ಸ್ಟೀಫನ್ ಹಾಕಿಂಗ್‌ನ ಒಂದು ಧ್ಯೇಯವಾಕ್ಯ ಬಹಳ ಪ್ರಸಿದ್ಧವಾಗಿದೆ : "ತನ್ನನ್ನು ತಾನು ನಿಭಾಯಿಸಿ ಕೊಳ್ಳಲು ಜಗತ್ತು ಸರ್ವಥಾ ಸಮರ್ಥವಾಗಿದೆ, ಅದಕ್ಕೆ ಬಾಹ್ಯಶಕ್ತಿಯೊಂದರ ಅಗತ್ಯವಿಲ್ಲ." ಜಗತ್ತಿನ ಸೃಷ್ಟಿಗೆ ಮುಂಚೆ ದೇವರು ಎಲ್ಲಿ ಕುಳಿತು ಅಥವಾ ನಿಂತು ಸೃಷ್ಟಿಯಲ್ಲಿ ನಿರತನಾದ? ಆ ಪ್ರದೇಶವನ್ನು ಸೃಷ್ಟಿಸಿದ್ದವರಾರು? ಬರ್ನಾರ್ಡ್ ಶಾ ಈ ಪ್ರಶ್ನೆಯನ್ನು ಹಾಕಿಕೊಂಡು ವಿಜ್ಞಾನಿಗಳ ದೃಷ್ಟಿಕೋನವನ್ನು ಅನುಮೋದಿಸುತ್ತಿದ್ದ. ವಿಶ್ವದ ನಿಗೂಢವನ್ನು ಅನುಭವಿಸುವುದೇ ಬೇರೆ, ನಿಗೂಢವನ್ನೆಲ್ಲಾ ದೇವರ ಹೆಸರಿನಲ್ಲಿ ಮರೆಸಿಬಿಡುವುದೇ ಬೇರೆ; ಇಷ್ಟನ್ನು ಮಾನ್ಯ ಭೈರಪ್ಪನವರು ತಿಳಿದಿದ್ದರೆ ಸಾಕಾಗಿರುತ್ತಿತ್ತು. ಆದರೆ ಅವರ ಹುಮ್ಮಸ್ಸು ಬೇರೆಯೇ ದಾರಿಯಲ್ಲಿ ಸಾಗಿತು. "ಕೆಲವು ಸಾಹಿತಿಗಳು ಸಾಹಿತಿಗಳೆಲ್ಲಾ ನಾಸ್ತಿಕರೇ ಆಗಿರಬೇಕೆಂದು ಆಗ್ರಹಿಸುತ್ತಾರೆ" ಎಂದು ಅವರು ಮರುಗಿಹೋದರು! ಇಲ್ಲದ ದೇವರು ನಾವು ಹೇಳುವುದರಿಂದ ಇರವು ಪಡೆಯುವುದಿಲ್ಲ ಮತ್ತು ಇರುವ ದೇವರು ಅಸ್ತಿತ್ವವನ್ನು ಕಳೆದುಕೊಳ್ಳುವುದೂ ಇಲ್ಲ. ಹೀಗಾಗಿ ಡಾ॥ ಭೈರಪ್ಪನವರ ಮಾತೆಲ್ಲಾ ತೀರಾ ಅಪ್ರಸ್ತುತವಾಗಿಬಿಟ್ಟಿತು. ಚಾಮುಂಡಿಯ ಜಾನಪದ ಹಿನ್ನೆಲೆಯನ್ನು ಸಹ ಸ್ಮರಿಸಲು ಅವರಿಗೆ ಅಗತ್ಯವೆನಿಸಲಿಲ್ಲ. ಹೋಗಲಿ, ತತ್ತ್ವಶಾಸ್ತ್ರ ವಿದ್ವಾಂಸರಾಗಿ, ಭಾರತೀಯ ತತ್ತ್ವಶಾಸ್ತ್ರ ಶಾಖೆಗಳು ದೇವರನ್ನು ಕುರಿತಂತೆ ಏಕಾಭಿಪ್ರಾಯವನ್ನು ಹೊಂದಿವೆಯೇ ಎಂಬುದನ್ನಾದರೂ ಅವರು ಪರಾಮರ್ಶಿಸಿದರೆ? ಲೋಕಾಯತ, ಸಾಂಖ್ಯ, ವೈಶೇಷಿಕ, ಪೂರ್ವ–ಮೀಮಾಂಸಾ, ಇವೆಲ್ಲಾ ದೇವರನ್ನು ನಿರಾಕರಿಸಿರುವಂತಹ ಭಾರತೀಯ ತತ್ತ್ವಶಾಸ್ತ್ರ ಶಾಖೆಗಳೆಂಬುದು ಅವರಿಗೆ ತಿಳಿಯದಿರಲು ಸಾಧ್ಯವೇ ಇಲ್ಲ. ಒಟ್ಟಿನಲ್ಲಿ ದಸರಾ ಉತ್ಸವದ ಉದ್ಘಾಟನಾ ಸಮಾರಂಭವನ್ನು ಕ್ಷುಲ್ಲಕ ರಾಜಕೀಯ ಪ್ರಸಂಗವನ್ನಾಗಿ ಪರಿವರ್ತಿಸಿದ್ದಷ್ಟೇ ಮಾನ್ಯ ಭೈರಪ್ಪನವರು ಮಾಡಿದ ಕೆಲಸ. ಸಾಹಿತ್ಯದಲ್ಲಿ ಮಾನವೀಯ ಮೌಲ್ಯ, ಸಾಮಾಜಿಕ ಪ್ರಜ್ಞೆ, ಸಮಾನತೆಯ ಭಾವ, ಮುಂತಾದವೂ ಮೂಲಭೂತ ಸಾಮಗ್ರಿಯೆಂಬ ವಿವೇಚನೆ ಅದೇಕೋ ಅವರಿಗೆ ಲಭ್ಯವಿಲ್ಲವಾಗಿದೆ. ಮತಧರ್ಮದಲ್ಲಿ ಗಾಢ ನಂಬಿಕೆ ಇರಿಸಿಕೊಂಡು ಉದ್ದಾಮ ಸಾಹಿತಿಗಳಾಗಿ ಕಂಗೊಳಿಸಿರುವವರು ಸಾವಿರಾರು ಮಂದಿ ಇದ್ದಾರೆ; ಅಂತೆಯೇ, ದೇವರನ್ನು ಪಕ್ಕಕ್ಕಿರಿಸಿ ಸಾಹಿತ್ಯ ಕ್ಷೇತ್ರವನ್ನು ಶ್ರೀಮಂತಗೊಳಿಸಿರುವವರೂ ಅಷ್ಟೇ ಸಂಖ್ಯೆಯಲ್ಲಿ ಇದ್ದಾರಲ್ಲವೆ? ಭೈರಪ್ಪನವರೇಕೆ ಅದನ್ನು ತಿಳಿಯಲೊಲ್ಲರು?

✶ ✶ ✶

"ಹೊಸ ಚರಿತ್ರೆಯನ್ನು ನಮಗಿಷ್ಟ ಬಂದಂತೆ ಬರೆದುಕೊಳ್ಳಲು ಯಾರದೇನು ಅಡ್ಡಿ?" ಎಂದು ಬನಾರಸ್ ವಿಶ್ವವಿದ್ಯಾಲಯದಲ್ಲಿ ಅಮಿತ್ ಶಾ ಗುಡುಗಿದರೆಂದು ವರದಿಯಾಗಿದೆ. ಅವರು ಗಟ್ಟಿಯಾಗಿ ಹಾಗೆಂದು ವಿಶ್ವವಿದ್ಯಾಲಯವೊಂದರಲ್ಲಿ ಹೇಳುವ ಸ್ವಾತಂತ್ರ್ಯ ಅನುಭವಿಸಬಹುದು, ಆದರೆ ಡಾ॥ ಕನ್ಹಯ್ಯ ಕುಮಾರ್ ಗುಲ್ಬರ್ಗ ವಿಶ್ವವಿದ್ಯಾಲಯದಲ್ಲಿ "ಅಂಬೇಡ್ಕರ್ ಮತ್ತು ಸಂವಿಧಾನ" ಎಂಬ ವಿಷಯ ಕುರಿತು ವಿದ್ಯಾರ್ಥಿಗಳ ನಡುವೆ ಸಂವಾದ ನಡೆಸುವಂತಿಲ್ಲ! ಇದು ನಮ್ಮ ವಿಶ್ವವಿದ್ಯಾನಿಲಯಗಳ ಘನತೆ ಮತ್ತು ಸ್ವಾಯತ್ತತೆ! ದೆಹಲಿಯಿಂದ ಬೆಂಗಳೂರಿನ ರಾಜಭವನಕ್ಕೆ ಸಂದೇಶ ಬರುತ್ತದೆ ಎಂದು ತೋರುತ್ತದೆ, ರಾಜಭವನವು ಗುಲ್ಬರ್ಗ ವಿಶ್ವವಿದ್ಯಾಲಯಕ್ಕೆ ಆದೇಶ ನೀಡುತ್ತದೆ ಮತ್ತು ಪೂರ್ವನಿಯೋಜಿತ ಕನ್ಹಯ್ಯ ಕುಮಾರ್ ಉಪನ್ಯಾಸ ರದ್ದಾಗುತ್ತದೆ : ಇದು ಇಂದಿನ ವಿದ್ಯಮಾನ. ಆದರೆ ದೇಶದಲ್ಲಿ ತುರ್ತು ಪರಿಸ್ಥಿತಿಯಿಲ್ಲ, ಬೌದ್ಧಿಕ ಚರ್ಚೆಗಳಿಗೆ ಅಡ್ಡಿಯಿಲ್ಲ, ಎಂಬಿತ್ಯಾದಿ ಐತಿಹ್ಯಗಳ ಪ್ರಚಾರ ನಡೆಯುತ್ತದೆ ಮತ್ತು ಮಾಧ್ಯಮಗಳು ಬಹುತೇಕ ಅದನ್ನು ಸಮರ್ಥಿಸಿ ತಮ್ಮ ನೈತಿಕತೆಯನ್ನು ಮೆರೆಯುತ್ತವೆ! ಆದರೆ ಗುಲ್ಬರ್ಗದ ವಿದ್ಯಾರ್ಥಿವೃಂದವು ಕನ್ಹಯ್ಯನ ಉಪನ್ಯಾಸವನ್ನು ನಡೆಸದೆ ಬಿಡಲಿಲ್ಲ. ವಿಶ್ವವಿದ್ಯಾಲಯದ ಹೊರಗೆ ಸಾರ್ವಜನಿಕ ಸಭೆ ನಡೆಸಿ ಆತನ ವಿಚಾರ ಮಂಡನೆಗೆ ಅವಕಾಶ ಕಲ್ಪಿಸಿದ್ದು ಅಭಿನಂದನಾರ್ಹವಾಗಿದೆ ಮತ್ತು ಅಧಿಕಾರ ಚಲಾಯಿಸುವವರಿಗೆ ಒಂದು ಮುಖ್ಯಸೂಚನೆಯಾಗಿದೆ. "ವಿಶ್ವವಿದ್ಯಾಲಯವು ರಾಜಕೀಯ ಚರ್ಚೆ ನಡೆಸುವುದಕ್ಕೆ ಇರುವಂಥದಲ್ಲ" ಎಂದು ನಮ್ಮ ರಾಜ್ಯದ ಒಬ್ಬ ಉಪ–ಮುಖ್ಯಮಂತ್ರಿ ಹೇಳಿದ್ದಾರೆ. "ಅಂಬೇಡ್ಕರ್ ಮತ್ತು ಸಂವಿಧಾನ" ಎಂಬ ವಿಷಯವು ರಾಜಕೀಯವೆನ್ನುವುದಾದರೆ ಯಾವುದು

ರಾಜಕೀಯವಲ್ಲದ್ದು? ಇಂತಹ ಚರ್ಚೆಗಳು ವಿಶ್ವವಿದ್ಯಾಲಯಗಳಲ್ಲಿ ನಡೆಯಕೂಡದೆಂದಾದರೆ ಅಲ್ಲಿ ಇನ್ನೇನನ್ನು ಚರ್ಚಿಸಿ ಸಾರ್ಥಕ್ಯ ಪಡೆಯಬೇಕು? ಸರ್ವಾಧಿಕಾರಿ ಧೋರಣೆಯು ನಮ್ಮ ದೇಶದಲ್ಲಿ ಪ್ರಜಾಪ್ರಭುತ್ವವನ್ನು ತುಂಡರಿಸುತ್ತಿದೆಯೆಂಬುದಕ್ಕೆ ಪ್ರಸ್ತುತ ಪ್ರಸಂಗವು ಒಂದು ದೃಷ್ಟಾಂತವಾಗಿದೆ. ವಿಶ್ವವಿದ್ಯಾಲಯಗಳ ಉನ್ನತಮಟ್ಟದ ಅಧಿಕಾರಿಗಳು ತಮ್ಮ ಬೌದ್ಧಿಕ ಮತ್ತು ಶೈಕ್ಷಣಿಕ ಜವಾಬ್ದಾರಿಗಳನ್ನು ನಿಷ್ಠೆಯಿಂದ ನಿರ್ವಹಿಸಬೇಕು ಇಲ್ಲವೆ ಕಲುಷಿತ ವಾತಾವರಣದಲ್ಲಿ ಅದು ಸಾಧ್ಯವಾಗುತ್ತಿಲ್ಲವೆಂದು ಬಹಿರಂಗ ಹೇಳಿಕೆ ನೀಡಿ ನಿರ್ಗಮಿಸಬೇಕು. ಅಷ್ಟರಮಟ್ಟಿನ ಕನಿಷ್ಠ ಬದ್ಧತೆ ಇಲ್ಲದವರು ಆಡಳಿತ ಸೂತ್ರವನ್ನು ತಮ್ಮಲ್ಲಿರಿಸಿಕೊಳ್ಳಲು ಯೋಗ್ಯರಲ್ಲ.

✶ ✶ ✶

ನಮ್ಮ ದೇಶದೊಳಕ್ಕೆ ಆರ್ಯರೆಂಬುವವರ ಪ್ರವೇಶವು ಯಾವಾಗ ಮತ್ತು ಹೇಗೆ ಸಂಭವಿಸಿತು ಎಂಬುದನ್ನು ಇತಿಹಾಸಕಾರರು ಒಂದು ಶತಮಾನಕ್ಕೂ ಹೆಚ್ಚು ಕಾಲದಿಂದ ಚರ್ಚಿಸುತ್ತಾ ಬಂದಿದ್ದಾರೆ. ಅವರು ಸ್ಥಳೀಯರು ಮತ್ತು ಸ್ವಕೀಯರೇ ವಿನಾ ಹೊರಗಿನಿಂದ ಬಂದವರಲ್ಲ ಎಂಬ ವಾದವನ್ನು ಈಚಿನ ದಶಕಗಳಲ್ಲಿ ಕೆಲವು ಇತಿಹಾಸ ವಿದ್ವಾಂಸರು ಮುಂದಿಡುತ್ತಾ ಬಂದಿದ್ದಾರೆ. ಅದಕ್ಕೆ ಮಾನ್ಯತೆ ದೊರಕದಿರುವುದು ಈ ವಿದ್ವಾಂಸರಿಗೆ ಬಹಳ ಅಸಮಾಧಾನದ ವಿಷಯ. ಆಗಾಗ್ಗೆ ಅಂಥವರು ಡಿಎನ್‌ಎ ಮುಂತಾದ ಪರಿಕರಗಳಿಂದ ತಮ್ಮ ಸಿದ್ಧಾಂತಕ್ಕೆ ಮೆರುಗು ನೀಡಲು ಯತ್ನಿಸುವುದುಂಟು. ಆದರೆ ಅದೇ ಪರಿಕರಗಳನ್ನು ಬೇರೆಯವರೂ ಬಳಸುತ್ತಾರೆ ಮತ್ತು ಬೇರೆಯೇ ತೀರ್ಮಾನವನ್ನು ಪ್ರಕಟಿಸುತ್ತಾರೆ. ಅಮೆರಿಕಾದ ಹಾರ್ವರ್ಡ್ ವಿಶ್ವವಿದ್ಯಾಲಯದ ಸಂಶೋಧಕರು ವಿಶ್ವದ ಬೇರೆ ಹತ್ತಾರು ವಿದ್ವತ್ ಸಂಸ್ಥೆಗಳ ಜೊತೆಯಲ್ಲಿ ಅಧ್ಯಯನಗಳನ್ನು ನಡೆಸಿ ಮುಖ್ಯವಾಗಿ ಮೂರು ತೀರ್ಮಾನಗಳನ್ನು ಪ್ರಕಟಿಸಿದ್ದಾರೆ : (ಅ) ಸಿಂಧು ನದಿಯ ನಾಗರಿಕತೆಯು ಆರ್ಯ–ಪೂರ್ವ ಇತಿಹಾಸದ ಪ್ರಶಸ್ತ ವಿದ್ಯಮಾನ; (ಆ) ಆರ್ಯರೆಂಬುವವರು ಸುಮಾರು ಕ್ರಿ.ಪೂ. ೨೦೦೦–೧೮೦೦ರ ಅವಧಿಯಲ್ಲಿ ಭಾರತವನ್ನು ಪ್ರವೇಶಿಸಿದರು; ಮತ್ತು (ಇ) ಆ ಕಾಲಕ್ಕೆ ಮೊದಲೇ ದಕ್ಷಿಣ ಭಾರತದಲ್ಲಿ ಉನ್ನತ ನಾಗರಿಕತೆ ಮತ್ತು ಸಂಸ್ಕೃತಿ ವಿಸ್ತಾರವಾಗಿ ನಿರ್ಮಾಣಗೊಂಡಿತ್ತು. ಇದನ್ನೊಪ್ಪಿದರೆ ಆರ್ಯಮೂಲದವರೆನ್ನಲಾದವರು "ಪರಕೀಯರು" ಎನಿಸಿಕೊಳ್ಳಬೇಕಾಗುತ್ತದೆಂಬ ವ್ಯಸನದಿಂದ ಕೆಲವು ವಿದ್ವಾಂಸರು ಏನೇನೋ ತಿಪ್ಪರಲಾಗ ಹಾಕುತ್ತಿರುತ್ತಾರೆ. ಉತ್ಖನನ ಶಾಸ್ತ್ರವಲ್ಲದೆ ತೌಲನಿಕ ಭಾಷಾಶಾಸ್ತ್ರ ಸಹ ಸುಮಾರು ೧೯ನೆಯ ಶತಮಾನದ ಆದಿಯಿಂದಲೇ ಆರ್ಯರೆನ್ನಲಾದವರ ಭಾಷೆಯನ್ನಾಧರಿಸಿ ಅನೇಕ ಮೌಲಿಕ ತೀರ್ಮಾನಗಳನ್ನು ನೀಡುತ್ತಾ ಬಂದಿದೆ. ೧೯೫೩ರಲ್ಲಿ ಕೇಂದ್ರ ಸಾಹಿತ್ಯ ಅಕಾದೆಮಿಯು "ಸಾರ್ಥವಾಹ" ಎಂಬ ಗ್ರಂಥವನ್ನು ಪ್ರಕಟಿಸಿತ್ತು. ಹಿಂದಿಯಲ್ಲಿ ಬರೆಯಲಾಗಿದ್ದ ಆ ಗ್ರಂಥವನ್ನು ಅದೇ ಅಕಾದೆಮಿಯು ೧೯೭೭ರಲ್ಲಿ ಕನ್ನಡ ಭಾಷೆಯಲ್ಲಿ ಪ್ರಕಟಿಸಿದೆ. ಮೂಲ ಹಿಂದಿಯ ಲೇಖಕರು ಸುಪ್ರಸಿದ್ಧ ಇತಿಹಾಸಕಾರ ಮತ್ತು ಭಾಷಾತಜ್ಞ ಶ್ರೀ. ಮೋತೀಚಂದ್ರ; ಕನ್ನಡ ಅನುವಾದಕರು ಎಚ್. ಎಸ್. ಪಾಟೀಲ.

ಮೋತೀಚಂದ್ರರು ಆರ್ಯರು ಹೊರಗಿನಿಂದ ಬಂದವರೆಂದು ಮಾತ್ರವೇ ಹೇಳದೆ ಅವರು ಅನುಸರಿಸಿ ಬಂದ ಹಾದಿಯನ್ನು ಸಹ ಪುರಾವೆಗಳ ಸಮೇತ ದಾಖಲಿಸಿದ್ದಾರೆ. ಪ್ರಯಾಗದ ಹಿನ್ನೆಲೆಯಲ್ಲಿ ಸರಸ್ವತಿ ನದಿಯು ಕೇವಲ ಕಾಲ್ಪನಿಕವೆಂದು ಸಹ ಅವರು ವಾದಿಸಿದ್ದಾರೆ. ಆದರೆ ಈಗಿನ ಕೇಂದ್ರ ಸರ್ಕಾರವು ಕೋಟಿಗಟ್ಟಲೆ ಹಣ ವ್ಯಯಿಸಿ "ಸಂಶೋಧನೆ" ನಡೆಸಿಕೊಟ್ಟಿದೆ ಮತ್ತು ಸರಸ್ವತೀ ನದಿಯ ಗುಪ್ತಮಾರ್ಗವನ್ನು ಗುರುತಿಸಿದೆ! ಅದು ಗಂಗಾ ಮತ್ತು ಯಮುನಾಗಳನ್ನು ಪ್ರಯಾಗದಲ್ಲಿ ಸೇರಿಸಿಕೊಳ್ಳುತ್ತದೆಯೆಂಬ ಐತಿಹ್ಯದ ಪುನರುಚ್ಚಾರಣೆಯಲ್ಲದೆ ಬೇರೇನೂ ಅಲ್ಲ. ಮೋತೀಚಂದ್ರರು ವೇದ ಮತ್ತು ಬೌದ್ಧಗ್ರಂಥಗಳನ್ನು ಆಳವಾಗಿ ತಿಳಿದಿದ್ದವರು, ಇತಿಹಾಸದ ಪ್ರಕಾಂಡ ಪಂಡಿತರು. ಅವರ ಗ್ರಂಥದ ಒಂದು ವಾಕ್ಯ ಹೀಗಿದೆ : "...ಇಷ್ಟು ದೊಡ್ಡದಾಗಿ ಇಂದು ಸಾರುತ್ತಿರುವ ಸಂಸ್ಕೃತಿಯ ಆರ್ಯರು ಬಹುಶಃ ಇದೇ ಕಾರಣದಿಂದಾಗಿ (ಉರಿಯುವ ಮಳಲುಗಾಡು, ದುರ್ಗಮ ಪರ್ವತಗಳು, ಇತ್ಯಾದಿ) ಸುತ್ತುತ್ತ–ಸುತ್ತುತ್ತ ಯುರೋಪ, ಇರಾಣ, ಮತ್ತು ಭಾರತಗಳನ್ನು ತಲುಪಿದರು. ತಮ್ಮ ಈ ಸುತ್ತಾಡುವ ಅವಸ್ಥೆಯಲ್ಲಿ ಆದಿಮಾನವ ಗುಂಪುಗಳು ಹೊಸ–ಹೊಸ ಹಾದಿಗಳನ್ನು ಕಂಡು ಹಿಡಿದರು ಮತ್ತು ಅವುಗಳ ಉಪಯೋಗವನ್ನು ವ್ಯಾಪಾರಿಗಳು ಮತ್ತು ವಿಜಯಿಗಳು ಮಾಡಿಕೊಳ್ಳುತ್ತಾ ಬಂದರು" (ಪು.೩; ಕಾಗುಣಿತವು ಗ್ರಂಥದಲ್ಲಿಯೇ ಇದ್ದಂತೆ). ಮೋತೀಚಂದ್ರರು ವೈದಿಕ ಮತ್ತು ಪ್ರತಿವೈದಿಕ ಯುಗಗಳ ಪ್ರವಾಸಿಗಳು ಹಾಗೂ ಅವರು ಹಿಡಿದುಬಂದ ಹಾದಿಗಳನ್ನು ಸಮಗ್ರವಾಗಿ ತಮ್ಮ ಗ್ರಂಥದಲ್ಲಿ ಪ್ರತಿಪಾದಿಸಿದ್ದಾರೆ. "ಆರ್ಯರು" ಹೊರಗಿನಿಂದ ಬಂದವರೆಂಬ ಕಾರಣಕ್ಕೆ ಅವರ ತಥಾಕಥಿತ ವರ್ತಮಾನ ರೂಪಿಗಳನ್ನು ಭಾರತದಿಂದ ಹೊರಹಾಕಬೇಕೆಂಬ ಪ್ರಮೇಯವೇನೂ ಇಲ್ಲ; ಆದರೆ ಯಾವುದೋ ಕಾಲದಲ್ಲಿ ಅವರೂ ಹೊರಗಿನಿಂದ ಬಂದಂಥವರೇ. ನಂತರ ಗ್ರೀಕರು, ಕುಷಾಣರು, ಮುಂತಾದವರು ಸಹ ಬಂದಿದ್ದು ಇತಿಹಾಸ; ಇಸ್ಲಾಂ ಧರ್ಮೀಯರು ಮತ್ತು ಯೂರೋಪಿನವರು ಸಹ ಆಕ್ರಮಣ ನಡೆಸಿದ್ದು ತಿಳಿದ ವಿಷಯ. ಮೋತೀಚಂದ್ರರು ನೀಡುವ ಪುರಾವೆಗಳನ್ನು ಸಾದ್ಯಂತವಾಗಿ ನಿರಾಕರಿಸದೆ "ನೂತನ ಆರ್ಯ–ಸಂಶೋಧನೆ" ಅರ್ಥವತ್ತಾಗಿರಲು ಶಕ್ಯವಿಲ್ಲ; ಅವರನ್ನು ನಿರಾಕರಿಸಲು ಅಂಗೀಕಾರಾರ್ಹವಾದ ತರ್ಕವೂ ಇಲ್ಲ.

✶ ✶ ✶

ನಮ್ಮ ದೇಶದಲ್ಲಿ ಗಾಂಧೀಜಿಯನ್ನು ಪುರಸ್ಕರಿಸದೆ ರಾಜಕೀಯ ಬೇಳೆ ಬೇಯಿಸಿಕೊಳ್ಳಲು ಸಾಧ್ಯವಾಗದೆಂದು ಮನವರಿಕೆ ಆಗುತ್ತಲೇ ಬಂದಿದೆ. ಆದ್ದರಿಂದ ಗಾಂಧೀಜಿ ಮತ್ತು ಅವರ ಸಂಸ್ಥೆಗಳನ್ನು ಪುಡಿಗುಟ್ಟುವುದು ಅವಶ್ಯಕವೆಂದು ಕೆಲವರು ತಿಳಿಯುತ್ತಾರೆ. ಇತ್ತೀಚಿನ ವರದಿಗಳ ಪ್ರಕಾರ ಕೇಂದ್ರ ಸರ್ಕಾರವು ಅಹಮದಾಬಾದ್‌ನ ಸಾಬರಮತಿ ಆಶ್ರಮವನ್ನು "ಅಭಿವೃದ್ಧಿಗೊಳಿಸುವ" ಯೋಜನೆ ಹಾಕಿಕೊಳ್ಳಲಿದೆ. ಅಂದರೆ, ಅದರ ವಿರೂಪ ಮಾಡಬೇಕು, ಎಂದರ್ಥ. ಅಲ್ಲಿಯ ಮೂಲಸ್ವರೂಪ, ವಸತಿ, ಮುಂತಾದುವನ್ನು ಭಗ್ನಗೊಳಿಸಿ "ನೂತನ" ಸೌಧಗಳನ್ನು ನಿರ್ಮಿಸುವುದು, "ಇದು ಗಾಂಧಿ ಸ್ಮಾರಕ" ಎಂದು ಘೋಷಿಸುವುದು, ಅಲ್ಲಿ "ಗಾಂಧಿತನ" ಉಳಿಯದಂತೆ ಮಾಡುವುದು ನಿಜವಾದ ಹುನ್ನಾರ. ಅಲ್ಲಿ ವಾಸಿಸುತ್ತಿರುವವರನ್ನು ಹೊರಹಾಕಿ, ಆಧುನಿಕ ದೈತ್ಯ ಕಟ್ಟಡ ಕಟ್ಟಿ, ಒಂದು ವಸ್ತುಸಂಗ್ರಹಾಲಯವನ್ನು ನಿರ್ಮಿಸಿಬಿಟ್ಟರೆ ಗಾಂಧೀಜಿಗೆ ಯಾವ ಪ್ರೀತಿಯೋ ತಿಳಿಯದು. ನಂತರ ವಾರ್ಧಾ ಬಳಿಯ ಸೇವಾಗ್ರಾಮಕ್ಕೂ ಅಂಥದೇ ಸಂಸ್ಕಾರ ಮಾಡಿದರಾಯಿತು. ಗಾಂಧೀಜಿಗೆ ಇಂತಹ ನೂತನ ಸ್ಮಾರಕಗಳು ಬೇಕಿಲ್ಲ. ಪೋರ್‌ಬಂದರ್, ಸಾಬರಮತಿ, ಸೇವಾಗ್ರಾಮ, ಮುಂತಾದುವೆಲ್ಲಾ ಗಾಂಧೀಜಿ ಕಾಲದಲ್ಲಿ ಹೇಗಿದ್ದವೋ ಹಾಗೆಯೇ ಉಳಿಸಿಕೊಳ್ಳುವುದು ಗಾಂಧಿ ಪರಂಪರೆಗೆ ಗೌರವ ನೀಡುವ ಪರಿ. ಅವುಗಳನ್ನು ವಿರೂಪಗೊಳಿಸಿ ಇಪ್ಪತ್ತೊಂದನೆಯ ಶತಮಾನದ ವಿಸ್ಮಯಗಳ ರೂಪದಲ್ಲಿ ಅಗಾಧ ಸ್ಮಾರಕ ನಿರ್ಮಿಸಹೊರಡುವುದು ಗಾಂಧೀಜಿಯನ್ನು ಅಪ್ರಸ್ತುತ ಮಾಡುವ ಒಂದು ಹೀನ ಪ್ರಕ್ರಿಯೆ. ಅಗಾಧ ಸ್ಮಾರಕಗಳನ್ನು ಬೇರೆಲ್ಲೋ ಬೇಕಾದರೆ ನಿರ್ಮಿಸಿಕೊಂಡು ತೆವಲು ತೀರಿಸಿಕೊಳ್ಳಲು ಅಡ್ಡಿಯಿಲ್ಲ; ಆದರೆ ಹಿಂದಿನ ನಿವಾಸಗಳನ್ನು ಅವು ಇದ್ದಂತೆಯೇ ಉಳಿಸಿಕೊಳ್ಳುವುದು ಅವಶ್ಯಕ. ಸಾಬರಮತಿಯ ಪರಿಸರದಲ್ಲಿ ವಾಸಿಸುತ್ತಿರುವ ಜನಗಳಿಗೆ ಗಾಂಧಿ ಆಶ್ರಮದ ಜೊತೆ ನಿಕಟ ಸಂಪರ್ಕವಿದೆ. ಅವರನ್ನು ವಸತಿವಿಹೀನರನ್ನಾಗಿ ಮಾಡಿ ಒಂದು ಅಂಥ ಸ್ಮಾರಕ ರಚಿಸುವುದು ಹಿಂಸಾಕ್ರಮವಾಗುತ್ತದೆ. ಇಡೀ ಜನತೆಯು ಈ ಅನರ್ಥಕ ಯೋಜನೆಯನ್ನು ವಿರೋಧಿಸಿ ಗಾಂಧೀಜಿ ಸ್ಮಾರಕಗಳನ್ನು ಯಥಾಸ್ಥಿತಿಯಲ್ಲಿ ಉಳಿಸಿಕೊಳ್ಳಲು ಆಗ್ರಹಿಸಬೇಕು. ಕೇರಳದಿಂದ ಇತ್ತೀಚೆಗೆ ಪ್ರಧಾನ ಮಂತ್ರಿಯವರಿಗೆ ಸಹಸ್ರಾರು ಅಂಚೆಪತ್ರಗಳನ್ನು ಕಳಿಸಲಾಯಿತು. ಈಗ ದೇಶದ ಎಲ್ಲ ಭಾಗಗಳಿಂದ ಮನವಿ ಪತ್ರಗಳನ್ನು ನೇರವಾಗಿ ಪ್ರಧಾನಿಯವರಿಗೆ ಕಳಿಸುವುದು ಸೂಕ್ತವಾಗಿರುತ್ತದೆ. ಗಾಂಧೀಜಿಗೆ ಅದ್ದೂರಿಯ ಅಗತ್ಯವಿಲ್ಲ; ಅಗತ್ಯವಿರುವುದು ಅವರು ಅಪೇಕ್ಷಿಸಿದ್ದ ಜನಪರ ಮತ್ತು ಜೀವಪರ ಮೌಲ್ಯಗಳ ವರ್ಧನೆ.




## ಉತ್ತಮ ಚಿಂತನೆ! ಉತ್ಪ್ರೇಕ್ಷೆಯ ಬರಹ!

ಅಕ್ಟೋಬರ್ ೨೦೧೯ರ 'ಹೊಸತು' ಸಂಚಿಕೆಯಲ್ಲಿ ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾನಿಲಯದ ಸಂಶೋಧನಾ ವಿದ್ಯಾರ್ಥಿನಿ ಕು॥ ಪ್ರತಿಭಾ ಅವರು ಕರ್ನಾಟಕದ ಗಾರ್ಮೆಂಟ್ ಉದ್ಯಮದ ವಿಚಾರದಲ್ಲಿನ ಸಮಸ್ಯೆಗಳ ಹಾಗೂ ಮುಖ್ಯವಾಗಿ ವಲಸೆ ಕಾರ್ಮಿಕರ ಬಗ್ಗೆ ಬರೆದಿರುವ ಮಾಹಿತಿ ಲೇಖನಕ್ಕೆ ಅಭಿನಂದಿಸುತ್ತ ಕೆಲವು ಸತ್ಯಾ-ಸತ್ಯತೆಗಳನ್ನು, ವಾಸ್ತವಿಕ ಸಂಗತಿಗಳನ್ನು ಲೇಖಕರ ಹಾಗೂ ಓದುಗರ ಗಮನಕ್ಕೆ ತರ ಬಯಸುತ್ತೇನೆ.

ಮೊದಲನೆಯದಾಗಿ, ಸಿದ್ಧ ಉಡುಪು ತಯಾರಿಕೆಯನ್ನು ಅಸಂಘಟಿತವಲಯವೆಂದೇ ರಾಜ್ಯ ಹಾಗೂ ಕೇಂದ್ರ ಸರ್ಕಾರಗಳು ಪರಿಗಣಿಸಿರುವ ಹಿನ್ನೆಲೆಯಲ್ಲಿ ಸಂಘಟಿತ ವಲಯದ ಸವಲತ್ತುಗಳನ್ನು ಈ ಕೈಗಾರಿಕೆಗೆ ಒದಗಿಸುವುದಕ್ಕೆ ಉದ್ಯಮದಲ್ಲಿನ ಬಂಡವಾಳ ಹೂಡಿಕೆದಾರರು ಒಪ್ಪದ ಕಾರಣ ಕೆಲವು ನ್ಯೂನತೆಗಳನ್ನು ಒಪ್ಪಲೇಬೇಕಾದ ಅನಿವಾರ್ಯತೆ ಬಂದೊದಗಿದೆ. ಎರಡನೆಯದಾಗಿ, ನಮ್ಮ ದೇಶದ ಗ್ರಾಹಕರಲ್ಲಿ, ೯೦ರ ದಶಕದ ನಡುವಿನವರೆಗೆ, ಸಿದ್ಧ ಉಡುಪುಗಳ ಖರೀದಿಗಿಂತ Stitch-to-Order ಅಥವಾ Tailor-made ಪದ್ಧತಿಯಲ್ಲಿ ಉಡುಪಿನ ತಯಾರಿಕೆ ವಾಡಿಕೆಯಲ್ಲಿದ್ದ ಕಾರಣ, ಬಹುತೇಕ ಸಿದ್ಧ ಉಡುಪುಗಳ ತಯಾರಿಕಾ ಘಟಕಗಳು ರಫ್ತಿನ ವ್ಯವಹಾರದಲ್ಲಿ (ವಿದೇಶೀ ವಿನಿಮಯದ) ತೊಡಗಿದ ವಿಚಾರ ಗಮನಾರ್ಹವೇ ಸರಿ. ಮೂರನೆಯದಾಗಿ, ಅಂತರರಾಷ್ಟ್ರೀಯ ರಫ್ತು ವ್ಯವಹಾರದಲ್ಲಿ ದೇಶ-ದೇಶಗಳ ನಡುವೆ ಸಿದ್ಧ ಉಡುಪುಗಳ ವ್ಯವಹಾರದಲ್ಲಿ ದೇಯಾಂಶದ ಹಾಗೂ ಕನಿಷ್ಠ ಬೆಲೆ ನಿಯಮ ಜಾರಿಯಲ್ಲಿದ್ದ ಕಾರಣ ರಫ್ತು ವ್ಯವಹಾರದಲ್ಲಿ ಒಂದು ಮಾದರಿಯ ಹಿಡಿತ ಇದ್ದದ್ದು ಸತ್ಯ. ಆದರೆ, ಡಿಸೆಂಬರ್ ೩೧, ೨೦೦೪ಕ್ಕೆ ಅಂತ್ಯವಾಗುವಂತೆ ಈ ದೇಯಾಂಶ ವ್ಯವಸ್ಥೆಯನ್ನು ಜಾಗತಿಕ ವ್ಯವಹಾರ ಸಂಸ್ಥೆ ರದ್ದುಗೊಳಿಸಿದ ಹಿನ್ನೆಲೆಯಲ್ಲಿ ಜಾಗತಿಕ ಸಿದ್ಧ ಉಡುಪುಗಳ ಅಂತರರಾಷ್ಟ್ರೀಯ ವ್ಯವಹಾರ ತೆರೆದ ಮಾರುಕಟ್ಟೆಯಾಗಿ ಮಾರ್ಪಾಡಾಗಿ, ಪೈಪೋಟಿ ಹೆಚ್ಚಾಗಿ ನಮ್ಮ ದೇಶದ ಅನೇಕ ಸಣ್ಣ ಹಾಗೂ ಅತಿ ಸಣ್ಣ ಉಡುಪು ತಯಾರಿಕಾ ಘಟಕಗಳು ಮುಚ್ಚುವಂತಹ ಘೋರ ಪರಿಣಾಮಕ್ಕೆ ನಾಂದಿಯಾಯಿತು. ಈ ಅವಕಾಶವನ್ನು ಬಳಸಿಕೊಂಡ ಚೀನ ದೇಶ ಅತೀ ಹೆಚ್ಚು ಸಿದ್ಧ ಉಡುಪಿನ ಗ್ರಾಹಕರನ್ನು ಹೊಂದಿರುವ ಅಮೆರಿಕ ದೇಶದಲ್ಲಿ, ಏಕಸ್ವಾಮ್ಯ ಸಾಧನೆಯ ನೆಪದಲ್ಲಿ ತನ್ನ ದೇಶದ ಉದ್ಯಮಿಗಳು ತಯಾರಿಸಿದ ಸರಕನ್ನು ಸುರಿದದ್ದು ('ಡಂಪ್' ಮಾಡಿದ್ದು) ವಾಸ್ತವವೇ. ನಾಲ್ಕನೆಯದಾಗಿ, ಹೆಚ್ಚು-ಕಡಿಮೆ ಇದೇ ಸಮಯಕ್ಕೆ ಸಿದ್ಧ ಉಡುಪುಗಳನ್ನು ರಫ್ತು ಮಾಡುವ ಉದ್ಯಮಗಳಿಗೆ ನೀಡಲಾಗಿದ್ದ ೮೦-ಎಚ್.ಎಚ್.ಸಿ. ಪರಿಚ್ಛೇದದ ಅಡಿಯಲ್ಲಿ ಸಂಪೂರ್ಣ ಆದಾಯ ತೆರಿಗೆ ವಿನಾಯತಿಯನ್ನು ಕ್ರಮೇಣವಾಗಿ ಐದು ಹಂತಗಳಲ್ಲಿ ಹಿಂಪಡೆದ ಕಾರಣಕ್ಕೆ ರಫ್ತು ಉದ್ಯಮ




ನಿರೀಕ್ಷಿತ ಮಟ್ಟದಲ್ಲಿ ಲಾಭದಾಯಕ ಎನಿಸದೇ ಬಹುತೇಕ ಅಸಂಘಟಿತ ಉದ್ದಿಮೆದಾರರು ಈ ಕೈಗಾರಿಕೆಯಿಂದ ನಿರ್ಗಮಿಸುವುದು ಅನಿವಾರ್ಯವಾಯಿತು. (ಇದೇ ಸಮಯದಲ್ಲಿ ಶೀಘ್ರವಾಗಿ ಬೆಳೆಯುತ್ತಿದ್ದ ಸಾಫ್ಟ್‌ವೇರ್ ಉದ್ಯಮವನ್ನು ಉತ್ತೇಜಿಸುವ ಹೆಜ್ಜೆಯಾಗಿ ಆ ಉದ್ಯಮಕ್ಕೆ ಆದಾಯ ತೆರಿಗೆಯ ಸೌಲಭ್ಯವನ್ನು ಧಾರಾಳವಾಗಿ ನೀಡುವ ಸರ್ಕಾರದ ಕ್ರಮವನ್ನು ಮರೆಯುವ ಹಾಗಿಲ್ಲ); ಮತ್ತೊಂದು ಮಹತ್ತರವಾದ ಮಾಹಿತಿ ಎಂದರೆ ಸಿದ್ಧ ಉಡುಪುಗಳ ತಯಾರಿಕೆಯಲ್ಲಿ, ದೇಯಾಂಶ ನಿರ್ಬಂಧಗಳು ಸಡಿಲಿಕೆಯಾದ ನಂತರ ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಮಟ್ಟದಲ್ಲಿ ಪೈಪೋಟಿ ಅತೀವವಾಗಿ ಹೆಚ್ಚಳವಾದ ಕಾರಣ ಹಾಗೂ ಈ ಉದ್ಯಮ ನಿರಂತರವಾಗಿ ಆಧುನೀಕರಣವನ್ನು ಬಯಸುವ ಕ್ಷೇತ್ರವಾಗಿರುವ ಕಾರಣಕ್ಕೆ, ನಿರಂತರವಾಗಿ ಅಧಿಕವಾದ ಬಂಡವಾಳ ಹೂಡಿಕೆ ಹಾಗೂ ತಂತ್ರಜ್ಞಾನ ಅಳವಡಿಕೆ ಅನಿವಾರ್ಯವಾದ ಕಾರಣ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಅನೇಕಾನೇಕ ಉದ್ಯಮ ಸ್ನೇಹಿ ಯೋಜನೆಗಳನ್ನು (TUF, EPZ, MODVAT, REP License, Forex Blanket permit, ಇತ್ಯಾದಿ) ಜಾರಿಗೆ ತಂದ ವಿಚಾರವನ್ನು ಅಲ್ಲಗಳೆಯುವಂತಿಲ್ಲ. ಇಷ್ಟಾದರೂ ಸಹ ಈ ಕೈಗಾರಿಕೆಯಲ್ಲಿ ಕಾಯಕ ಮಾಡುವಲ್ಲಿ ಕೌಶಲ್ಯ ಇರುವ ನೌಕರರು ಮಾತ್ರ ಯಶಸ್ವಿಯಾಗಲು ಸಾಧ್ಯವಾಯಿತು. ಆದ ಕಾರಣ ಲೇಖಕರು ನಮೂದಿಸಿರುವಂತೆ "ಕೇವಲ ಒಂದು ಹೊಲಿಗೆಯನ್ನು ಹಾಕಲು ಬಂದರೆ ಸಾಕಾಗಿತ್ತು" ಎಂಬ ಅಭಿಪ್ರಾಯ ಖಂಡಿತವಾಗಿ ಸತ್ಯಕ್ಕೆ ದೂರವಾದ ವಿಚಾರವೆಂದೇ ಪರಿಗಣಿಸಬೇಕಾಗುತ್ತದೆ. ಐದನೆಯದಾಗಿ, ಪ್ರಮುಖವಾಗಿ, ಒಮ್ಮೆ ದೇಶದ ಸಿದ್ಧ ಉಡುಪುಗಳ ರಫ್ತು ವ್ಯವಹಾರ ಕುಂಠಿತವಾದಾಗ ಅಸ್ತಿತ್ವದಲ್ಲಿದ್ದ ಬೃಹತ್ ಉದ್ಯಮಿಗಳು ಸ್ಥಳೀಯ ಮಾರುಕಟ್ಟೆಗೆ ಸಿದ್ಧ ಉಡುಪುಗಳನ್ನು ಹೆಚ್ಚಿನ ವಿನ್ಯಾಸದಲ್ಲಿ, ಗ್ರಾಹಕರ ಅಭಿರುಚಿಗಳಿಗೆ, ಗ್ರಾಹಕರ ವೈವಿಧ್ಯಮಯವಾದ ಅಳತೆಗಳಿಗೆ ತಕ್ಕಂತೆ ಉಡುಪುಗಳ ತಯಾರಿಕೆಯ ಆರಂಭಕ್ಕೆ ಕಾರಣವಾಯಿತು. ಪ್ರಸ್ತುತ ಸನ್ನಿವೇಶದಲ್ಲಿ, ಮೂರು-ನಾಲ್ಕು ದಶಕಗಳ ಹಿಂದೆ ಕಾಣಸಿಗುತ್ತಿದ್ದ ಚಿಕ್ಕ ಮಾದರಿಯ ಬಹುತೇಕ ಸಿಂಪಿಗರ ಮಳಿಗೆಗಳು (Tailoring shops) ಮಾಯವಾಗಿದ್ದು ಪ್ರತಿಯೊಂದು ವಯಸ್ಸಿನವರಿಗೆ ಸೂಕ್ತವಾಗಿರುವ, ಬಹುವಿನ್ಯಾಸದ ಸಿದ್ಧ ಉಡುಪುಗಳ ಬೃಹತ್ ಮಳಿಗೆಗಳು ರಸ್ತೆ-ರಸ್ತೆಯಲ್ಲಿ ಕಾಣಸಿಗುತ್ತವೆ. ಒಟ್ಟಿನಲ್ಲಿ ಹೇಳಬೇಕೆಂದರೆ, ಈ ಹಿಂದೆಯೂ ಅಸಂಘಟಿತ ವಲಯದಲ್ಲಿ ಮಹಿಳಾ ಕಾರ್ಮಿಕರ ಪಾತ್ರ ಅಪಾರವಾಗಿದ್ದು, ಪ್ರಸ್ತುತ ಸನ್ನಿವೇಶದಲ್ಲಿ, ಸರ್ವೇ ಸಾಧಾರಣವಾಗಿ ಮಹಿಳೆಯ ಪಾತ್ರ ಸಕಲ ಕ್ಷೇತ್ರದಲ್ಲಿ ಹೆಚ್ಚುತ್ತಿರುವ ರೀತಿಯಲ್ಲೇ ಅಸಂಘಟಿತ ವಲಯವಾದ ಸಿದ್ಧ ಉಡುಪುಗಳ ಕ್ಷೇತ್ರದಲ್ಲಿ ಸಹ ಹೆಚ್ಚಾಗಿರುವುದು ಹೆಮ್ಮೆಯ ವಿಚಾರವೇ ಸರಿ. ಇನ್ನು ಸಿದ್ಧ ಉಡುಪುಗಳ ಕೈಗಾರಿಕೆಯಲ್ಲಿ, ಅಮಾನವೀಯ, ಒಪ್ಪಲಾಗದ ಕೃತ್ಯವೆಂದೇ ಪರಿಗಣಿಸಬೇಕಿರುವ, ಮಹಿಳೆಯರ ಶೋಷಣೆಯ ಬಗ್ಗೆ ನಮೂದಿಸಿರುವ ಸಂಶೋಧನಾ ವಿದ್ಯಾರ್ಥಿನಿಯ ಅಭಿಪ್ರಾಯ ಒಂದು ರೀತಿಯಲ್ಲಿ ಒಪ್ಪುವಂತಹದಾದರೂ ಸಹ, ಮತ್ತೊಂದು ರೀತಿಯಲ್ಲಿ ವಿಶ್ಲೇಷಣೆ ಮಾಡಿದರೆ ಸಂಕುಚಿತ ಮಾದರಿಯಲ್ಲಿ ಸಮೀಕ್ಷೆಯಲ್ಲಿ ತೊಡಗಿರುವ ಹಾಗೆ ಮೇಲ್ನೋಟಕ್ಕೆ ಕಂಡಿದ್ದು ಈ ಕ್ಷೇತ್ರದ ಸಂಪೂರ್ಣ ವ್ಯಾಪ್ತಿಯ ಉದ್ದಗಲದಲ್ಲಿ ವೈಜ್ಞಾನಿಕವಾಗಿ ಅಂಕಿ-ಅಂಶಗಳನ್ನು ಕಲೆಹಾಕಿದರೆ ಮಾತ್ರ ವಾಸ್ತವಾಂಶ ತಿಳಿಯಬಹುದಾಗಿರುತ್ತದೆ. ಒಟ್ಟಿನಲ್ಲಿ ಈ ಬರವಣಿಗೆ ಕಣ್ಣು ತೆರೆಸುವ ಲೇಖನವಾಗಿದ್ದು ಓದುಗರ ಪ್ರತಿಕ್ರಿಯೆ ಹಾಗೂ ಟೀಕೆ-ಟಿಪ್ಪಣಿಗಳಿಲ್ಲದೇ ಯಾವುದೇ ಮಾಹಿತಿ ಲೇಖನ ಪರಿಪೂರ್ಣವಾಗಲು ಸಾಧ್ಯವಾಗದು ಎಂಬುದು ವೈಯಕ್ತಿಕ ಅಭಿಪ್ರಾಯ. ಕು॥ ಪ್ರತಿಭಾ ಅವರಿಗೆ ಶುಭ ಹಾರೈಸುತ್ತೇನೆ.

*ಬೆಂಗಳೂರು* **ರಾಜೀವ್ ಎನ್. ಮಾಗಲ್**

**ಬದಲಾದ ದಲಿತ, ಬದಲಾಗದ ಹಳ್ಳಿ**

ಭದ್ರಪ್ಪ ಶಿ. ಹೆನ್ಲಿಯವರ ತಿಂಗಳ ಕಥೆ 'ಮಾದಳ್ಳಿಯ ಗೋ ಯಜ್ಞ'ದ ವಸ್ತು ಒಂದು ಪರಿಪೂರ್ಣ ಕಾದಂಬರಿಯ ವಿಸ್ತಾರವನ್ನು ಪಡೆದಿದೆ. ನಮ್ಮ ಹಳ್ಳಿಗಳಲ್ಲಿರುವ ಸಣ್ಣತನ, ಮತ್ಸರ, ಜಗಳ, ಚಾಡಿಕೋರತನ, ಕ್ರೌರ್ಯ, ಅತ್ತೆ–ಸೊಸೆ ಜಗಳ, ಹೆಣ್ಣಿನ ಶೋಷಣೆ, ಮುಂತಾದವು ಕಥೆಯ ಚೌಕಟ್ಟಿನಲ್ಲಿ ಸಹಜವಾಗಿ ಮೂಡಿಬಂದಿವೆ. ಹಳ್ಳಿಗಳ ಈ ವ್ರಣಗಳು ಇಂದು ನೆನ್ನೆಯವಲ್ಲ. ಕಾಲ ಎಷ್ಟೊಂದು ಬದಲಾಗಿದೆ. ಆದರೆ ಈ ಸಮಸ್ಯೆಗಳು ಹಳ್ಳಿಗಳಲ್ಲಿ ಹಾಗೇ ಉಳಿದುಕೊಂಡು ಬಂದಿವೆ. ಆದರೆ, ದಲಿತರು ತಮಗೆ ದೊರೆತ ಶಿಕ್ಷಣದ ಕಾರಣದಿಂದ ಮತ್ತು ಸರ್ಕಾರದ ಕೆಲವೊಂದು ಯೋಜನೆಗಳಿಂದ ಬದಲಾಗಿದ್ದಾರೆ. ದಲಿತರ ಈ ಬದಲಾವಣೆಯೇ ಶೋಷಕ ಸಮಾಜಕ್ಕೆ ಮುಳುವಾಗಿದೆ. ಯಾವ ಜಾತಿಯ ಜನರನ್ನು ಮೇಲ್ ಜಾತಿಯ ಜನರು ಕತ್ತೆಯ ಹಾಗೆ ದುಡಿಸಿಕೊಳ್ಳುತ್ತಿದ್ದರೋ, ಮತ್ತು ಅತ್ಯಂತ ಹೀನಾಯವಾಗಿ ನಡೆಸಿಕೊಳ್ಳುತ್ತಿದ್ದರೋ, ಅಂಥ ದಲಿತರು ತಮ್ಮ ಮುಂದೆ ಎದೆ ಉಬ್ಬಿಸಿ ನಡೆಯುತ್ತಿರುವುದು, ಮೇಲ್‌ಜಾತಿ ಜನರಿಗೆ ನುಂಗಲಾರದ ತುತ್ತಾಗಿದೆ. ಈ ಸಂಗತಿಗಳನ್ನು ಭದ್ರಪ್ಪನವರ ಕಥೆ ಮಾರ್ಮಿಕವಾಗಿ ಚಿತ್ರಿಸುತ್ತದೆ.

ಸರ್ಕಾರದ 'ಗೋ ಹತ್ಯಾ ನಿಷೇಧ' ಕಾನೂನಿನಿಂದ ದನದ ಮಾಂಸ ಆಹಾರವಾಗಿ ಉಳ್ಳವರಿಗೆ ಆಗಿರುವ ತೊಂದರೆ ಮತ್ತು 'ಅನ್ನ ಭಾಗ್ಯ' ಯೋಜನೆ ಕುರಿತು ಮೇಲ್‌ಜಾತಿ ಜನರಲ್ಲಿ ಅಡಗಿ ಕುಳಿತಿರುವ ಅಸಹನೆಯನ್ನು ಕಥೆ ಹೇಳುತ್ತದೆ. ಕಥೆಗಾರರು ಒಂದು ದನದ ಹೆಣವನ್ನು ನೆಪವಾಗಿ ಇಟ್ಟುಕೊಂಡು, ಹಳ್ಳಿಗಳ ಜ್ವಲಂತ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲಿರುವ ಕ್ರಮ ಸಹಜವಾಗಿದೆ. ಹಳ್ಳಿಯ ಬದುಕನ್ನು ಬಲ್ಲವರಿಗೆ, ಕಥೆಯಲ್ಲಿ ಕೃತಕತೆಯಾಗಲೀ, ಉತ್ಪ್ರೇಕ್ಷೆಯಾಗಲೀ ಇಲ್ಲ ಎಂಬುದು ಮನವರಿಕೆಯಾಗದಿರದು. ಕಥೆಯಲ್ಲಿ ಬರುವ ದಾಯಾದಿಗಳ ಮತ್ಸರ, ಎಚ್. ಎಲ್. ನಾಗೇಗೌಡರ 'ದೊಡ್ಡಮನೆ' ಕಾದಂಬರಿಯನ್ನೂ, ಮುಸ್ಲಿಮರು ರಾತ್ರಿ ವೇಳೆಯಲ್ಲಿ ಕದ್ದು ಸತ್ತದನ ಸಾಗಿಸುವುದು ಯು. ಆರ್. ಅನಂತಮೂರ್ತಿ ಅವರ 'ಸಂಸ್ಕಾರ' ಕಾದಂಬರಿಯನ್ನೂ ಮತ್ತು ಕಥೆಯ ಮುಕ್ತಾಯದ ದುರಂತ ರಾವ್‌ಬಹದ್ದೂರ್ ಅವರ 'ಗ್ರಾಮಾಯಣ' ಕಾದಂಬರಿಯನ್ನೂ ಜ್ಞಾಪಕಕ್ಕೆ ತರುತ್ತದೆ.

ಕೊಳೆತ ದನದ ಹತ್ತಿರ ಸಿಡಿಮದ್ದಿನ ಉಂಡೆಯನ್ನಿಟ್ಟು, ಕಾಡು ಹಂದಿಯನ್ನು ಹಿಡಿಯುವ ರೈತನೊಬ್ಬನ ಹುನ್ನಾರ, 'ಬೆಂದ ಮನೆಯಲ್ಲಿ ಬೆಂಕಿ ಕಾಯಿಸಿಕೊಂಡ' ಎಂಬ ನುಡಿಗಟ್ಟನ್ನು, ಸಿಡಿಮದ್ದು ಸಿಡಿದು ಹಂದಿ ನೆಲಕ್ಕುರುಳಿದಾಗ ಅದರ ಒಡೆತನಕ್ಕಾಗಿ ಇಬ್ಬರು ರೈತರು ಕಿತ್ತಾಡುವುದು 'ಕಿರಾತಾರ್ಜುನರ ಕಾಳಗ'ವನ್ನು ನೆನಪಿಗೆ ತರುತ್ತದೆ. ಹೀಗೆ ಈ ಕಥೆ ಒಂದು ಕಾದಂಬರಿಯ ಬಂಧದಲ್ಲಿ ಸಾಗುತ್ತಾ, ಶೂದ್ರರು ಮತ್ತು ಅತಿ ಶೂದ್ರರ ಸೇವೆ ಸಮಾಜಕ್ಕೆ ದೊರೆಯದಿದ್ದರೆ, ಸಮಾಜಕ್ಕೆ ಲಕ್ವ ಹೊಡೆಯುತ್ತದೆ ಎಂಬುದನ್ನು ಸೊಗಸಾಗಿ ಧ್ವನಿಸುತ್ತದೆ. ಇಂಥ ಅದ್ಭುತ ಕಥೆ ಬರೆದ ಲೇಖಕರಿಗೆ ಮತ್ತು ಅದನ್ನು ಪ್ರಕಟಿಸಿದ 'ಹೊಸತು' ಪತ್ರಿಕೆ ಬಳಗಕ್ಕೆ ವಂದನೆಗಳು.

*ಬೆಂಗಳೂರು* ***ಸಿ. ಚಿಕ್ಕತಿಮ್ಮಯ್ಯ, ಹಂದನಕೆರೆ***




ನಾಡಿನಲ್ಲಿ ಪ್ರವಾಹ ಪೀಡಿತರ ಸಮಸ್ಯೆಗಳಿಗೆ ಪರಿಹಾರ ಸಿಗದೇ ರೈತರ ಸಂಕಷ್ಟಗಳು, ಬೆಲೆ ಏರಿಕೆ ತಾಂಡವವಾಡುತ್ತಿರುವ ಸಂದರ್ಭದಲ್ಲಿ ಮತ್ತೆ ಉಪಚುನಾವಣೆಗಳು ಬರುತ್ತಿವೆ. ಚುನಾವಣೆಯ ಸಂದರ್ಭದಲ್ಲಿ ರಾಜಕೀಯ ಪಕ್ಷಗಳಾಗಲೀ ಮಾಧ್ಯಮಗಳಾಗಲೀ ಮೂಲಭೂತ ಸಮಸ್ಯೆಗಳ ಕುರಿತು ಮಾತನಾಡದೇ ಭಾವನಾತ್ಮಕ ವಿಷಯಗಳನ್ನು ಮುನ್ನೆಲೆಗೆ ತಂದು ಮತಯಾಚನೆ ಮಾಡುತ್ತಾರೆ. ಈ ಸಂದರ್ಭದಲ್ಲಾದರೂ ಜನತೆ ಮೋಸ ಹೋಗದೇ ತಾವು ಅನುಭವಿಸುತ್ತಿರುವ ಸಮಸ್ಯೆಗೆ ರಾಜಕೀಯ ಪರಿಹಾರ ಕಂಡುಕೊಳ್ಳಲು ಮುಂದಾಗಬೇಕು. ತಮ್ಮ ಮತಕ್ಕೆ ಮೌಲ್ಯ ತಂದುಕೊಟ್ಟರೆ ಮೌಲ್ಯಗಳು ಸರಕಾರದ ಆಡಳಿತದ ಗುರಿಯೂ ಆಗುತ್ತವೆ. ತುಳಿವವರು ತುಳಿಸಿಕೊಳ್ಳುವವರು ಇರುವ ತನಕ ನಮಗೆ ಸಾಮಾಜಿಕ ನ್ಯಾಯ ಸಿಗುವುದಿಲ್ಲ. ಜನರ ಹೋರಾಟಕ್ಕೆ ಚುನಾವಣೆ ವೇದಿಕೆಯಾಗಲಿ.

*ಕಲಬುರಗಿ* ***ಸಂಗಪ್ಪ ತೌಡಿ***

### ಜನ್ನಾ ಸನದಿ ಯುವ ಸಾಹಿತ್ಯ ಪ್ರಶಸ್ತಿಗೆ ಕೃತಿಗಳ ಆಹ್ವಾನ

ಬೆಳಗಾವಿ : ಇಲ್ಲಿಯ ಬಿ. ಎ. ಸನದಿ ಸಾಂಸ್ಕೃತಿಕ ಪ್ರತಿಷ್ಠಾನವು ಪ್ರತಿ ವರ್ಷ ನೀಡುವ ರಾಜ್ಯಮಟ್ಟದ ಜನ್ನಾ ಸನದಿ ಸಾಹಿತ್ಯ ಪ್ರಶಸ್ತಿಗೆ ೨೦೧೮ರಲ್ಲಿ ಪ್ರಕಟವಾದ ಸಾಹಿತ್ಯದ ಯಾವುದೇ ಪ್ರಕಾರದ ಕೃತಿಯನ್ನು ಆಹ್ವಾನಿಸಲಾಗಿದೆ. ಕೃತಿಯು ಲೇಖಕರ ಪ್ರಥಮ ಕೃತಿಯಾಗಿರಬೇಕು. ಡಿಸೆಂಬರ್ ೨೦೧೮ಕ್ಕೆ ಕೃತಿಕಾರರು ೩೫ ವರ್ಷ ಒಳಗಿನವರಿರಬೇಕು. ಅಂಥವರು ನಾಲ್ಕು ಪ್ರತಿಗಳನ್ನು ಕಳುಹಿಸಬಹುದಾಗಿದೆ. ಪ್ರಶಸ್ತಿಯು ರೂ. ೫,೦೦೦/– ನಗದು, ಗೌರವ ಸಮ್ಮಾನ, ಸ್ಮರಣಿಕೆ ಹಾಗೂ ಪ್ರಶಸ್ತಿ ಪತ್ರವನ್ನು ಒಳಗೊಂಡಿರುತ್ತದೆ. ಆಸಕ್ತರು ತಮ್ಮ ವಯಸ್ಸಿನ ದಾಖಲೆ, ವಿಳಾಸ, ದೂರವಾಣಿ ಸಂಖ್ಯೆ ಇತ್ಯಾದಿಗಳೊಂದಿಗೆ ಕೃತಿಯನ್ನು ಈ ಕೆಳಗಿನ ವಿಳಾಸಕ್ಕೆ ಕಳುಹಿಸಿ.

**ಮೋಹನ ಕಳಸದ**
'ಶ್ರಮಶ್ರೀ', ೨೫, ಶಿಕ್ಷಕರ ಬಡಾವಣೆ, ಖಾಸಬಾಗ
ಬೆಳಗಾವಿ – ೫೯೦ ೦೧೪
(ಮೊಬೈಲ್ : ೯೬೪೫ ೨೧೮೪೭)

**ಈ ವಿಳಾಸಕ್ಕೆ ೦೫–೧೧–೨೦೧೮ರ ಒಳಗೆ ಕಳುಹಿಸಿಕೊಡಲು ಕೋರಲಾಗಿದೆ.**

**ಮೋಹನ ಕಳಸದ**

**ತಿದ್ದುಪಡಿ**

ಕಳೆದ ಸಂಚಿಕೆಯಲ್ಲಿ ಪತ್ರಗಳು ಪುಟದಲ್ಲಿ 'ಟಿಪ್ಪುಯುಗದ ಆಡಳಿತ, ಕೃಷಿ ಮತ್ತು ಉದ್ಯಮ' ಎಂಬ ಪತ್ರದ ಕೊನೆಯಲ್ಲಿ ಸಿ. **ಚಿಕ್ಕತಿಮ್ಮಯ್ಯ ಹಂದನಕೆರೆ** ಎಂದು ಬರಬೇಕಿತ್ತು.



# (ಅ)ಗೋಚರ ಕೈ...




ರೆಕ್ಕೆ ಮುರಿದ
(ಅ)ಗೋಚರ
ಕೈ ಕಾಣದಾಗಿದೆ.

ಸೂರ್ಯನ ನೆರಳೂ ಬೀಳದ ದಟ್ಟಕಾಡು
ಹಾಳು ಸುರಿವ ಒಂಟಿ ಮರದ ಸುಡುಗಾಡು
ತಾಲ್ಲೂಕುಪಟ್ಟಣ ನಗರ ಸಿಟಿ ಬಸ್ನಿಲ್ದಾಣ
ಊರುಕೇರಿ ಹಳ್ಳಿದಿಲ್ಲಿ
ರಾಗದನ್ವೇಷಣೆಯ
ನಾರದ ಲೋಕಸಂಚಾರ

ಮಾಮರವೋ ಮತ್ತೊಂದೊ
ಖುಷಿಯಲಿ ಎದೆಯುಬ್ಬಿ ಬರುವಲ್ಲಿ
ದುಃಖದಿ ಕೊರಳುಬ್ಬಿ ಬಂದಲ್ಲಿ

ತನ್ನದೇ ಹಾಡು
ತನ್ನದೇ ಹೊಸರಾಗ
ಹಾಡುತಾಡುತ ಮೈಮರೆತ ಕೋಗಿಲೆ
ಯ ನರಳಾಡಿದ ಸ್ವರಗಳು
ನಿಂತ ಗಾನ.

ಕೊರಳ ಸೀಳಿ ಕಂಠ ಸಿಗಿದ
(ಅ)ಗೋಚರ
ಕೈ ಕಾಣದಾಗಿದೆ.

ಎಡೆತಾಕಿದೆಡೆ ಬೆಳೆದ ಪೈರು ದವಸ ಧಾನ್ಯ
ಕೊಕ್ಕಿಗೆ ಹಿಡಿಲಾರದಷ್ಟು ಕಾಳ ತಂದು
ಮರಿಗಳಿಗೆ ಉಣಿಸಿದ್ದು ಬರೀ ನೆನಪು.

ಗೂಡಲ್ಲಿ
ಹಸಿದ ಕಂದಮ್ಮಗಳ
ಚಿವ್ ಚಿವ್ ಚೀರಾಟ
ಧಗಧಗ ಉರಿದ ಬಯಲು
ಹೆಕ್ಕಿ ತಂದ ಕಾಳು

ಉರಿ ಜ್ವಾಲೆಗೆ
ಹುರಿಗಾಳು ಕರಕಲು ಕಾಳು

ಗುಬ್ಬಿ ಒಡಲಿಗೆ ಬೆಂಕಿ ಹಚ್ಚಿದ
(ಅ)ಗೋಚರ
ಕೈ ಕಾಣದಾಗಿದೆ.

ನಾಡಗಲ ರೆಕ್ಕೆ ಬಿಚ್ಚಿ
ಸುರ್ರೆಂದು ಭುವಿಗೆ ಜಿಗಿದು
ಸರ್ರೆಂದು ನಭಕೆ ಹಾರುವ ಆರ್ಭಟಕೆ
ಆಕಾಶ ಹೆದರಿದೆ
ಭೂಮಿ ನಡುಗಿದೆ

ಈ ರಣಹದ್ದುಗಳಿಗೆ ಕುದಿರಕ್ತ ಕುಡಿಸಿ
ಹಸಿಮಾಂಸಗಳ ಉಣಿಸಿದ
(ಅ)ಗೋಚರ
ಕೈ ಕಾಣದಾಗಿದೆ.
ತಿರುಗುವ ಕಾಲಚಕ್ರ
ನಿಲ್ಲಿಸುವ
ಕೈಗಳು ಕಾಣುತ್ತಿವೆ.

ಸೋತ ಆ ಕೈಗಳಿಗೆ
ಶಕ್ತಿ ಬರುವುದೆಂತು
ಕಾಲ ಹೇಳಬೇಕಿದೆ.

ಪಾಳೇಗಾರರ ಹುರಿಮೀಸೆ ಮಣ್ಣುಮುಕ್ಕಿ
ಪಾಳುಬಿದ್ದ ಕೋಟೆ ಗೋಡೆ ಚಿತ್ರಗಳಾಗಿ
ರಾಜಾಧಿರಾಜರ ಕಿರೀಟ ಹೊತ್ತ
ರುಂಡಾದಿಗಳು ಕಾಲಗರ್ಭದಲ್ಲಿ ಹೂತು

ದೇಶ ದೇಶಗಳು
ರಾಜ್ಯ ರಾಜ್ಯಗಳು
ಗಡಿರೇಖೆ ಗೀಟು ಎಳೆದು
ಸಾಮಾನ್ಯ ಆಳೋ ಕುರ್ಚಿಯೇರಿದ–
ನಡು ಹೊತ್ತಲ್ಲಿ...

ನಿಸೂರಾಗಿ ಮುಗಿಲೆತ್ತರ
ಹಾರಾಡುತ್ತಿದ್ದ ಪಾರಿವಾಳ
ಧಸ್ಸಕ್ಕೆಂದು ಕುಸಿದು
ಪಕ್ಕೆಯಲ್ಲಿ ರಕ್ತ–
ಹೆಪ್ಪುಗಟ್ಟಿದ ನೆಲ.

**ಚಂದ್ರಪ್ರಭ ಕಠಾರಿ**
ನಲುಮೆ – ೬೬೦, ೮ನೇ ಸಿ ಮೇನ್, ೧ನೇ ಬ್ಲಾಕ್
೩ನೇ ಸ್ಟೇಜ್, ಮಂಜುನಾಥನಗರ
ಬಸವೇಶ್ವರನಗರ ವಾರ್ಡ್, ಬೆಂಗಳೂರು – ೧೦

# ಸಗ್ಗಕ್ಕೆ ಲಗ್ಗೆ ಹಾಕಿದ ನವೆಂಬರ್ ಕ್ರಾಂತಿ

**ಈ ಸುಂದರವಾದ ಬದುಕಿನಲ್ಲಿ ಅನೇಕ ರೀತಿಯ ಚೆಲುವುಗಳಿವೆ. ಭೋರ್ಗರೆಯುವ ಜಲಪಾತದ ಸೊಬಗು, ಸಂಗೀತದ ಇಂಪು, ತಂಗಾಳಿ ತರುವ ಸುವಾಸನೆ, ನಲಿವ ಮಕ್ಕಳ ನಲ್ಮೆಯ ನಗು, ಅರಳುವ ಹೂವಿನ ಚೆಂದ, ಸ್ತ್ರೀ–ಪುರುಷರ ವ್ಯಕ್ತಿತ್ವದ ಸೊಗಸು! ಇದೆಲ್ಲವೂ ಸತ್ಯವೇ; ಆದರೆ ದಮನಿತರ ಕಣ್ಣಿನಲ್ಲಿ ಪ್ರತಿಭಟನೆಯ ಕಿಡಿ ಬೆಳಗುವುದು, ನೊಂದವರ ಬಾಯಲ್ಲಿ ನಿಟ್ಟುಸಿರಿನ ಬದಲು ಭರವಸೆಯ ಹಾಡು ಹೊರಡುವುದು ಅದು ಒಂದು ಇಡಿಯ ಶತಮಾನದ ಸೌಂದರ್ಯವನ್ನೇ ಹರಳುಗಟ್ಟಿಸಿ ಬೆಳಗೀತು. ಅಂಥದೊಂದು ಯುಗಪ್ರವರ್ತಕ ಘಟನೆಯೇ ರಷ್ಯಾದ ಮಹಾನ್ ನವೆಂಬರ್ ಕ್ರಾಂತಿ – ೧೯೧೭!**

**ಡಾ|| ಬಿ. ಆರ್. ಮಂಜುನಾಥ್**

**ಕತೆಗೆ ಮುನ್ನ...**

ಇಂಗ್ಲೆಂಡ್, ಫ್ರಾನ್ಸ್, ಮೊದಲಾದ ದೇಶಗಳು ರಾಜಸತ್ತೆಯನ್ನು ಕಿತ್ತೆಸೆದು ಬಂಡವಾಳಶಾಹಿ ಜನತಂತ್ರವನ್ನು ಸ್ಥಾಪಿಸಿಕೊಂಡು ನೂರಿನ್ನೂರು ವರ್ಷಗಳೇ ಕಳೆದಿದ್ದವು. ಆದರೆ ಜಾರ್ ಚಕ್ರವರ್ತಿಯ ಕಪಿಮುಷ್ಠಿಯಲ್ಲಿ ಬೃಹತ್ತಾದ ರಷ್ಯನ್ ಚಕ್ರಾಧಿಪತ್ಯ ನಲುಗುತ್ತಿತ್ತು. ಕ್ರೂರವಾದ ಜೀತಪದ್ಧತಿಯಲ್ಲಿ, ಕಾಡುವ ಬಡತನದಲ್ಲಿ ರೈತಾಪಿಗಳು ನರಳುತ್ತಿದ್ದರು. ಕಾರ್ಖಾನೆಗಳಲ್ಲಿ ಕಾರ್ಮಿಕರು ರಕ್ಷಣಾ ಕಾನೂನುಗಳಿಲ್ಲದೆ, ಸುಧಾರಣೆಗಳಿಲ್ಲದೆ ನಲುಗುತ್ತಿದ್ದರು. ಬಹುತೇಕ ಜನ ಅನಕ್ಷರಸ್ಥರು. ಪೀಡಿಸುವ ಬರಗಾಲಗಳು. ಮಧ್ಯಮವರ್ಗ ಮತ್ತು ಬುದ್ಧಿಜೀವಿಗಳು ಸ್ವಾತಂತ್ರ್ಯದ ಅಭಾವದಿಂದಾಗಿ ದನಿ ಕಳೆದು ಕೊಂಡಿದ್ದರು. ಸ್ವಾತಂತ್ರ್ಯಪೂರ್ವ ಭಾರತಕ್ಕಿಂತ ಭೀಕರ ಪರಿಸ್ಥಿತಿ ಅದು. ಆದ್ದರಿಂದಲೇ ಅದು 'ಯೂರೋಪಿನ ರೋಗಿ' ಎಂದು ಕರೆಸಿಕೊಂಡಿದ್ದು.

ಇಂಥ ಅನ್ಯಾಯದ ವಿರುದ್ಧ ಚೆರ್‌ನಿಶೈವ್‌ಸ್ಕಿಯಂತಹ ಅನೇಕ ಲೇಖಕರು, ಹೋರಾಟಗಾರರು ದನಿ ಎತ್ತಿದರು. ಆರಂಭದಲ್ಲಿ ಕ್ರಾಂತಿಕಾರಿ ಹೋರಾಟವು ಹೆಚ್ಚಾಗಿ ಉಗ್ರವಾದ ಮತ್ತು ಹಿಂಸೆಯನ್ನೇ ನೆಚ್ಚಿಕೊಂಡಿತ್ತು.

**ಮಾರ್ಕ್ಸ್‌ವಾದ ಮತ್ತು ಕ್ರಾಂತಿಕಾರಿ ಪಕ್ಷದ ಉಗಮ**

ಅಂಥ ಹಿಂಸಾತ್ಮಕ ವಿಧಾನಗಳಿಂದ ಜಾರ್‌ನ ದಮನ ಹೆಚ್ಚಾಗಿತ್ತು. ಚಳುವಳಿಯು ಪದೇ ಪದೇ ದಿಕ್ಕು ತಪ್ಪಿತು. ಆಗ ಹೋರಾಟಗಳಲ್ಲಿ ಭಾಗವಹಿಸುತ್ತಿದ್ದ ಜಾರ್ಜಿ ಪ್ಲೆಖನೋವ್ ಎಂಬ ಯುವಕ ವಿಭಿನ್ನ ಹಾದಿಯನ್ನು ತುಳಿದರು. ಕಾರ್ಲ್ ಮಾರ್ಕ್ಸ್‌ರವರ ಗೆಳೆಯ, ಸಂಗಾತಿ ಫ್ರೆಡರಿಕ್ ಎಂಗೆಲ್ಸ್‌ರವರ ಸಂಪರ್ಕಕ್ಕೆ ಬಂದ ಆತ ಸ್ಪಷ್ಟವಾಗಿ ಮಾರ್ಕ್ಸ್‌ವಾದಕ್ಕೆ ಬದ್ಧವಾದ 'ಎಮಾನ್ಸಿಪೇಶನ್ ಆಫ್ ಲೇಬರ್ ಗ್ರೂಪ್' ಎಂಬ ಸಂಘಟನೆಯನ್ನು ೧೮೮೩ರಲ್ಲಿ ದೇಶದಿಂದ ಹೊರಗೆ ಸ್ಥಾಪಿಸಿದರು.

ಇತ್ತ ರಷ್ಯಾದಲ್ಲಿ ವ್ಲಾಡಿಮಿರ್ ಇಲ್ಯಿಚ್ ಉಲ್ಯಾನೋವ್ ಎಂಬ ೧೮೭೦ರಲ್ಲಿ ಜನಿಸಿದ ಹುಡುಗ ವೇಗವಾಗಿ ಕ್ರಾಂತಿಕಾರಿಯಾಗಿ ರೂಪುಗೊಂಡ. ತನ್ನ ಹದಿನೇಳನೆಯ ವಯಸ್ಸಿನಲ್ಲಿಯೇ ಆತ ಎರಡು ಆಘಾತಗಳನ್ನು ಎದುರಿಸಬೇಕಾಯಿತು. ಅಣ್ಣ ಅಲೆಕ್ಸಾಂಡರ್‌ನನ್ನು ಉಗ್ರಗಾಮಿ ಚಟುವಟಿಕೆಗಾಗಿ ಗಲ್ಲಿಗೇರಿಸಲಾಯಿತು. ಅದೇ ದಿನಗಳಲ್ಲಿಯೇ ಆತ ಜಾರ್‌ನ ವಿರುದ್ಧ ಪ್ರತಿಭಟಿಸಿದ್ದಕ್ಕಾಗಿ ಜಿಲ್ಲೆಯಿಂದ ಗಡಿಪಾರಾಗಿ, ಶಿಕ್ಷಣಕ್ಕೆ ಅಡಚಣೆ ಬಂತು. ಅಂತೂ ಇಂತೂ ವಕೀಲನಾದ ಈ ಯುವಕ ಕ್ರಾಂತಿಕಾರಿ ವಲಯಗಳಲ್ಲಿ ಲೆನಿನ್ ಎಂಬ ಗುಪ್ತನಾಮದಿಂದ ಕರೆಯಲ್ಪಟ್ಟ. ವಕೀಲನಾದರೂ ಕ್ರಾಂತಿಕಾರಿ ಚಟುವಟಿಕೆಗಳಲ್ಲಿ ಭಾಗಿಯಾಗಿ ಸೈಬೀರಿಯಾಗೆ ಗಡಿಪಾರಾದ ಲೆನಿನ್ ಅಲ್ಲಿಯೇ ತನ್ನ ಸಹಕ್ರಾಂತಿಕಾರಿ ಕ್ರುಪ್‌ಸ್ಕಾಯಾರನ್ನು ಮದುವೆಯಾದರು. ಬಿಡುಗಡೆಯಾದ ಮೇಲೆ ವಿದೇಶಕ್ಕೆ ಪಯಣಿಸಿ ಅಲ್ಲಿ ಪ್ಲೆಖನೋವ್ ಮೊದಲಾದ ಕ್ರಾಂತಿಕಾರಿಗಳನ್ನು ಭೇಟಿಯಾಗಿ ಅವರೊಂದಿಗೆ ರಷ್ಯನ್ ಸೋಷಿಯಲ್ ಡೆಮಾಕ್ರಟಿಕ್ ಲೇಬರ್ ಪಾರ್ಟಿಯನ್ನು ಹುಟ್ಟುಹಾಕಿದರು.

ಅನೇಕ ಬುದ್ಧಿಜೀವಿಗಳಿಂದ ತುಂಬಿದ್ದು ಅಶಿಸ್ತು ಮತ್ತು ಅರಾಜಕತೆಗಳಿಗೆ ತುತ್ತಾಗಿದ್ದ ಪಕ್ಷದಲ್ಲಿ ಒಂದು ವ್ಯವಸ್ಥೆಯನ್ನು ತರಲು ಲೆನಿನ್ ಹೆಣಗಾಡಿದರು. ಕಡೆಗೂ ಜನತಂತ್ರವನ್ನೂ ಕೇಂದ್ರೀಯವಾದವನ್ನೂ ಮೇಳೈಸಿದ 'ಜನತಾಂತ್ರಿಕ ಕೇಂದ್ರೀಯವಾದದ ಆಧಾರದ ಮೇಲೆ, ಕಾರ್ಮಿಕ ವರ್ಗದ ಮುಂಚೂಣಿ ಪಕ್ಷವಾಗಿರುವಂಥ ಮಾರ್ಕ್ಸ್‌ವಾದಿ ಪಕ್ಷವನ್ನು ಸ್ಥಾಪಿಸಬೇಕೆಂಬ ಅವರ ವಾದಕ್ಕೆ ಮನ್ನಣೆ ದೊರಕಿತು. ಒಂದು 'ಹೊಸ ರೀತಿಯ ಪಕ್ಷ' ಅಸ್ತಿತ್ವಕ್ಕೆ ಬಂತು. ಪಕ್ಷದಲ್ಲಿ ಅವರ ಚಿಂತನೆಗೆ ಬಹುಮತದ ಬೆಂಬಲ ದೊರಕಿದ ಮೇಲೆ ರಷ್ಯನ್ ಸೋಷಿಯಲ್ ಡೆಮಾಕ್ರಟಿಕ್ ಪಾರ್ಟಿ (ಬೋಲ್ಶೆವಿಕ್ – ಬಹುಮತ) ಜನ್ಮತಾಳಿತು.

**ಲೆನಿನ್‌ವಾದದ ಉಗಮ**

ಇದೆಲ್ಲಾ ಘಟಿಸುವುದಕ್ಕೆ ಸುಮಾರು ಹದಿನೈದು ವರ್ಷಗಳ ಮೊದಲು ತೀರಿಕೊಂಡಿದ್ದ ಕಾರ್ಲ್ ಮಾರ್ಕ್ಸ್ ಅಂದಿನ ನಾಗರಿಕ ಜಗತ್ತಿನ ಚಿಂತಕರ ನಡುವೆ ಅನಭಿಷಿಕ್ತ ಸಾರ್ವಭೌಮನಾಗಿ ಸ್ಥಾಪಿತವಾಗಿದ್ದರು. ಅವರು ನೀಡಿದ ಹೊಸ ತತ್ವಶಾಸ್ತ್ರ, ಇತಿಹಾಸವನ್ನು ಅವರು ವೈಜ್ಞಾನಿಕವಾಗಿ ವಿಶ್ಲೇಷಿಸಿದ್ದುದು, ಬಂಡವಾಳಶಾಹಿ ವ್ಯವಸ್ಥೆಯ ಉಗಮ, ವಿಕಸನ ಮತ್ತು ವಿನಾಶದ ಕುರಿತು ಆತ ನೀಡಿದ ಮುನ್ನೋಟ ಇವೆಲ್ಲಾ ಕಾರ್ಮಿಕ ವರ್ಗದ ಕ್ರಾಂತಿಕಾರಿ ಹೋರಾಟಕ್ಕೆ ಹೊಸ ಸ್ಫೂರ್ತಿ, ಧ್ಯೇಯಗಳನ್ನು ತುಂಬಿತ್ತು.





ಮಾರ್ಕ್ಸ್‌ರವರು ಬಂಡವಾಳವಾದವು ಕೊಳೆತು, ನಂತರ ಖಾಸಗಿ ಆಸ್ತಿರಹಿತವಾದ ಸಮಾಜವಾದಕ್ಕೆ ಎಡೆಮಾಡಿಕೊಡುತ್ತದೆ ಮತ್ತು ಅಂಥ ಕ್ರಾಂತಿಕಾರಿ ಬದಲಾವಣೆಯ ಆಂದೋಲನಕ್ಕೆ ತನ್ನದೆಂಬುದೆಲ್ಲವನ್ನೂ ಕಳೆದುಕೊಂಡ ಕಾರ್ಮಿಕವರ್ಗವು ಮಾತ್ರ ನೇತೃತ್ವ ನೀಡಲು ಸಾಧ್ಯ ಎಂದು ಪ್ರತಿಪಾದಿಸಿದ್ದರು. ಆದರೆ ರಷ್ಯಾದಲ್ಲಿ ಇಂಗ್ಲೆಂಡ್, ಫ್ರಾನ್ಸ್, ಜರ್ಮನಿಗಳಲ್ಲಾದಂತೆ ಕೈಗಾರಿಕಾ ಬೆಳವಣಿಗೆಯಾಗದೆ ಇದ್ದು ಕಾರ್ಮಿಕರ ಸಂಖ್ಯೆ ಕಡಿಮೆ ಇತ್ತು. ಬಹುದೊಡ್ಡ ಸಂಖ್ಯೆಯಲ್ಲಿದ್ದ ರೈತಾಪಿಗಳು ಪ್ರಗತಿ ವಿರೋಧಿ ಎಂದು ಭಾವಿಸಲಾಗಿತ್ತು. ಹಾಗಾಗಿ ಮಾರ್ಕ್ಸ್‌ವಾದವನ್ನು ರಷ್ಯಾಗೆ ಅನ್ವಯಿಸುವುದು ಸಾಧ್ಯವಿಲ್ಲ, ಸದ್ಯಕ್ಕೆ ಸಮಾಜವಾದದ ಮಾತೆತ್ತುವುದೂ ಸರಿಯಲ್ಲ ಎಂದು ಭಾವಿಸಿದ 'ಮಾರ್ಕ್ಸ್‌ವಾದಿ'ಗಳಿದ್ದರು.

ಆದರೆ ಪ್ಲೆಖನೊವ್ ರಷ್ಯಾದಲ್ಲಿ ಬಂಡವಾಳವಾದ ಬೆಳೆಯುತ್ತಿದೆ ಎಂಬುದನ್ನು ತೋರಿಸಿದ್ದರು. ಅದನ್ನು ಮುಂದುವರೆಸಿದ ಲೆನಿನ್ ರೈತರಲ್ಲಿ ಒಂದು ಸಣ್ಣ ಭಾಗ ಮಾತ್ರ ಬಂಡವಾಳಶಾಹಿ ರೈತರಾಗುತ್ತಿದ್ದಾರೆ, ಇದು ಪ್ರತಿಗಾಮಿ ವರ್ಗ. ಆದರೆ ಬಹಳ ದೊಡ್ಡ ಭಾಗ ಕಡುಬಡವರಾದ ರೈತಾಪಿಗಳು. ಅವರಿಗೆಲ್ಲಾ ತುಂಡು ಭೂಮಿ ಹಂಚಿದರೂ ಅವರ ಸಮಸ್ಯೆ ಪರಿಹಾರವಾಗದು. ಅವರಿಗೆ ಸಮಸ್ಯೆಯನ್ನು ಮನವರಿಕೆ ಮಾಡಿ ಸಂಘಟಿಸಿದರೆ ಅವರು ಕಾರ್ಮಿಕರ ದೃಢವಾದ ಮಿತ್ರಶಕ್ತಿಯಾಗುತ್ತಾರೆ ಎಂದು ಬಲವಾಗಿ ಪ್ರತಿಪಾದಿಸಿದರು.

**ಲೆನಿನ್‌ವಾದದ ಉಗಮ**

ಮಾರ್ಕ್ಸ್-ಎಂಗೆಲ್ಸ್ ತಮ್ಮ ಕಾಲದಲ್ಲಿ ಸರಿಯಾಗಿಯೇ ಹೇಳಿದಂತಹ, 'ಕಾರ್ಮಿಕ ವರ್ಗದ ಕ್ರಾಂತಿಯು ಮೊದಲು ಮುಂದುವರೆದ ಕೈಗಾರಿಕಾ ರಾಷ್ಟ್ರಗಳಲ್ಲಿ ಮಾತ್ರ ಘಟಿಸುವುದು' ಎಂಬ ವ್ಯಾಖ್ಯಾನಕ್ಕೆ ಬದಲಾದ ಪರಿಸ್ಥಿತಿಯಲ್ಲಿ ಸಹ ಅಂಟಿಕೊಂಡಿದ್ದ ಜಡಗೊಂಡ ನಾಯಕರ ವಿರುದ್ಧ ಲೆನಿನ್ ತಿರುಗಿಬಿದ್ದರು. ಇದೀಗ ಬಂಡವಾಳವಾದವು ತನ್ನ ಕೊನೆಯ ಘಟ್ಟಕ್ಕೆ ಬಂದಿದೆ. ಇದು ಸಾಯುತ್ತಿರುವ, ಪರೋಪಜೀವಿಯಾದ ಬಂಡವಾಳವಾದ. ಬಂಡವಾಳವನ್ನೇ ಹಿಂದುಳಿದ ದೇಶಗಳಿಗೆ ರಫ್ತು ಮಾಡಿ ಅಲ್ಲಿನ ಅಗ್ಗದ ಶ್ರಮಶಕ್ತಿ, ಆಂತರಿಕ ಮಾರುಕಟ್ಟೆ ಹಾಗೂ ಸಂಪನ್ಮೂಲಗಳನ್ನು ವಿಸ್ತೃತವಾಗಿ ಶೋಷಿಸುತ್ತಿರುವ ಬಂಡವಾಳವಾದ. ಇದು ಇಡೀ ಜಗತ್ತಿನ ಎಲ್ಲ ದೇಶಗಳನ್ನು ಒಂದು ಸರಪಳಿಯ ಕೊಂಡಿಗಳಂತೆ ಬೆಸೆದಿದೆ. ಇದು ತೀವ್ರ ಒತ್ತಡದ ಎಳೆತಕ್ಕೆ ತುತ್ತಾದಾಗ ತನ್ನ ದುರ್ಬಲ ಕೊಂಡಿಯಲ್ಲಿ ಮುರಿದುಬೀಳುತ್ತದೆ. ಅದು ಮುಂದುವರಿದ ರಾಷ್ಟ್ರವೇ ಆಗಬೇಕಾಗಿಲ್ಲ. ರಷ್ಯಾದಂಥ ದುರ್ಬಲ ರಾಷ್ಟ್ರದಲ್ಲೂ ಕಾರ್ಮಿಕ ವರ್ಗದ ನೇತೃತ್ವದಲ್ಲಿ ಕ್ರಾಂತಿ ಘಟಿಸಬಹುದು. ಇದು ಸಾಮ್ರಾಜ್ಯಶಾಹಿ ಮತ್ತು ಶ್ರಮಜೀವಿ ವರ್ಗ ಕ್ರಾಂತಿಯ ಯುಗ. ಈ ಯುಗದಲ್ಲಿ ಕಾರ್ಮಿಕ ವರ್ಗವು ನೇತೃತ್ವ ನೀಡಿದ ಕ್ರಾಂತಿ ಮಾತ್ರ ಜನತಾಂತ್ರಿಕ ಆಶಯಗಳನ್ನು ಪೂರೈಸಲು ಸಾಧ್ಯ. ಆದ್ದರಿಂದ ನಾವು ಹಳೆಯ ಜನತಾಂತ್ರಿಕ ಕ್ರಾಂತಿಗಳಿಗೆ, ತನ್ಮೂಲಕ ಅಸ್ತಿತ್ವಕ್ಕೆ ಬಂದು ಮಾಗಿ ಉದುರಿಹೋಗುವ ಬಂಡವಾಳವಾದಕ್ಕೆ ಕಾಯಲು ಸಾಧ್ಯವಿಲ್ಲ. ಇದು ಲೆನಿನ್ ಪ್ರತಿಪಾದನೆಯ ಸಾರಾಂಶ.

ಈ ಹೊಸ ಚಿಂತನೆಗಳ ಜೊತೆಗೆ ಹೊಸ ಮಾದರಿಯ ಪಕ್ಷವನ್ನೂ ಹುಟ್ಟುಹಾಕಿದ ಲೆನಿನ್ ಕ್ರಾಂತಿಯ ಪ್ರಶ್ನಾತೀತ ನಾಯಕರಾಗಿ ಹೊರಹೊಮ್ಮಲಾರಂಭಿಸಿದರು. ಪ್ಲೆಖನೊವ್, ಮಾರ್ಟೊವ್, ಆಕ್ಸೆಲ್‌ರಾಡ್ ಎಲ್ಲರನ್ನೂ ಹಿಂದಿಕ್ಕಿದರು. ಸ್ಟಾಲಿನ್ ಒಮ್ಮೆ ಹೇಳಿದಂತೆ 'ಯಾರೂ ಸ್ಥಾನಪಲ್ಲಟ ಮಾಡಲಾಗದ ಹನ್ನೆರಡು ದೊಡ್ಡ ನಾಯಕರನ್ನು ಒಬ್ಬ ಲೆನಿನ್ ಸ್ಥಳಾಂತರಿಸಿದ್ದರು!'

**ಭುಗಿಲೆದ್ದ ಕ್ರಾಂತಿ**

ಅತೃಪ್ತಿಯಿಂದ ಕುದಿಯುತ್ತಿದ್ದ ಬಡರೈತ-ಕಾರ್ಮಿಕರು, ಅಸಮಾಧಾನ ಹೆಪ್ಪುಗಟ್ಟುತ್ತಿದ್ದ ಮಧ್ಯಮ ವರ್ಗ ಜನತಾಂತ್ರಿಕ ಸುಧಾರಣೆಗಳಿಗಾಗಿ ತಹತಹಿಸುತ್ತಿದ್ದವು. ಅದು ಪದೇ ಪದೇ ಸಮರಶೀಲವಾಗಿ ಹೋರಾಟಗಳಾಗಿ ಸ್ಫೋಟಿಸುತ್ತಿತ್ತು. ಈ ಗತಿಯಲ್ಲಿ ೧೯೦೫ರಲ್ಲಿ ಘಟಿಸಿದ ಕ್ರಾಂತಿ ವಿಫಲವಾದರೂ ಅದು ಅನನ್ಯವಾದ ಪಾಠಗಳನ್ನು ದಮನಿತ ವರ್ಗಗಳಿಗೆ ನೀಡಿತ್ತು.

ಇನ್ನೊಂದೆಡೆ ಪ್ರತಿಗಾಮಿ ಅಲೆ, ದುರ್ಭರವಾದ ಪೊಲೀಸ್ ಮರ್ದನ ಅನೇಕ ವರ್ಷಗಳ ಕಾಲ ಮುಂದುವರೆಯಿತು. ಸಾವಿರಾರು ಕ್ರಾಂತಿಕಾರಿಗಳು ಜೀವ ಕಳೆದುಕೊಂಡರು, ಇನ್ನಷ್ಟು ಸಾವಿರ ಸಮರಶೀಲ ಕ್ರಾಂತಿಕಾರಿಗಳು ಗಡಿಪಾರಾದರು. ಹೋರಾಟ ನೆಲಕಚ್ಚಿದಂತೆ ಭಾಸವಾಗುತ್ತಿತ್ತು. ಇಂಥ ಸಂದರ್ಭದಲ್ಲೇ ಜಾಗತಿಕ ಮಾರುಕಟ್ಟೆಯ ಪುನರ್‌ವಿಂಗಡಣೆಗಾಗಿ ಇಂಗ್ಲೆಂಡ್-ಫ್ರಾನ್ಸ್ ಒಂದು ಕಡೆ, ಜರ್ಮನಿ ಆಸ್ಟ್ರೀಯಾ-ಟರ್ಕಿ ಇನ್ನೊಂದು ಕಡೆ ಕೂಟ ರಚಿಸಿಕೊಂಡು ಮೊದಲ ಮಹಾಯುದ್ಧವನ್ನು ಆರಂಭಿಸಿದವು. ತಾನೂ ಪ್ರಾಬಲ್ಯಕ್ಕಾಗಿ ಹಂಬಲಿಸುತ್ತಿದ್ದ ಜಾರ್ ಅನವಶ್ಯವಾಗಿ ರಷ್ಯಾ ದೇಶವನ್ನು ಇಂಗ್ಲೆಂಡ್-ಫ್ರಾನ್ಸ್‌ನೊಂದಿಗೆ ಯುದ್ಧಕ್ಕೆ ತಳ್ಳಿದ. ರಷ್ಯಾದ ಸೈನಿಕರು ಅತ್ಯಂತ ಶಸ್ತ್ರಸಜ್ಜಿತವಾದ ಜರ್ಮನ್ ಸೈನ್ಯದೆದುರು ತತ್ತರಿಸಿದರು. ಸಾವು, ನೋವು, ಸೋಲಿನ ಮೇಲೆ ಸೋಲಿನಿಂದ ಕಂಗೆಟ್ಟ ಸೈನಿಕರು ಹೊಟ್ಟೆಗಿಲ್ಲದೆ, ಚಿಕಿತ್ಸೆಯಿಲ್ಲದೆ, ಕ್ರೂರ ಚಳಿಯಲ್ಲಿ ಬೂಟುಗಳೂ ಇಲ್ಲದೆ ಮಿಡತೆಗಳಂತೆ ಸತ್ತರು. ಇನ್ನೊಂದೆಡೆ ರಷ್ಯಾದಲ್ಲಿ ಕ್ಷಾಮ-ಡಾಮರ ಕಾಣಿಸಿಕೊಂಡಿತು.

ಈ ಎಲ್ಲ ಕಾರಣಗಳಿಂದ ಬಿಗಡಾಯಿಸಿದ ಪರಿಸ್ಥಿತಿಯು ಒಂದು ಕ್ರಾಂತಿಕಾರಿ ಬಿಕ್ಕಟ್ಟಾಗಿ ಪರಿವರ್ತಿತಗೊಂಡಿತು. ಲೆನಿನ್‌ರ ಭಾಷೆಯಲ್ಲೇ ಹೇಳಬೇಕೆಂದರೆ "ಆಳುವ ವರ್ಗವು ಹಿಂದಿನಂತೆ ಆಳುವ ಶಕ್ತಿಯನ್ನು ಹೊಂದಿರಲಿಲ್ಲ, ಆಳಿಸಿಕೊಳ್ಳುವವರು ಹಿಂದಿನಂತೆ ಆಳಿಸಿಕೊಳ್ಳಲು ಸಿದ್ಧರಿರಲಿಲ್ಲ." ಕ್ರಾಂತಿ ಸ್ಫೋಟಗೊಳ್ಳುವ ಘಳಿಗೆ ಅದು. ಬೊಲ್ಶೆವಿಕ್ ಪಕ್ಷವಲ್ಲದೆ ಇನ್ನೂ ಅನೇಕ ಪಕ್ಷಗಳು ಒಂದಾಗಿ ಜಾರ್‌ನನ್ನು ಪದಚ್ಯುತಗೊಳಿಸಿದವು. ಇದೇ ೧೯೧೭ರ ಫೆಬ್ರವರಿ ತಿಂಗಳ ಜನತಾಂತ್ರಿಕ ಕ್ರಾಂತಿ. ಕ್ರಾಂತಿಯ ನಂತರ ಕೆರೆನ್‌ಸ್ಕಿ ಎಂಬ ಕ್ಯಾಡೆಟ್ ಪಕ್ಷದ ನಾಯಕ ಸರ್ಕಾರದ ನೇತೃತ್ವವನ್ನು ವಹಿಸಿಕೊಂಡ. ಆದರೆ ಆತ ರೈತ-ಕಾರ್ಮಿಕರ ಮತ್ತು ಸೈನಿಕರ ನೋವುಗಳನ್ನು ಪರಿಹರಿಸಲು ಯಾವ ಕ್ರಮವನ್ನೂ ಕೈಗೊಳ್ಳಲಿಲ್ಲ. ೧೯೦೫ರ ವಿಫಲಕ್ರಾಂತಿಯ ನಂತರ ದೇಶದಾದ್ಯಂತ ಸೋವಿಯತ್ ಎಂಬ ಜನಸಮಿತಿಗಳು ಪ್ರಬಲವಾಗಿ ಜನತೆಯ ದನಿಯಾಗಿದ್ದವು; ಅನೇಕ ಜನಪರ ಬೇಡಿಕೆಗಳನ್ನು ಮುಂದಿಡುತ್ತಿದ್ದವು.

ಇಂಥ ಸಂದರ್ಭದಲ್ಲಿ ಹೊರದೇಶದಲ್ಲಿದ್ದು ಅಲ್ಲಿಂದಲೇ ಕ್ರಾಂತಿಯ ಮುನ್ನಡೆಗೆ ಮಾರ್ಗದರ್ಶನ ನೀಡುತ್ತಿದ್ದ ಲೆನಿನ್, ಏಪ್ರಿಲ್ ತಿಂಗಳಿನಲ್ಲಿ ರಷ್ಯಾಗೆ ಮರಳಿದರು. ಕೆರೆನ್‌ಸ್ಕಿ ಸರ್ಕಾರ ಯಾವುದೇ ಜನಪರ ಹೆಜ್ಜೆ ತೆಗೆದುಕೊಳ್ಳದೆ ಬಂಡವಾಳಶಾಹಿಗಳ ಸೇವೆಗೆ ಸಜ್ಜಾಗಿರುವುದನ್ನು ಅವರು ಗಮನಿಸಿದರು. ರಷ್ಯಾದ ಆರ್ಥಿಕತೆ ಎಷ್ಟೇ ಹಿಂದುಳಿದಿರಲಿ, ಈಗ ಅಧಿಕಾರಕ್ಕೆ ಬಂದಿರುವುದು ಮತ್ತು ಜನವಿರೋಧಿ ನಿಲುವುಗಳನ್ನು ತೆಗೆದುಕೊಳ್ಳುತ್ತಿರುವುದು ಕೆರೆನ್‌ಸ್ಕಿ ನೇತೃತ್ವದ ಬಂಡವಾಳಶಾಹಿ ವರ್ಗ. ಆದ್ದರಿಂದ ಈಗಿರುವ ಕ್ರಾಂತಿಕಾರಿ ಪರಿಸ್ಥಿತಿಯಲ್ಲಿ, ಎರಡನೆಯ ಕ್ರಾಂತಿಯಾಗಬೇಕು ಮತ್ತು ಅದು ಬಂಡವಾಳಶಾಹಿ ವಿರೋಧಿ ಸಮಾಜವಾದಿ ಕ್ರಾಂತಿಯಾಗಬೇಕು ಎಂದು ಅವರು ಘೋಷಿಸಿದರು. ಇದಕ್ಕಾಗಿ ಅವರು ಮಂಡಿಸಿದ ಸಿದ್ಧಾಂತವೇ ಹೆಸರಾಂತ 'ಏಪ್ರಿಲ್ ಥೀಸಿಸ್.'

ರಷ್ಯಾದಲ್ಲಿ ಜಗತ್ತಿನ ಇತರ ಭಾಗಗಳಿಗೂ ಹೊಂದಿಕೆಯಾಗುವಂತೆ ತಂದ ಹೊಸ ಕ್ಯಾಲೆಂಡರ್ ಲೆಕ್ಕದ ಪ್ರಕಾರ ಕ್ರಾಂತಿಯು ನವೆಂಬರ್ ೭ರಿಂದ ೧೭ರವರೆಗೆ ಜರುಗಿದ ಮಹಾಕ್ರಾಂತಿಯಾಯಿತು. (ಹಳೆಯ ಕ್ಯಾಲೆಂಡರ್‌ನಂತೆ ಅಕ್ಟೋಬರ್ ಕ್ರಾಂತಿ).

**ಅನ್ನ, ಭೂಮಿ, ಶಾಂತಿ ಮತ್ತು ಸೋವಿಯತ್**

ಯುದ್ಧದಿಂದಲೂ, ಹಸಿವಿನಿಂದಲೂ, ಬಡತನದಿಂದಲೂ ಕಂಗೆಟ್ಟ ಜನತೆಯ ನಾಡಿ ಮಿಡಿತವನ್ನು ಚೆನ್ನಾಗಿ ಬಲ್ಲ ಲೆನಿನ್ ಹಸಿದವರಿಗೆ ಅನ್ನ, ರೈತಾಪಿಗಳಿಗೆ ಭೂಮಿ ಮತ್ತು ಸೈನಿಕರಿಗಾಗಿ ಶಾಂತಿಯ ಬೇಡಿಕೆಗಳನ್ನು ಕ್ರಾಂತಿಯ

ಈಡೇರಿಸಲೇಬೇಕು ಎಂದು ಪಟ್ಟುಹಿಡಿದಿದ್ದರು. ಇದಲ್ಲದೆ ಸಮಾಜವಾದಿ ಜನತಂತ್ರ ಅಸ್ತಿತ್ವಕ್ಕೆ ಬರಬೇಕೆಂದರೆ ಎಲ್ಲ ಅಧಿಕಾರ ಸೋವಿಯತ್‌ಗಳಿಗೇ ಸಿಗಬೇಕು ಎಂಬುದು ಅವರ ಅಚಲ ನಿಲುವು.

ಕ್ರಾಂತಿಯ ಸಮಯದಲ್ಲಿ ಅಲ್ಲಿಗೆ ಹೋದ ಅನೇಕ ವಿದೇಶಿ ಪತ್ರಕರ್ತರು ಜೀವದ ಹಂಗು ತೊರೆದು ಅಲ್ಲಿನ ಆಗುಹೋಗುಗಳನ್ನು ವರದಿ ಮಾಡಿದ್ದಾರೆ. ಜಾನ್ ರೀಡ್, ಲೂಯಿ ಬ್ರಾಂಟ್ ಮುಂತಾದವರು ಅದರಲ್ಲಿ ಮುಖ್ಯರು. ಅವರು ಅಂದಿನ ರೋಚಕವಾದ, ಹೃದಯಸ್ಪರ್ಶಿಯಾದ ಘಟನೆಗಳನ್ನು ದಾಖಲಿಸಿದ್ದಾರೆ. ಇಡಿಯ ದಿನ ದುಡಿದು, ದಿನಗಟ್ಟಲೆ ನಿದ್ದೆಗೆಟ್ಟು ಬಸವಳಿದ ಲೆನಿನ್ ಕ್ರಾಂತಿಯ ದಿನಗಳ ಒಂದು ರಾತ್ರಿ ವಿಶ್ರಾಂತಿಗಾಗಿ ತನ್ನ ಪುಟ್ಟ ಮನೆಗೆ ಬರಲು ಸಮ್ಮತಿಸಿದ್ದನ್ನು ಬ್ರುಯೆವಿಚ್ ಎಂಬ ಸಂಗಾತಿ ದಾಖಲಿಸಿದ್ದಾರೆ. ಲೆನಿನ್‌ಗಾಗಿ ಆತ ತನ್ನ ಹಾಸಿಗೆಯನ್ನು ನೀಡಿ ದೀಪ ಆರಿಸಿ ಮಲಗಿಕೊಂಡ. ಲೆನಿನ್ ಉದ್ವಿಗ್ನರಾಗಿದ್ದರು. ಸ್ವಲ್ಪಹೊತ್ತಿನನಂತರ ಸದ್ದಾಗದಂತೆ ಎದ್ದು ಎಲ್ಲ ಬಡರೈತರಿಗೂ ಭೂಮಿ ಹಂಚುವ ಐತಿಹಾಸಿಕ ಡಿಕ್ರಿಯನ್ನೂ, ಇನ್ನಿತರ ದಾಖಲೆಗಳನ್ನು ಮುಂಜಾವಿನವರೆಗೂ ಬರೆದು ಮುಗಿಸಿದರು. ಆಮೇಲೆಯೇ ಅವರಿಗೆ ನೆಮ್ಮದಿ.

ಕ್ರಾಂತಿಯ ಸಿದ್ಧತೆಯುದ್ದಕ್ಕೂ ಲೆನಿನ್‌ರವರ ಅನೇಕ ಅನನ್ಯ ಗುಣಗಳು ನಮ್ಮ ಕಣ್ಣು ಕುಕ್ಕುತ್ತವೆ. ಸಂಘಟನೆಯ ಶಿಸ್ತಿಗೆ ಒತ್ತುಕೊಟ್ಟ ಅವರು, ಜನತಂತ್ರದ ಗಂಧ ಗಾಳಿಯೂ ಇಲ್ಲದ ಹಿಂದುಳಿದ ದೇಶವೊಂದರಲ್ಲಿ ಅಸಾಧಾರಣ ಜನತಾಂತ್ರಿಕ ಕಾರ್ಯವೈಖರಿಯನ್ನು ಸಾಧಿಸಿಕೊಂಡಿದ್ದರು. ಕ್ರಾಂತಿಗೆ ಬೊಲ್ಶೆವಿಕರ ನೇತೃತ್ವ ಅಗತ್ಯವೆಂದು ಭಾವಿಸಿದ್ದ ಅವರು ಅಗತ್ಯಬಿದ್ದಾಗ ಎಲ್ಲ ಪಕ್ಷಗಳೊಂದಿಗೂ ಪೂರ್ಣಪ್ರಮಾಣದಲ್ಲಿ ಸಹಕರಿಸಿದರು. ಸದಾ ತತ್ವಕ್ಕೆ ನಿಷ್ಠರಾಗಿದ್ದರೂ ಅಗತ್ಯಕ್ಕೆ ತಕ್ಕಂತೆ ಬಾಗುತ್ತಾ, ಬಳುಕುತ್ತಾ ಮುಂದೆ ಸಾಗಿದರು. ಮಾರ್ಕ್ಸ್‌ವಾದದ ಚಲನಶೀಲತೆಯನ್ನು ಗುರುತಿಸಿ, ಅದೆಂದಿಗೂ ಗೊಡ್ಡು, ನಿರ್ಜೀವ ಸಿದ್ಧಾಂತವಾಗದಂತೆ ಅದನ್ನು ಬೆಳೆಸುತ್ತಾ ಹೋದರು.

ಹಾಗಾಗಿಯೇ ಅವರು ಕ್ರಾಂತಿಯ ನಾಯಕರುಗಳ ನಡುವೆ ಮುಕುಟಮಣಿ, ಶಿಖರದ ಮೇಲಿನ ಗರುಡ!

**ಶತಮಾನಗಳ ಸ್ವರ್ಗದ ಸ್ವಪ್ನ**

ಕಾಡುಮೇಡುಗಳಲ್ಲಿ ಆಹಾರ ಅರಸುತ್ತಾ ಸಮಾನರಾಗಿ ಓಡಾಡಿಕೊಂಡಿದ್ದ ಜನರು ಯಾವ ದಿನ ಶೋಷಕ ಮತ್ತು ಶೋಷಿತ ಎಂಬ ಎರಡು ವರ್ಗಗಳಾಗಿ ಒಡೆದುಹೋದರೋ, ದಬ್ಬಾಳಿಕೆಯ ಉಪಕರಣವಾಗಿ ಪ್ರಭುತ್ವ–ರಾಜ್ಯಯಂತ್ರ ಹುಟ್ಟಿಕೊಂಡಿತೋ ಆ ಕ್ಷಣದಿಂದಲೇ ಮತ್ತೊಮ್ಮೆ ಈ ಭೂಮಂಡಲದಲ್ಲಿ ಸ್ವಾತಂತ್ರ್ಯ ಮತ್ತು ಸಮಾನತೆಯ ಸ್ವರ್ಗವನ್ನು ತರಬೇಕೆಂಬ ಕನಸನ್ನೂ ಮನುಷ್ಯ ಕಾಣತೊಡಗಿದ್ದ. ನಮ್ಮ ಪುರಾತನ ಮಹಾಕಾವ್ಯಗಳಲ್ಲಿ, ಪುರಾಣಗಳಲ್ಲಿ ಇದು ಒಮ್ಮೆ ನೇರ ಆಶಯವಾಗಿ, ಮತ್ತೊಮ್ಮೆ ಮಿಥಕವಾಗಿ ತಲೆಎತ್ತುತ್ತಲೇ ಬಂತು. ನಂತರ ಧಾರ್ಮಿಕ ಪ್ರವಾದಿಗಳೂ, ಇನ್ನೂ ನಂತರ ಜನತಾಂತ್ರಿಕ ನಾಯಕರು ಇದನ್ನು ಸಾಕಾರಗೊಳಿಸುವ ಮಾತನ್ನು ಅಭಿವ್ಯಕ್ತಿಸುತ್ತಲೇ ಇದ್ದರು. ಆದರೆ ಅದರ ವೈಜ್ಞಾನಿಕ ರೂಪುರೇಷೆಯನ್ನು ಮಾರ್ಕ್ಸ್ ನೀಡಿದರೆ,



ಸಾಹಸಿ ಲೆನಿನ್ ಅದನ್ನು ಸಾಕಾರರೂಪಕ್ಕಿಳಿಸಲು ಯತ್ನಿಸಿದ್ದರು.

ಕ್ರಾಂತಿಯ ಮೊದಲ ದಿನಗಳಲ್ಲಿ ಅಲ್ಲಿನ ನಾಯಕರು ಎದುರಿಸಿದ ಸಂಕಷ್ಟಗಳು ಅಷ್ಟಿಷ್ಟಲ್ಲ. ಸಮಾಜ ಕಲ್ಯಾಣದ ಸಚಿವೆಯಾದ ಅಲೆಕ್ಸಾಂದ್ರಾ ಕೊಲೊಂತಾಯ್ ಸಚಿವಾಲಯಕ್ಕೆ ಅಧಿಕಾರ ವಹಿಸಿಕೊಳ್ಳಲು ಹೋದಾಗ ಆಕೆ ತನಗೆ ಯಾರೂ ಬಾಗಿಲು ಸಹ ತೆಗೆಯಲಿಲ್ಲ ಎಂಬುದನ್ನು ಲೇಖನವೊಂದರಲ್ಲಿ ಹೇಳಿಕೊಂಡಿದ್ದಾರೆ! ಅಲ್ಲಿದ್ದ ಇಡೀ ಸಿಬ್ಬಂದಿ ಕ್ರಾಂತಿ ವಿರೋಧಿ ಪ್ರಚಾರಕ್ಕೆ ಬಲಿಯಾಗಿ ಆಕೆಯೆದುರೇ ಎಲ್ಲರೂ ಕಛೇರಿ ಬಿಟ್ಟು ಹೋದರು. ಕಡೆಗೊಂದು ದಿನ ಆಕೆ ಬಾಗಿಲು ತೆಗೆದು ಒಳಗೆ ಹೋದರು. ಮುಗ್ಧ ಬಡರೈತನೊಬ್ಬ ತನ್ನ ಸತ್ತ ಕುದುರೆಗೆ ಪರಿಹಾರ ನೀಡಿ ಎಂದು ಬಂದು ನಿಂತಿದ್ದ. ಇಲಾಖೆಯ ಪೆಟ್ಟಿಗೆಗಳ ಬೀಗದ ಕೈ ಇಲ್ಲ! ಕೈಯಲ್ಲಿ ಹಣವಿಲ್ಲ. ಬರಿಗೈಲಿ ಸಮಾಜಕಲ್ಯಾಣ ಮಾಡಬೇಕು!! ಆಹಾರದ ಸಚಿವರು ಬರಗಾಲ ಪರಿಹಾರದ ಸಭೆಯಲ್ಲಿ ಭಾಷಣ ಮಾಡುತ್ತಾ ಕುಸಿದುಹೋದರು. ಪರೀಕ್ಷಿಸಿದ ವೈದ್ಯರು ಈತ ಅಪೌಷ್ಟಿಕತೆಯಿಂದ ಸೊರಗಿ ಸಾಯುವಂತಾಗಿದ್ದಾನೆ ಎಂದರು. ಆತನಾದರೋ 'ನಾನು ಹೇಗೆ ಉಣ್ಣಲಿ, ತಟ್ಟೆಯ ಮುಂದೆ ಕೂತಾಗಲೆಲ್ಲಾ ಮಿಲಿಯಾಂತರ ಹಸಿದ ಮುಖಗಳೇ ನನ್ನೆದುರು ಕಾಣುತ್ತವೆ' ಎಂದ! ಅಧಿಕಾರದ ಕೇಂದ್ರವಾದ ಸ್ಮಾಲ್ನಿಯಲ್ಲೇ ವಾರಗಟ್ಟಲೆ ನೀರು, ವಿದ್ಯುತ್ ಇರಲಿಲ್ಲ. ಹಸಿದ ರೈತರ ನಿಯೋಗವೊಂದು ಸಿಟ್ಟಿನಿಂದ ರಾಜಧಾನಿಗೆ ಬಂತು. ಅವರಿಗೆ 'ಹೊಸ ಜಾರ್' ಲೆನಿನ್ ಊಟ ಹೇಗಿರುತ್ತದೆ ಎಂದು ನೋಡುವ ಆಸೆ! ಲೆನಿನ್‌ರೊಂದಿಗೆ ಊಟಕ್ಕೆ ಕೂತಾಗ ಆತ ಒಣಕಲು ಕಂದು ಬ್ರೆಡ್ಡನ್ನು, ನೀರಾದ ಕೋಸಿನ ಸಾರನ್ನು ಆನಂದದಿಂದ ಮೆಲ್ಲುತ್ತಾ ಬರಲಿರುವ ಸ್ವರ್ಗದ ಬಗ್ಗೆ ಮಾತನಾಡುತ್ತಿದ್ದರು! ಕನಿಕರಿಸಿ ರೈತರು ತಾವು ಬಚ್ಚಿಟ್ಟುಕೊಂಡಿದ್ದ ಆಹಾರವನ್ನೇ ಆತನಿಗೆ ಕಳಿಸಿಕೊಟ್ಟರು! ಇವೆಲ್ಲಾ ನಿಜವಾದ ಪ್ರಸಂಗಗಳು, ರೋಚಕ ದಂತಕತೆಗಳಲ್ಲ!

**ಸೋವಿಯತ್ ಸಮಾಜವಾದಿ ಜನತಂತ್ರ**

ಏತನ್ಮಧ್ಯೆ ಆಗತಾನೆ ಹುಟ್ಟಿದ ಸಮಾಜವಾದಿ ಶಿಶುವಿನ ಕತ್ತುಹಿಸುಕಿ ಕೊಲ್ಲಲು ಹದಿನಾಲ್ಕು ಸಾಮ್ರಾಜ್ಯಶಾಹಿ–ಬಂಡವಾಳಶಾಹಿ ರಾಷ್ಟ್ರಗಳು ಒಂದಾಗಿ ಯುದ್ಧ, ದಿಗ್ಬಂಧನ, ಕಿರುಕುಳಗಳನ್ನು ಆರಂಭಿಸಿದವು. ಇನ್ನೊಂದು ಕಡೆ ಹಿಂದೆ ಜಾರ್‌ನಿಗೆ ನಿಷ್ಠರಾಗಿದ್ದ ಸೇನಾ ನಾಯಕರನ್ನು, ಅಧಿಕಾರಿಗಳನ್ನು, ರಾಜವಂಶದವರುಗಳನ್ನು ಪ್ರಚೋದಿಸಿ, ದೇಶಿ ಮತ್ತು ವಿದೇಶಿ ಹಣದ ಥೈಲಿಗಳ ಬೆಂಬಲದಿಂದ 'ಬಿಳಿಸೈನ್ಯ' ಎಂಬ ಬೃಹತ್ತಾದ ಪ್ರತಿಕ್ರಾಂತಿ ಪಡೆಯನ್ನು ಸೃಷ್ಟಿಸಿ, ಸಮಾಜವಾದಿ ಪ್ರಭುತ್ವದ ವಿರುದ್ಧ ಯುದ್ಧ ಸಾರಲಾಯಿತು. ಐದು ವರ್ಷಗಳ ಕಾಲ ನಡೆದ ಈ ಯುದ್ಧದಲ್ಲಿ ಹೊಸ ವ್ಯವಸ್ಥೆ ನಲುಗಿಹೋಯಿತು.

ಆದರೆ ಇದೆಲ್ಲವನ್ನೂ ಗೆದ್ದು ಕಮ್ಯುನಿಸ್ಟರು ಮುಂದುವರೆದದ್ದು ಹೇಗೆ? ಅನೇಕ ವರ್ಷಗಳಿಂದಲೂ ಲೆನಿನ್‌ರವರು ಸೋವಿಯತ್ ಜನಸಮಿತಿಗಳ ಅಂತಃಸತ್ವವನ್ನು ಗುರುತಿಸಿದ್ದರು. ಅವು ಯಾವ ಪಕ್ಷಕ್ಕೂ ಸೇರದೆ ಜನತಾಂತ್ರಿಕವಾಗಿ ಕೆಲಸ ಮಾಡುತ್ತಿದ್ದ ಜನಸಮಿತಿಗಳು. ರೈತರು, ಕಾರ್ಮಿಕರು ಹಾಗೂ ಸೈನಿಕರು ಅದನ್ನು ಎಲ್ಲೆಡೆ ರಚಿಸಿಕೊಳ್ಳಬೇಕೆಂಬುದು ಲೆನಿನ್‌ರ ಕರೆಯಾಗಿತ್ತು. ಹೋರಾಟಕ್ಕಾಗಿ, ಬಂಡಾಯಕ್ಕಾಗಿ ಉಪಯುಕ್ತವಾದ ಈ ಸಮಿತಿಗಳು 'ಪ್ಯಾರಿಸ್ ಕಮ್ಯೂನ್' ಮಾದರಿಯಲ್ಲಿ ಮುಂದಿನ ಪ್ರಭುತ್ವದಲ್ಲಿ ಜನಾಧಿಕಾರದ ಇಟ್ಟಿಗೆಗಳಾಗಬೇಕು ಎಂಬುದು ಅವರ ನಿಲುವು. ಸಮಾಜವಾದದಲ್ಲಿ ರಾಷ್ಟ್ರೀಯ ಪುನರ್‌ನಿರ್ಮಾಣಕ್ಕೂ ಅದೇ ಉಪಕರಣ. ಜನ ನಿಜಕ್ಕೂ ತಮ್ಮ ಭವಿಷ್ಯವನ್ನು ತಾವೇ ನಿರ್ಧರಿಸಿಕೊಳ್ಳುವಂತಾದಾಗ ಅವರ ಮುಂದೊಡಗು, ಸೃಜನಶೀಲತೆ, ಪರಿಶ್ರಮ ಪೂರ್ತಿ ಬಿಡುಗಡೆಯಾಗುತ್ತದೆ. ಇದೇ ನಿಜವಾಗಿ ಜನತಂತ್ರ ಅರಳಿಕೊಳ್ಳುವ ರೀತಿ ಎಂದು ಕಮ್ಯುನಿಸ್ಟರು ನಂಬಿದರು.

ಹಳೆಯ ವ್ಯವಸ್ಥೆಯ ಅಧಿಕಾರಿಗಳು, ಗುಪ್ತಚಾರರು, ಸ್ವಂತ ದುಡಿಯದೆ ತಿನ್ನುವವರು, ಮಾನಸಿಕ ಆರೋಗ್ಯ ಇಲ್ಲದವರು ಇಂಥವರಿಗೆ ಬಿಟ್ಟು ಎಲ್ಲರಿಗೂ ಮತದಾನದ ಹಕ್ಕನ್ನು ನೀಡಲಾಯಿತು. ಮಹಿಳೆಯರಿಗೆ ಮುಂದುವರೆದ ರಾಷ್ಟ್ರಗಳಲ್ಲೇ ಮತದಾನದ ಹಕ್ಕು ಇಲ್ಲದಿದ್ದಾಗ ಅದನ್ನು ಜಾರಿಗೊಳಿಸಿ ಲಕ್ಷಾಂತರ ಮಹಿಳಾ ನಾಯಕರನ್ನು ಸೃಷ್ಟಿಸಿದ ಕೀರ್ತಿ ಸೋವಿಯತ್ ಪ್ರಭುತ್ವದ್ದು.

ಪಿರಮಿಡ್‌ನಂತಿದ್ದ ಸೋವಿಯತ್ ಪ್ರಭುತ್ವದ ಮೊದಲ ಶ್ರೇಣಿ ಹಳ್ಳಿಗಳ ಸೋವಿಯತ್ ಮತ್ತು ತನ್ಮೂಲಕ ಜಿಲ್ಲಾ ಸೋವಿಯತ್ (ರೆಯಾನ್), ಅಲ್ಲಿಂದ ಪ್ರಾದೇಶಿಕ ಸೋವಿಯತ್ (ಓಬ್ಲಾಸ್ಟ್) ಮತ್ತು ಗಣರಾಜ್ಯದ ಸೋವಿಯತ್ –

ಉದಾ : ರಷ್ಯನ್, ಜಾರ್ಜಿಯಾ, ಉಕ್ರೇನ್ ಇತ್ಯಾದಿ. ನಂತರ ಇಡಿಯ ದೇಶಕ್ಕೆ ಸುಪ್ರೀಂ ಸೋವಿಯತ್. ಸೋವಿಯತ್‌ನಲ್ಲಿ ಕೇಂದ್ರ ಕಾರ್ಯಕಾರಿ ಮಂಡಳಿ, ಅದರ ಮೇಲೆ ಜನತೆಯ ಕಮಿಸಾರ್‌ಗಳ ಸಚಿವ ಸಂಪುಟ. ಈ ಎಲ್ಲ ಅಂಗಗಳಿಗೂ ನಿಗದಿತ ಅವಧಿಯಲ್ಲಿ ಸರಳವಾದ ಚುನಾವಣೆಗಳು ಕಡ್ಡಾಯ. ಕಮ್ಯುನಿಸ್ಟ್ ಪಕ್ಷದ ಸದಸ್ಯರು ಎಷ್ಟು ಸಂಖ್ಯೆಯಲ್ಲಿ ಸೋವಿಯತ್‌ಗಳಿಗೆ ಆಯ್ಕೆಯಾಗು ತ್ತಿದ್ದರೋ ಅದರ ಎರಡರಷ್ಟು, ಮೂರರಷ್ಟು ಸಂಖ್ಯೆಯಲ್ಲಿ ಜನಸಾಮಾನ್ಯರು ಆಯ್ಕೆಯಾಗುತ್ತಿದ್ದರು.



ಸಿಡ್ನಿವೆಬ್ ಮತ್ತು ಬಿಯಾಟ್ರಿಸ್ ವೆಬ್ ಎಂಬುವರು ೮೦ ವಯಸ್ಸಿನ ವೃದ್ಧ ದಂಪತಿಗಳು, ಇಂಗ್ಲೆಂಡಿನವರಾದ ಇವರು ಬರ್ನಾರ್ಡ್ ಶಾರ ಆಪ್ತ ಮಿತ್ರರಾಗಿದ್ದ ಸಮಾಜವಾದಿಗಳು, ಒಂದು ಮಟ್ಟಿಗೆ ಕಮ್ಯುನಿಸಂನ ಟೀಕಾಕಾರರು. ಸೋವಿಯತ್ ಕಮ್ಯುನಿಸಂ ಎಂಬ ಅವರ ೧೨೦೦ ಪುಟಗಳ ಅದ್ಭುತ ಸಂಶೋಧನಾ ಕೃತಿ. ಗಾತ್ರದಲ್ಲಿ, ಪ್ರಯತ್ನದಲ್ಲಿ, ಪ್ರಾಮಾಣಿಕತೆಯಲ್ಲಿ ಅಸಾಧಾರಣವಾದದ್ದು. ಅವರು ತಾವು ಕಂಡ ಸೋವಿಯತ್ ಚುನಾವಣೆಗಳಲ್ಲಿ ವ್ಯಕ್ತವಾದ ಜನತಂತ್ರದ ಉಲ್ಲಾಸ, ಸಂಭ್ರಮ, ಸ್ವಾತಂತ್ರ್ಯ, ಸರಳತೆ, ಸೈದ್ಧಾಂತಿಕ ಪ್ರಬುದ್ಧತೆಗಳನ್ನು ಕೊಂಡಾಡಿ ಯಾವ ಯೂರೋಪಿನ ಅಥವಾ ಅಮೆರಿಕಾದ ಚುನಾವಣೆಯೂ ಸೋವಿಯತ್ ಚುನಾವಣೆಗೆ ಹತ್ತಿರ ಹತ್ತಿರವೂ ಬರಲಾರದು ಎಂದು ವರ್ಣಿಸಿದ್ದಾರೆ.

ಸೋವಿಯತ್‌ಗೆ ಇನ್ನೂ ಕೆಲವು ಎಲ್ಲೂ ಕಾಣದ ವೈಶಿಷ್ಟ್ಯಗಳಿದ್ದವು. ಅದು ಶಾಸಕಾಂಗವೂ ಹೌದು, ಕಾರ್ಯಾಂಗವೂ ಹೌದು. ಅಧಿಕಾರಿಗಳು, ನ್ಯಾಯಾಧೀಶರು ಎಲ್ಲರೂ ಚುನಾಯಿತ ವ್ಯಕ್ತಿಗಳೇ ಮತ್ತು ಯಾರನ್ನೇ ಆಗಲೀ ವಾಪಸ್ ಕರೆಯುವ ಅಧಿಕಾರ ಸದಾ ಜನತೆಗಿರುತ್ತಿತ್ತು.

ಇಂಥ ಅಸಾಧಾರಣ ಜನತಾಂತ್ರಿಕ ಅಂಗ, ವರ್ಗ ಪ್ರಜಾಪ್ರಭುತ್ವದಿಂದ ಮಾತ್ರ ಸೋವಿಯತ್ ಸ್ವರ್ಗದ ಕನಸು ನನಸಾಗುವುದು ಸಾಧ್ಯವಾಯಿತು.

**ಸವಾಲುಗಳನ್ನು ಗೆದ್ದ ರೀತಿ**

ಸೋವಿಯತ್ ಸರ್ಕಾರವು ಅಧಿಕಾರವಹಿಸಿಕೊಂಡ ಕೂಡಲೇ ಯುದ್ಧದಲ್ಲಿ, ಕ್ಷಾಮದಲ್ಲಿ ತಾಯಿತಂದೆಯರನ್ನು ಕಳೆದುಕೊಂಡ ಲಕ್ಷಾಂತರ ಮಕ್ಕಳ ಸಮಸ್ಯೆಯನ್ನು ಕೈಗೆತ್ತಿಕೊಳ್ಳಬೇಕಾಯಿತು. ಅವರೆಲ್ಲಾ ಭಿಕ್ಷುಕರು, ಕಳ್ಳರು, ತಲೆಹಿಡುಕರು, ಅರೆಹುಚ್ಚರು ಆದ ರಸ್ತೆಗೆ ಬಿದ್ದ ಹುಡುಗ – ಹುಡುಗಿಯರು. ಅವರನ್ನು ದಾರಿಗೆ ತಂದ ಸಾಹಸದ ಕಥೆಯನ್ನು ಆ್ಯಂಟನ್ ಮಕರೆಂಕೊ ಎಂಬ ಶೈಕ್ಷಣಿಕ ಸಾಮಾಜಿಕ ಕಾರ್ಯಕರ್ತರು ತಮ್ಮ 'ರೋಡ್ ಟು ಲೈಫ್' ಮತ್ತು ಇತರ ಕಾದಂಬರಿಯನ್ನು ಹೋಲುವ ಪುಸ್ತಕಗಳಲ್ಲಿ ವಿವರಿಸಿದ್ದಾರೆ. ಅದೇ ರೀತಿ ಅತಿ ಹೆಚ್ಚು ಅನಕ್ಷರಸ್ಥರಿದ್ದ ಆ ದೇಶವನ್ನು ಕೆಲವೇ ವರ್ಷಗಳಲ್ಲಿ ಶಾಲೆ, ಅನೌಪಚಾರಿಕ ಶಿಕ್ಷಣ, ರಾತ್ರಿ ಶಾಲೆ, ವಯಸ್ಕರ ಶಾಲೆಗಳ ಮೂಲಕ ಅಕ್ಷರಸ್ಥರನ್ನಾಗಿಸಿದ್ದು ದೊಡ್ಡ ಸಾಹಸವೇ ಸರಿ. ರೈತ ಕಾರ್ಮಿಕರ ಸಾಂಸ್ಕೃತಿಕ ಮಟ್ಟವನ್ನು ಮೇಲೆತ್ತಿದ ಅಸಂಖ್ಯಾತ ನಾಟಕಗಳನ್ನು ಆಡಲು ಸಾವಿರಾರು ನಾಟಕಶಾಲೆಗಳನ್ನು, ಉದ್ಯಾನವನಗಳನ್ನು ನಿರ್ಮಿಸಲಾಯಿತು. ಯಾವ ರಾಷ್ಟ್ರದಲ್ಲೂ ಪ್ರಕಟವಾಗಿರದಿದ್ದ ಸಂಖ್ಯೆಯಲ್ಲಿ ಸರ್ವಾಂಟಿಸ್, ಶೇಕ್ಸ್‌ಪಿಯರ್, ಹ್ಯೂಗೋ, ಟಾಲ್‌ಸ್ಟಾಯ್, ಚೆಕಾವ್ ಮೊದಲಾದ ಎಲ್ಲ ದೇಶಗಳ ಲೇಖಕರ ಕೃತಿಗಳನ್ನು ಮುದ್ರಿಸಿ ವಿತರಿಸಲಾಯಿತು. ಇದನ್ನೆಲ್ಲಾ ನೋಡಿದ ಗುರುದೇವ ರವೀಂದ್ರನಾಥ ಟ್ಯಾಗೋರರು ಹೀಗೆ ಶ್ರೇಷ್ಠ ಸಂಸ್ಕೃತಿಯು ಜನಸಾಮಾನ್ಯರ ಸ್ವತ್ತಾದದ್ದನ್ನು ಇತಿಹಾಸ ಕಂಡಿಲ್ಲ ಎಂದು ಶ್ಲಾಘಿಸಿ, "ರಷ್ಯಾ ದೇಶವನ್ನು ನೋಡದಿದ್ದರೆ ನನ್ನ ಬದುಕೆಂಬ ತೀರ್ಥಯಾತ್ರೆ ಅಪೂರ್ಣವಾಗುತ್ತಿತ್ತು" ಎಂದು ಉದ್ಗರಿಸಿದರು.

ರಷ್ಯಾದಲ್ಲಿ ಸಹಸ್ರಮಾನದ ಸಾಮಾಜಿಕ ಪಾಪಗಳಾದ ವೇಶ್ಯಾವಾಟಿಕೆ, ಮದ್ಯವ್ಯಸನ ಮೊದಲಾದ 'ಸಾಮಾಜಿಕ ಮಹಾಪಾಪ'ಗಳನ್ನು ನಿರ್ಮೂಲನ ಮಾಡಿದ್ದಾರೆಯೇ, ಅದು ಹೇಗೆ ಎಂದು ಅಧ್ಯಯನ ಮಾಡಲು ಕೆನಡಾ ದೇಶದ ಪತ್ರಕರ್ತರಾಗಿದ್ದ ಡೈಸನ್ ಕಾರ್ಟರ್ ಎಂಬುವರು ಬಂದರು. ಪ್ರತಿಯೊಂದು ಪರಿಹಾರವನ್ನು ಜನತೆಯೇ ರೂಪಿಸಿದ್ದಾರೆ ಮತ್ತು ವಿಜ್ಞಾನದ ಆಧಾರದ ಮೇಲೆ ನಿವಾರಿಸಿದ್ದಾರೆ ಎಂಬುದನ್ನು ಅವರು ಕಂಡುಕೊಂಡರು. ವೇಶ್ಯೆಯರನ್ನು ಪೋಲೀಸರ ಕಾಟದಿಂದ ತಪ್ಪಿಸಿ ವಿಟರಿಗೆ ಮತ್ತು ವೇಶ್ಯಾಗೃಹದ ಮಾಲಿಕರಿಗೆ ಮಾತ್ರ ಶಿಕ್ಷೆ ವಿಧಿಸಿ, ಆ ನತದೃಷ್ಟ ಹೆಣ್ಣುಮಕ್ಕಳಿಗೆ ಆರೋಗ್ಯ, ಶಿಕ್ಷಣ, ಉದ್ಯೋಗ ನೀಡಿ ಆ ಸಮಸ್ಯೆಯನ್ನು ತೊಡೆದುಹಾಕಿದ್ದನ್ನು ಅವರು ಮೆಚ್ಚಿಕೊಂಡರು. ಪಾನಮತ್ತರಿಗೆ ನಯವಾದ ಸಲಹೆ, ಸ್ವಲ್ಪ ಶಿಕ್ಷೆ ಮುಖ್ಯವಾಗಿ ಸ್ನೇಹಿತರ ಸಹೋದ್ಯೋಗಿಗಳ ಒತ್ತಾಸೆಯ ಮೂಲಕ ಮದ್ಯವ್ಯಸನವನ್ನು ಬಿಡಿಸಿದ ಅವರ ಪ್ರಯತ್ನವನ್ನು ಡೈಸನ್ ಕಾರ್ಟರ್ ತಮ್ಮ ಜಗದ್ವಿಖ್ಯಾತ "ಸಿನ್ ಅಂಡ್ ಸೈನ್ಸ್" ಎಂಬ ಪುಸ್ತಕದಲ್ಲಿ ದಾಖಲಿಸಿದರು. ಆರ್ಥರ್ ನ್ಯೂಶೋಮ್ ಮತ್ತು ಸರ್ ಜಾನ್ ಕಿಂಗ್ಸ್‌ಬರಿ ಎಂಬ ವೈದ್ಯರು, ಸಾಮಾಜಿಕ ಕಾರ್ಯಕರ್ತರು. ಅಮೇರಿಕಾ – ಇಂಗ್ಲೆಂಡ್‌ನಿಂದ ಬಂದು, ಸೋವಿಯತ್ ವೈದ್ಯಕೀಯದ ಸಾಧನೆಗಳನ್ನು ಅಭ್ಯಸಿಸಿ 'ರೆಡ್ ಮೆಡಿಸಿನ್' ಎಂಬ ಪೂರ್ವಗ್ರಹ ಮುಕ್ತ ಹೊತ್ತಿಗೆಯನ್ನು ಬರೆದರು. ಅದರಲ್ಲಿ ಅವರು ಸೋವಿಯತ್ ದೇಶ ಹೇಗೆ ರೋಗ ಪ್ರತಿಬಂಧಕ ಕ್ರಮಗಳಿಗೆ ಒತ್ತು ನೀಡಿತು, ಅತ್ಯುತ್ತಮ ವೈದ್ಯಕೀಯ ಸೌಲಭ್ಯ ಹೇಗೆ ಉಚಿತವಾಗಿ ಜನತೆಗೆ ತಲುಪಿ ಕ್ಷಯ, ಕುಷ್ಠ, ತಾಯಂದಿರ ಮರಣ ಇವೆಲ್ಲಾ ಹೇಳ ಹೆಸರಿಲ್ಲದಂತಾದವು. ರಾಜಮಹಾರಾಜರ ಬೇಸಿಗೆ ಅರಮನೆಗಳು ಹೇಗೆ ಬಡಬಗ್ಗರ ವಿಶ್ರಾಂತಿ ಧಾಮಗಳಾದವು ಎಂಬುದನ್ನು ಸೊಗಸಾಗಿ ವರ್ಣಿಸಿ ಹೇಳಿದ್ದಾರೆ.

ಇನ್ನೊಂದು ಕಡೆ ಸಾಮೂಹಿಕ ಕೃಷಿ ಫಾರಂಗಳು ಅಸ್ತಿತ್ವಕ್ಕೆ ಬಂದವು. ಅಲ್ಲಿಯೂ, ಕಾರ್ಖಾನೆಗಳಲ್ಲೂ, ಕಾರ್ಮಿಕರು ತಮ್ಮ ಆಡಳಿತ ಮಂಡಳಿಯನ್ನು ತಾವೇ ಚುನಾಯಿಸುತ್ತಿದ್ದರು. ಅವರನ್ನು ಬೇಕಾದಂತೆ ಟೀಕಿಸುತ್ತಿದ್ದರು. ಅದಕ್ಕಾಗಿಯೇ ಪ್ರತಿ ಕಾರ್ಖಾನೆಯಲ್ಲೂ 'ಗೋಡೆ ಫಲಕ ಪತ್ರಿಕೆ'ಗಳಿರುತ್ತಿದ್ದವು. ರೈತ ಕಾರ್ಮಿಕರು ದೇಶದ ಹಿತದ ದೃಷ್ಟಿಯಿಂದ ಪಂಚವಾರ್ಷಿಕ ಯೋಜನೆಯ ಮುನ್ನೋಟಕ್ಕೆ ತಕ್ಕಂತೆ ತಮ್ಮ ಘಟಕಗಳ ಉತ್ಪಾದನೆಯನ್ನು ತಾವೇ ನಿಗದಿಪಡಿಸಿಕೊಳ್ಳುತ್ತಿದ್ದರು. ದಾಖಲೆಗಳನ್ನು ನಿರ್ಮಿಸಲು ತಮ್ಮಲ್ಲೇ ಸ್ಪರ್ಧೆ ಏರ್ಪಡಿಸಿಕೊಳ್ಳುತ್ತಿದ್ದರು. ಯಾವ ಹೆಚ್ಚಿನ ಸಂಬಳದ ಆಸೆಯೂ ಇಲ್ಲದೆ ತಮ್ಮದೇ ನೈತಿಕ ಪ್ರೇರಣೆಯಿಂದ ಭಾನುವಾರವೂ ದುಡಿಯುತ್ತಿದ್ದರು. ಇದೆಲ್ಲಾ ಸಾಧ್ಯವಾದದ್ದು ಏಕೆಂದರೆ ಅವರಿಗೆ ಗೊತ್ತಿತ್ತು; ತಮ್ಮ ದುಡಿತದ ಫಲ ತಮಗೆ ಮತ್ತು ತಮ್ಮ ಮಕ್ಕಳಿಗೆ ಮಾತ್ರ, ಅದು ಯಾವ ಸುಲಿಗೆಕೋರನಿಗೂ ಸೇರುವುದಿಲ್ಲ ಎಂದು. ಸೋವಿಯತ್ ಉತ್ಪಾದನೆ ಬಂಡವಾಳಶಾಹಿ ರಾಷ್ಟ್ರಗಳ ಸಾಧನೆಯನ್ನು ಕೆಲವೇ ದಶಕಗಳಲ್ಲಿ ಹಿಂದಿಕ್ಕಿದ್ದರ ಹಿಂದಿನ ಕಥೆ ಇದೇ ಹೊರತು, ಬಂಡವಾಳಗಾರರು ಹೇಳುವಂತೆ ಬಲಾತ್ಕಾರ, ಜೈಲು, ಚಾವಟಿ ಏಟುಗಳಲ್ಲ! ಇದನ್ನು ವೆಬ್ ದಂಪತಿಗಳು ದಾಖಲಿಸಿದ್ದಾರೆ.

ಮ್ಯಾಕ್ಸಿಂ ಗಾರ್ಕಿ, ಮಯಾಕೊವ್‌ಸ್ಕಿ, ಅಲೆಕ್ಸಿ ಟಾಲ್‌ಸ್ಟಾಯ್, ಮೈಖೇಲ್ ಶೊಲೊಖೊವ್ ಮುಂತಾದ ಉದ್ದಾಮ ಕ್ರಾಂತಿಕಾರಿ ಸಾಹಿತಿಗಳನ್ನು ಜಗತ್ತಿಗೆ ಕೊಟ್ಟ ಸೋವಿಯತ್ ದೇಶ ವಿಜ್ಞಾನ ಕ್ಷೇತ್ರದಲ್ಲೂ ಅಪಾರ ಸಾಧನೆಗೈಯಿತು. ಮೊದಲ ಅಂತರಿಕ್ಷ ನಿಲ್ದಾಣ, ಬಾಹ್ಯಾಕಾಶದಲ್ಲಿ ಮೊದಲ ಪುರುಷ ಮತ್ತು ಮಹಿಳೆಯರನ್ನು ಕಕ್ಷೆಗೆ ಬಿಟ್ಟ ಕೀರ್ತಿ ಸಹ ಸೋವಿಯತ್ ದೇಶದ್ದು. ಕ್ರೀಡೆಯಲ್ಲೂ ಅದು ಒಲಂಪಿಕ್ ಸುವರ್ಣ ಪದಕಗಳನ್ನು ಬಾಚಿಕೊಂಡು ಪೂರ್ವ ಯುರೋಪಿನ ಸಮಾಜವಾದಿ ರಾಷ್ಟ್ರಗಳೊಂದಿಗೆ ಸೇರಿ ಪದಕ ಪರ್ವತಗಳನ್ನೇ ಒಟ್ಟುಹಾಕಿದ್ದು ಮಾತ್ರ ಯಾರೂ ಅಲ್ಲಗಳೆಯಲಾಗದ ಸತ್ಯ. ಸಾಹಿತ್ಯ, ವಿಜ್ಞಾನ, ಕ್ರೀಡೆಗಳ ಸಾಧಕರ ಬೆನ್ನಹಿಂದೆ ಯಾರೂ ಬಂದೂಕ ಹಿಡಿದು ಕೆಲಸ ಮಾಡಿಸಿರುವುದಿಲ್ಲ. ಅವರಿಗೆಲ್ಲಾ ನಮ್ಮ ದೇಶದಲ್ಲಿ ಇದ್ದಂತೆ ಹಣದ ರಾಶಿಯ ಪ್ರಲೋಭನೆಯೂ ಇರಲಿಲ್ಲ ಎಂಬುದು ಎಲ್ಲರಿಗೂ ಗೊತ್ತಿರಲಿ. ಅದು ಒಂದು ಮಹಾನ್ ಸಮಾಜ, ಒಂದು ಅನನ್ಯ ಸಂಸ್ಕೃತಿಯ ಸಾಧನೆಯ ಉತ್ತುಂಗ ಅಷ್ಟೆ.

ಮುಂದೆ ಸೋವಿಯತ್ ಸಮಾಜವು, ಕಮ್ಯುನಿಸ್ಟ್ ಪಕ್ಷ ಹಾಗೂ ಅದರ ಅಸಾಧಾರಣ ನಾಯಕ ಸ್ಟಾಲಿನ್‌ರ ನೇತೃತ್ವದಲ್ಲಿ ಹಿಟ್ಲರ್‌ನನ್ನು ಸೋಲಿಸಿತು. ತಾನೇ

ಎರಡು ಕೋಟಿ ಜನರನ್ನು ಯುದ್ಧದಲ್ಲಿ ಕಳೆದುಕೊಂಡು, ಐದು ಕೋಟಿ ಗಾಯಾಳುಗಳನ್ನು ಹೊಂದಿದ್ದು ಧ್ವಂಸವಾದ ದೇಶವೊಂದು ಇಂಥ ದುರ್ಭರವಾದ ಸನ್ನಿವೇಶದಲ್ಲಿ ಮತ್ತೊಮ್ಮೆ ಸಮಾಜವಾದವನ್ನು ಪುನರ್ ನಿರ್ಮಿಸಿತು ಎಂಬುದು ಜಾಗತಿಕ ಇತಿಹಾಸದ ಸೋಜಿಗಗಳಲ್ಲೊಂದು.

**ಕುಸಿತದ ಮಹಾಯಾತನೆ**

ಜನತೆಗೆ ಇಷ್ಟೆಲ್ಲಾ ಸೌಲಭ್ಯಗಳನ್ನು ಖಾತರಿಪಡಿಸಿದ್ದ, ಜನರದ್ದೇ ಆದ ವ್ಯವಸ್ಥೆಯೊಂದು ೧೯೯೧ರಲ್ಲಿ ಕುಸಿದುಹೋದದ್ದು ಆಧುನಿಕ ಇತಿಹಾಸದ ಮಹಾದುರಂತಗಳಲ್ಲೊಂದು. ಜನಪರ ವ್ಯವಸ್ಥೆಯೊಂದು ಹೇಳಿಕೊಳ್ಳುವಂಥ ಪ್ರತಿರೋಧವೇ ಇಲ್ಲದೆ ನೆಲಕಚ್ಚಿತೆಂಬುದು ಸೋಜಿಗ. ಇದಾದ ಮೇಲೆ ಬಂಡವಾಳ ಗೆದ್ದೇಬಿಟ್ಟಿತು ಎಂದು ಸಾಮ್ರಾಜ್ಯಶಾಹಿಗಳು ಸಂಭ್ರಮಿಸಿ ತಮ್ಮದೇ ಆದ ಪ್ರಚಾರದ ಪ್ರವಾಹವನ್ನು ಹರಿಬಿಟ್ಟಿದ್ದಾರೆ. ಇಡಿಯ ವಿಶ್ವದಾದ್ಯಂತ ಆದರ್ಶಗಳ ಕುರಿತು, ತ್ಯಾಗ ಮತ್ತು ಬಲಿದಾನದ ಕುರಿತು ಜನ ಸಿನಿಕರಾಗಿದ್ದಾರೆ. ಭ್ರಮನಿರಸನಗೊಂಡು, ಬದುಕಿನ ಅಭದ್ರತೆಯಿಂದಾಗಿ ಅವರು ಗೊಡ್ಡು ಸಿದ್ಧಾಂತ, ಮೂಢನಂಬಿಕೆ, ಪ್ರತಿಗಾಮಿ ಬಲಪಂಥೀಯ ಶಕ್ತಿಗಳಿಗೆ ತುತ್ತಾಗುತ್ತಿದ್ದಾರೆ.

ಸೋವಿಯತ್ ಒಕ್ಕೂಟದ ಕುಸಿತ ಒಂದು ಸಂಕೀರ್ಣ ಪ್ರಘಟನೆ. ಅದರ ಹಿಂದೆ ಅನೇಕ ಕಾರಣಗಳಿವೆ. ಶಸ್ತ್ರಾಸ್ತ್ರ ಪೈಪೋಟಿಯಲ್ಲಿ ನಂಬಿಕೆ ಇರಿಸಿ ವಿಪರೀತ ಯುದ್ಧದ ಬಜೆಟ್‌ಅನ್ನು ಹೆಚ್ಚಿಸಿಕೊಂಡು ಆರ್ಥಿಕತೆಗೆ ಭಾರವಾದದ್ದು ಒಂದು ಕಾರಣವಿರಬಹುದು. ಅನೇಕ ರಾಷ್ಟ್ರಗಳಿಗೆ, ಚಳುವಳಿಗಳಿಗೆ ಅವರನ್ನು ಮನ ಒಲಿಸಿಕೊಳ್ಳಲು ಹಣ ಸುರಿದ ತಪ್ಪಾದ ಆದ್ಯತೆಯೂ ಇರಬಹುದು. ಜನರ ಬದುಕನ್ನು ಹಗುರಗೊಳಿಸಬಲ್ಲ ಗೃಹಬಳಕೆಯ ವಸ್ತುಗಳು, ಅಂಥ ತಂತ್ರಜ್ಞಾನಕ್ಕೆ ಒತ್ತುಕೊಡದಿದ್ದುದು ಒಂದು ಸಣ್ಣ ಕಾರಣವಿರಬಹುದು. ಪಾಶ್ಚಾತ್ಯ ರಾಷ್ಟ್ರಗಳ ಜೀವನಮಟ್ಟದೊಂದಿಗೆ ತಮ್ಮದನ್ನು ಹೋಲಿಸಿಕೊಳ್ಳಲಾರಂಭಿಸಿದ ಜನರ ಮನೋಭಾವವನ್ನು ಆಳುವವರು ಗ್ರಹಿಸದೇ ಹೋಗಿರಬಹುದು.

ಆದರೆ ಇದೆಲ್ಲವನ್ನು ಮೀರುವ ಕೆಲವು ಮುಖ್ಯ ಕಾರಣಗಳಿರುತ್ತವೆ. ಸಮಾಜವಾದದಲ್ಲಿ ಕ್ರಮೇಣ ಒಂದು ಬಲಿಷ್ಠ ಅಧಿಕಾರಶಾಹಿ ಬೇರೂರುತ್ತದೆ. ಅದು ಭ್ರಷ್ಟವಾಗುತ್ತದೆ. ಅಹಂಕಾರಿಯಾಗುತ್ತದೆ. ಜನವಿರೋಧಿಯಾಗುತ್ತದೆ. ನಾಯಕರಲ್ಲಿಯೇ ಗುಂಪುಗಾರಿಕೆ ಸ್ವಜನಪಕ್ಷಪಾತಗಳು ತಲೆ ಎತ್ತುತ್ತವೆ. ಪಕ್ಷವೇ ಭ್ರಷ್ಟವಾದಾಗ ಅದರೊಂದಿಗೆ ಹೋರಾಡುವುದು ಹೇಗೆ?

ಚಳುವಳಿಗಳು ಸಂಸ್ಥೆಗಳಾದಾಗ, ಜಂಗಮವು ಸ್ಥಾವರವಾದಾಗ ಬದುಕು ಚಲನಶೀಲತೆಯನ್ನು ಕಳೆದುಕೊಳ್ಳುತ್ತದೆ. ಕೊಳಕುಮಂಡಲದ ಕಡಿತದಂತೆ ಅಂಗಾಂಗಗಳು ಮತ್ತು ಇಡಿಯ ಶರೀರವೇ ಕೊಳೆಯುವ ಗ್ಯಾಂಗ್ರೀನ್‌ಗೆ ತುತ್ತಾಗುತ್ತದೆ. ಹೀಗಾಗಬಾರದು ಎಂದರೆ ಅದಕ್ಕೆ ಪಕ್ಷದಲ್ಲಿ ಜನತಾಂತ್ರಿಕ ಕಾರ್ಯನಿರ್ವಹಣೆ ಬಲವಾಗಿ ಬೇರೂರಿರಬೇಕು. ಭಿನ್ನಮತ, ವಾದ–ವಿವಾದ, ಮುಕ್ತವಾಗಿ ನಾಯಕರನ್ನು ಟೀಕಿಸುವ ಹಕ್ಕು, ಮುಕ್ತವಾದ ಪತ್ರಿಕೆಗಳು, ಪ್ರತಿಭಟನೆಯನ್ನು ಸಂಘಟಿಸುವ ಹಕ್ಕು, ನಾಯಕತ್ವಕ್ಕೆ ಸವಾಲೆಸೆಯುವ ಅಭ್ಯಾಸ ಇವುಗಳನ್ನು ದೇಶದ, ಪಕ್ಷದ ಸಂವಿಧಾನ ಖಾತ್ರಿಪಡಿಸಬೇಕು. ಲೆನಿನ್‌ರ ಕಾಲದಲ್ಲಿ ಪಕ್ಷದ ಸದಸ್ಯರು ಪಕ್ಷದ ಅಭಿಪ್ರಾಯದೊಂದಿಗೆ ಒಪ್ಪಲೇಬೇಕು ಎಂಬ ಕಡ್ಡಾಯವಿರಲಿಲ್ಲ. ಕಾರ್ಯವನ್ನು ನಿರ್ವಹಿಸುವಾಗ ಮಾತ್ರ ಭಿನ್ನಮತಕ್ಕೆ ಅವಕಾಶವಿರಲಿಲ್ಲ ಅಷ್ಟೇ. ಪಕ್ಷದ ನಿರ್ಣಯಗಳ ವಿರುದ್ಧ ಬಹಿರಂಗವಾಗಿ ಮಾತನಾಡುವ, ಬರೆಯುವ ಹಕ್ಕು ಇತ್ತು. ಆದರೆ ನಂತರ ಪಕ್ಷ ಮತ್ತು ದೇಶ ಎದುರಿಸಿದ ಬಿಕ್ಕಟ್ಟು, ಪಿತೂರಿಗಳ ಹಿನ್ನೆಲೆಯಲ್ಲಿ ಪಕ್ಷ ಹೆಚ್ಚು ಕೇಂದ್ರೀಕೃತವಾಯಿತು. ಅದು ಸ್ವಲ್ಪಮಟ್ಟಿಗೆ ಅನಿವಾರ್ಯ. ಆದರೆ ಸ್ವಲ್ಪಮಟ್ಟಿಗೆ ಅತಿರೇಕ ಸಹ. ಅದನ್ನೇ ಸಾರ್ವಕಾಲಿಕ 'ಜನತಾಂತ್ರಿಕ ಕೇಂದ್ರೀಯವಾದದ ಮಾದರಿ' ಎಂದು ಸ್ವೀಕರಿಸಿದ್ದು ತಪ್ಪು. ಪರಿಸ್ಥಿತಿಯು ತಿಳಿಯಾದಂತೆ ಪಕ್ಷ ಮತ್ತು ಸಮಾಜದಲ್ಲಿ ಜನತಾಂತ್ರಿಕ ಹಕ್ಕು, ವಾದ–ವಿವಾದಗಳಿಗೆ ಮನ್ನಣೆ ಸಿಗಬೇಕಿತ್ತು; ಬಂಡವಾಳಶಾಹಿ ಪಕ್ಷಗಳನ್ನು ನಾಚಿಸುವ ಜನತಾಂತ್ರಿಕ ರೂಢಿ, ಆಚರಣೆ ಹಾಗೂ ಮೌಲ್ಯಗಳನ್ನು ಕಮ್ಯುನಿಸ್ಟರು ಅಳವಡಿಸಿಕೊಳ್ಳಬೇಕಾಗಿತ್ತು. ಇದು ನಮಗೆ ಮಾತ್ರ ಸಾಧ್ಯ. ಏಕೆಂದರೆ ನಮ್ಮದು ಮಾತ್ರ ಬಹುಸಂಖ್ಯಾತರ ಪ್ರಜಾಪ್ರಭುತ್ವ ಅಲ್ಲವೇ!

ಸೈದ್ಧಾಂತಿಕ ಮತ್ತು ಸಾಂಸ್ಕೃತಿಕ ಉನ್ನತಿಗಾಗಿ, ಭ್ರಷ್ಟತೆ ಮತ್ತು ಅಧಿಕಾರಶಾಹಿಯನ್ನು ನಿರ್ನಾಮಗೊಳಿಸಲಿಕ್ಕಾಗಿ ಪ್ರತಿದಿನವೂ ಪ್ರಯತ್ನ ನಡೆಯಬೇಕು. ಇದರಲ್ಲಿ ಉಪೇಕ್ಷೆ ಸಲ್ಲದು. ಆದರೆ ಮನೆಯನ್ನು ನಾವು ಪ್ರತಿನಿತ್ಯ ಗುಡಿಸಿದರೂ ಆರು ತಿಂಗಳಿಗೋ ವರ್ಷಕ್ಕೋ ಒಮ್ಮೆ ದೊಡ್ಡರೀತಿಯಲ್ಲಿ ತೊಳೆದು ಚೊಕ್ಕಟ ಮಾಡುವುದಿಲ್ಲವೇ; ಅದೇ ರೀತಿಯಲ್ಲಿ ಪಕ್ಷವನ್ನೂ, ಸಮಾಜವಾದಿ ವ್ಯವಸ್ಥೆಯನ್ನು ಆಗಾಗ ಚೊಕ್ಕಟ ಮಾಡಬೇಕಾಗುತ್ತದೆ. ಅದಕ್ಕೊಂದು ವ್ಯವಸ್ಥಿತ ಆಂದೋಲನವೇ ಬೇಕು. ಜನತೆ ಎಲ್ಲ ತಪ್ಪುಗಳನ್ನು, ನಾಯಕರನ್ನೂ ಟೀಕಿಸಿ ಪರಿಸ್ಥಿತಿಯನ್ನು ಸೃಜನಾತ್ಮಕವಾಗಿ ತಿದ್ದಲು ಅವಕಾಶವಿರಬೇಕು. ಅದನ್ನು ಸಾಂಸ್ಕೃತಿಕ ಕ್ರಾಂತಿ ಎಂದೇ ಕರೆಯಿರಿ ಅಥವಾ ಇನ್ನೇನಾದರೂ ಹೆಸರಿಡಿ. ಮುಖ್ಯ ಪ್ರಶ್ನೆ ಅದರ ಅಗತ್ಯ. ಆದರೆ ಇದನ್ನು ಏಕೈಕ ಪರಿಹಾರ ಎನ್ನುವಂತೆ ಬಿಂಬಿಸುವವರು ಕೆಲವು ಮುಖ್ಯಾಂಶಗಳನ್ನು ಗಮನಿಸಬೇಕು. ಸಾಂಸ್ಕೃತಿಕ ಕ್ರಾಂತಿಗೆ ನಾಯಕರಾದವರು ಮೇಲಿನಿಂದ ಕರೆ ಕೊಡುವುದು, ಅದು ಸ್ವಿಚ್ ಆನ್ – ಸ್ವಿಚ್ ಆಫ್ ಎಂಬಂತೆ ಆರಂಭವಾಗಿ ನಿಂತು ಹೋಗುವುದು ಆಗಬಾರದು. ಏಕೆಂದರೆ ಒಂದು ಹಾದಿತಪ್ಪಿದ ನಾಯಕತ್ವ ಇಂಥ ಕ್ರಾಂತಿಗೆ ಕರೆ ಕೊಡುವುದೇ ಇಲ್ಲ; ಆಗ ಗತಿಯೇನು! ಅಥವಾ ಕರೆಕೊಡುವುದು ತಮಗೆ ಬೇಡವಾದವರನ್ನು ಪಕ್ಷದಿಂದ ತೊಲಗಿಸುವುದಕ್ಕೆ ನೆಪವಾಗಿ ಬಿಡಬಹುದು. ಆದ್ದರಿಂದ ಪದೇ ಪದೇ ಇಂಥ ಆಂದೋಲನಕ್ಕೆ ಕರೆ ನೀಡುವ ಅಧಿಕಾರ ಕೇಡರ್‌ಗಳಲ್ಲಿ, ಜನಸಾಮಾನ್ಯರಲ್ಲಿ ನೆಲೆಯಾಗಬೇಕು. ಅಂಥ ಹಕ್ಕಿನ ಚಲಾವಣೆ ಸಾಮಾನ್ಯವಾಗಬೇಕು. ಏಕೆ ಎಲ್ಲ ಪಕ್ಷಗಳಲ್ಲೂ ನಾಯಕನ ನಿರ್ಗಮನದ ನಂತರ ಆತನನ್ನು ಬೈದು ಮೂಲೆಗುಂಪಾಗಿಸುವುದು. ಚರಿತ್ರೆಯಿಂದ ಆತನ ಹೆಸರನ್ನೇ ಅಳಿಸಿಹಾಕುವುದು, ಇಲ್ಲಿಯವರೆಗೂ ಆದ ಎಲ್ಲ ತಪ್ಪುಗಳಿಗೂ (ಅದು ತಪ್ಪಾಗದಿದ್ದರೂ ಸಹ!) ಆತನೇ ಕಾರಣ ಎಂದು ಗೂಬೆ ಕೂರಿಸುವುದು ಸಾಮಾನ್ಯ ರೂಢಿಯಾಗಿಬಿಟ್ಟಿದೆ. ಒಬ್ಬ ಮಹಾನ್ ನಾಯಕನ ನಿರ್ಗಮನದ ನಂತರ ಇಡಿಯ ಪಕ್ಷ ಅಥವಾ ವ್ಯವಸ್ಥೆ ಹಳ್ಳ ಹಿಡಿಯುತ್ತದಲ್ಲ ಇದು ಹೇಗೆ ಸಾಧ್ಯ?

ಇಂದಿನ ಕಮ್ಯುನಿಸ್ಟರು ಇವುಗಳನ್ನೆಲ್ಲಾ ಉತ್ತರಿಸಿಕೊಂಡರೆ ಕಮ್ಯುನಿಸಂನ ಭವಿಷ್ಯ ಉಜ್ವಲವಾಗೇ ಇದೆ. ಒಂದು ವೈಜ್ಞಾನಿಕ ಸಿದ್ಧಾಂತಕ್ಕೆ ಎಂದೂ ಸೋಲಿಲ್ಲ. ಶೇಕಡಾ ಒಂದರಷ್ಟು ಜನ ತೊಂಭತ್ತೊಂಬರಷ್ಟು ಜನರ ಮೇಲೆ ಸವಾರಿ ಮಾಡುತ್ತಾ ಅವರನ್ನು ಸುಲಿಗೆ ಮಾಡುವುದು ಎಲ್ಲ ಕಾಲಕ್ಕೂ ಸಾಧ್ಯವೂ ಇಲ್ಲ!

**ಎಡಪಕ್ಷಗಳು ಗ್ರಹಣ ಮುಕ್ತರಾಗಲಿ**

ಸೋವಿಯತ್ ಒಕ್ಕೂಟ ಉರುಳಿದ ಮೇಲೂ ಭಾರತದಲ್ಲಿ ಎಡಪಕ್ಷಗಳು ಸಾಕಷ್ಟು ಕಾಲದವರೆಗೂ ಜನಮನ್ನಣೆಯನ್ನು ಉಳಿಸಿಕೊಂಡಿದ್ದವು. ಆದರೆ ನಂತರ ಅವು ಜನಮಾನಸಕ್ಕೆ ಆಕರ್ಷಕವಾಗಿ ಉಳಿದಿಲ್ಲ ಎಂಬುದು ವಾಸ್ತವ. "ನಮ್ಮ ಪಕ್ಷ





ಬೆಳೆಯುತ್ತಿದೆ" ಎಂದು ಎಷ್ಟೇ ನಾವು ಭರವಸೆ ನೀಡಿದರೂ ಸತ್ಯ ನಮಗೆ ಗೊತ್ತು – ಬಲಪಂಥೀಯರು ಬಲಿಷ್ಠರಾಗುತ್ತಿದ್ದಾರೆ. ಯುವಜನರ ದೊಡ್ಡ ಭಾಗ ಅವರಿಗೆ ಬಲಿಯಾಗಿದೆ.

ಆದರೆ ಪರಿಸ್ಥಿತಿ ಹೀಗೆ ಇರುವುದಿಲ್ಲ. ಬಲಪಂಥೀಯರ ಮೇಲುಗೈ ಒಂದು ಜಾಗತಿಕ ವಿದ್ಯಮಾನ. ಅದು ಬಂಡವಾಳಶಾಹಿಯು, ಆಕ್ರಮಣಕಾರಿಯಾಗಿ ತನ್ನ ಹಿತಾಸಕ್ತಿಯನ್ನು ರಕ್ಷಿಸಿಕೊಳ್ಳಲು ಹರಿಬಿಟ್ಟಿರುವ ಪ್ರತಿಗಾಮಿ ಅಲೆಯ ಒಂದು ಭಾಗ. ಆದರೆ ಭಾರತದಲ್ಲಿ ಆರ್‌ಎಸ್‌ಎಸ್‌ನಂಥ ಸಂಘಟನೆ ಈ ಅಲೆಯ ಮೇಲೆ ಸವಾರಿ ಮಾಡುತ್ತಿರುವುದರಿಂದ ಇದಕ್ಕೊಂದು ಫ್ಯಾಸಿಸ್ಟ್ ಆಯಾಮ ಬಂದಿದೆ.

ಇದನ್ನು ಎದುರಿಸಲು ಎಡಪಕ್ಷಗಳು ಸಜ್ಜಾಗಬೇಕು. ಅವರ ನಡುವೆ ಸ್ನೇಹ ಸಹಕಾರ ಎಷ್ಟು ಚೆನ್ನಾಗಿರಬೇಕೆಂದರೆ ಅವರು ಟ್ರೇಡ್ ಯೂನಿಯನ್ ಸ್ಪರ್ಧೆ, ಈರ್ಷ್ಯೆಗಳನ್ನು ಮೀರಬೇಕು. ನನ್ನ ಎರಡು ಕಣ್ಣು ಹೋದರೂ ಪರವಾಗಿಲ್ಲ ನಿನ್ನ ಒಂದು ಕಣ್ಣನ್ನಾದರೂ ತೆಗೆಯುತ್ತೇನೆ' ಎಂಬ ಹಟಕ್ಕೆ ಬೀಳಬಾರದು. ಪರಸ್ಪರರ ಏಳಿಗೆಯನ್ನು ಕಂಡು ಖುಷಿಯಾಗಬೇಕು. ಸೈದ್ಧಾಂತಿಕ ಚರ್ಚೆಯ ನೆಪದಲ್ಲಿ ಆತ್ಮಘಾತುಕ ಟೀಕೆ, ಒಬ್ಬರ ಬುಟ್ಟಿಗೆ ಇನ್ನೊಬ್ಬರು ಕೈ ಹಾಕಿ ಕೇಡರ್‌ಗಳನ್ನು ಎತ್ತಿಕೊಂಡು ಹೋಗುವ ಪ್ರಕ್ರಿಯೆ ಇವೆಲ್ಲಾ ಆಗಬಾರದು. ನಿಜವಾದ ಒಕ್ಕೂಟ ಚಳುವಳಿಯು ಅತ್ಯಂತ ಸಣ್ಣ ಪಕ್ಷಕ್ಕೂ 'ನಾನಿದರಲ್ಲಿ ಪಾಲುದಾರ, ಸಮಷ್ಟಿಯ ಲಾಭದಲ್ಲಿ ನನಗೂ ಲಾಭವಿದೆ' ಎಂಬ ಭಾವನೆಯನ್ನು ಹುಟ್ಟಿಸಬೇಕು. ಇನ್ನು ಕೆಲವು ಸಣ್ಣ ಪಕ್ಷಗಳು ವಿಪರೀತ ಮಡಿ–ಮೈಲಿಗೆ, ಶ್ರೇಷ್ಠತೆಯ ವ್ಯಸನಗಳಲ್ಲಿ ಮುಳುಗಿ ಧಾರ್ಮಿಕ ಪಂಥಗಳಂತೆ ಕಾಣುತ್ತಾ ಪ್ರತ್ಯೇಕವಾಗುತ್ತಿವೆ. ಇವೆಲ್ಲಾ ದೂರವಾಗುವುದು ಹೆಚ್ಚು ಮುಕ್ತವಾದ ಸಂವಾದ ಮತ್ತು ಜಂಟಿ ಕ್ರಿಯೆಯಲ್ಲಿ.

ಆದರೆ ಕೇವಲ ೫–೬ ಎಡಪಕ್ಷಗಳು ಒಂದಾಗಿ ಫ್ಯಾಸಿಸಂಅನ್ನು ಹಿಮ್ಮೆಟ್ಟಿಸುವುದು ಸಾಧ್ಯವಿಲ್ಲ. ದೇಶದ ಬಹುತೇಕ ಭಾಗಗಳಲ್ಲಿ ಎಡಪಕ್ಷಗಳೆಲ್ಲಾ ಒಂದಾದರೂ ಅವುಗಳ ಪ್ರಭಾವ ತೀರಾ ಕಡಿಮೆ. ಹೀಗಾಗಿ ಪ್ರಭಾವಶಾಲಿ ವ್ಯಕ್ತಿಗಳು, ಹೋರಾಟಗಾರ ಬುದ್ಧಿಜೀವಿಗಳು, ಸ್ವಯಂಸೇವಾ ಸಂಸ್ಥೆಗಳು ಎಲ್ಲರನ್ನೂ ಒಳಗೊಂಡ ಒಕ್ಕೂಟ ಅಗತ್ಯ. ಇದಲ್ಲದೆ ಅನೇಕ ಬಿಜೆಪಿಯೇತರ ಶಕ್ತಿಗಳನ್ನು, ದಲಿತರನ್ನು, ಅಲ್ಪಸಂಖ್ಯಾತರನ್ನು, ರಾಜಕೀಯ ಪಕ್ಷಗಳನ್ನು ಕೆಲವೊಂದು ಬೇಡಿಕೆ ಆಧಾರಿತ ವೇದಿಕೆಗಳಲ್ಲಿ, ಆಂದೋಲನಗಳಲ್ಲಿ ಹೋರಾಟಕ್ಕಿಳಿಸಬೇಕು. ಮೊದಲಿಗೆ ಬಿಜೆಪಿಯನ್ನು ಚುನಾವಣೆಯಲ್ಲಿ ನಂತರ ಇನ್ನೂ ಸ್ಪಷ್ಟವಾಗಿ ಸೈದ್ಧಾಂತಿಕವಾಗಿ ಹಾಗೂ ಸಂಘಟನಾತ್ಮಕವಾಗಿ ಹಿಮ್ಮೆಟ್ಟಿಸಿ ಜನತಾಂತ್ರಿಕ ವಾತಾವರಣವನ್ನು ಕಾಪಾಡಿಕೊಳ್ಳಬೇಕಾದದ್ದು ತುರ್ತು ಅಗತ್ಯತೆ. ಆ ನಂತರ ಹೆಚ್ಚು ಸಮೂಹ ಆಂದೋಲನಗಳಿಗೆ, ಕ್ರಾಂತಿಕಾರಿ ಹೋರಾಟಕ್ಕೆ ನಾವು ಗಮನಕೊಡಬೇಕಾಗುತ್ತದೆ.

ಹೀಗೆ ನಮ್ಮ ಕರ್ತವ್ಯಗಳನ್ನು ಸ್ಪಷ್ಟಪಡಿಸಿಕೊಳ್ಳುವಾಗ ಮತ್ತೆ ಲೆನಿನ್ ನೆನಪಾಗುತ್ತಾರೆ. ಲೆನಿನ್ ತೋರಿಸಿದ ಸೈದ್ಧಾಂತಿಕ ಸ್ಪಷ್ಟತೆ, ಕ್ರಾಂತಿಕಾರಿ ಮುಂದೊಡಗು, ಜನತಾಂತ್ರಿಕ ಕಾರ್ಯವೈಖರಿ, ಎಲ್ಲರನ್ನೂ ಜೊತೆಗೊಯ್ಯಬಲ್ಲ ವಿವೇಕ ಮತ್ತು ಜಾಣ್ಮೆ, ಸದಾ ಹೊಸ ಪರಿಸ್ಥಿತಿಗೆ ಒಗ್ಗಿಕೊಳ್ಳುವ ಕೌಶಲ್ಯ ನಮಗೆ ಆದರ್ಶವಾಗಲಿ.

ನನಗಂತೂ ವೈಯಕ್ತಿಕವಾಗಿ ಕನ್ಹಯ್ಯ ಎಂಬ ವಿದ್ಯಮಾನ, ಜೆಎನ್‌ಯು ಹೈದರಾಬಾದ್ ವಿಶ್ವವಿದ್ಯಾಲಯದ ವಿದ್ಯಾರ್ಥಿ ಸಂಘದ ಗೆಲುವು, ಬಂಗಾಳದಿಂದ ಬರುತ್ತಿರುವ ಕೆಲವು ಒಳ್ಳೆಯ ಸುದ್ದಿಗಳು ಇವನ್ನೆಲ್ಲಾ ಗಮನಿಸಿದಾಗ ಪ್ರವಾಹವು ದಿಕ್ಕು ಬದಲಿಸುತ್ತದೆ ಎಂಬ ಆಶಾವಾದವಿದೆ. ಆದರೆ ಸಣ್ಣತೊರೆಯೊಂದು, ಎಲ್ಲ ಕಸವನ್ನೂ ಗುಡಿಸಿಹಾಕಬಲ್ಲ ಪ್ರಚಂಡ ಪ್ರವಾಹವಾಗಲು ನಮ್ಮೆಲ್ಲರ ಶ್ರದ್ಧಾವಂತ ಪ್ರಯತ್ನ ಅಗತ್ಯ.

**ಡಾ॥ ಬಿ. ಆರ್. ಮಂಜುನಾಥ್**
ನಂ. ೧೩೦, ಔಟ್‌ಹೌಸ್, ಒಂದನೇ ಮಹಡಿ, ಗೋವಿಂದಪ್ಪ ರಸ್ತೆ
ಗಾಂಧಿ ಬಜಾರ್, ಬೆಂಗಳೂರು – ೫೬೦ ೦೦೪

# ಮಾರ್ಕ್ಸ್‌ವಾದ ಮತ್ತು ಮಹಿಳೆ

ಜಿ. ರಾಮಕೃಷ್ಣ

"ಸಂವಿಧಾನವನ್ನು ಬದಲಾಯಿಸುವುದು ನಮ್ಮ ಕಾರ್ಯಸೂಚಿ, ಅದಕ್ಕಾಗಿಯೇ ನಾವು ಅಧಿಕಾರದಲ್ಲಿದ್ದೇವೆ" ಎಂದು ಕೇಂದ್ರ ಸರ್ಕಾರದ ಸಚಿವರೊಬ್ಬರು ಹೇಳಿದ್ದಾರೆ. ಅವರಿಗೆ ತಿದ್ದುಪಡಿ ಮತ್ತು ಬದಲಾವಣೆ ಎಂಬುವುಗಳ ವ್ಯತ್ಯಾಸ ತಿಳಿದಂತಿಲ್ಲ. ಬದಲಾವಣೆಯು ಮೂಲಭೂತ ಆಶಯಗಳ ತಿದ್ದುಪಡಿ; ಸಾಮಾನ್ಯ ತಿದ್ದುಪಡಿಯು ಕಾನೂನಾತ್ಮಕ ಅಂಶಗಳ ಸೇರ್ಪಡೆ ಇಲ್ಲವೇ ರದ್ದತಿ. ಆಮೂಲಾಗ್ರ ಬದಲಾವಣೆಯು ಸಂವಿಧಾನದ ಗ್ರಹಿಕೆಗಳ ದಿಕ್ಕನ್ನು ಬದಲಾಯಿಸುವ ಪ್ರಕ್ರಿಯೆ. ಅಂತಹ ಹಿನ್ನೆಲೆಯಲ್ಲಿ ನಡೆಯುತ್ತಿರುವ ಚರ್ಚೆ ಇದು. ಮಾರ್ಕ್ಸ್ ಬಗ್ಗೆ ವಯಸ್ಸಾದವರು ಮಾತನಾಡಿ ಫಲವಿಲ್ಲ; ಯುವಕ–ಯುವತಿಯರು ಮಾರ್ಕ್ಸ್‌ವಾದದ ನೆಲೆಯಲ್ಲಿ ಚಿಂತನೆ ನಡೆಸದಿದ್ದಲ್ಲಿ ಮಾರ್ಕ್ಸ್ ಬಗ್ಗೆ ಮಾತನಾಡುವ ಅಗತ್ಯವೇ ಇರುವುದಿಲ್ಲ!

ಡಾ॥ ಬಿ. ಆರ್. ಅಂಬೇಡ್ಕರ್ ಅವರ ಅಧ್ಯಕ್ಷತೆಯಲ್ಲಿ ಸಂವಿಧಾನ ರಚನಾ ಸಮಿತಿಯು ನಮ್ಮ ದೇಶದ ಸಂವಿಧಾನದ ಕರಡನ್ನು ಸಿದ್ಧಪಡಿಸಿತು. ಅವರು ಮಾರ್ಕ್ಸ್‌ವಾದಿಯಾಗಿರಲಿಲ್ಲ, ನಿಜ; ಆದರೆ ಸಾಮ್ಯವಾದದ ಬಗ್ಗೆ ಅವರಿಗೆ ಒಲವಿತ್ತೇ ವಿನಾ ಅನಾದರವಿರಲಿಲ್ಲ. ಅವರ ನೇತೃತ್ವದಲ್ಲಿ ಮಹಾರಾಷ್ಟ್ರದ ಕೊಂಕಣದಲ್ಲಿ ರೈತರಿಗೆ ಮತ್ತು ಕೃಷಿ ಕೂಲಿಕಾರರಿಗೆ ಒಂದು ದೊಡ್ಡ ಪಿಡುಗಾಗಿದ್ದ ಖೋತಿ ಪದ್ಧತಿಯ ವಿರುದ್ಧ ಬೃಹತ್ತಾದ ಹೋರಾಟ ನಡೆದಿತ್ತು. ಆಗ್ಗೆ ಬಾಬಾಸಾಹೇಬ್ ಅಂಬೇಡ್ಕರರು ಸ್ವತಂತ್ರ ದುಡಿಮೆಗಾರರ ಪಕ್ಷ (ಇಂಡಿಪೆಂಡೆಂಟ್ ಲೇಬರ್ ಪಾರ್ಟಿ) ಸ್ಥಾಪಿಸಿ, ಅದರ ಅಧ್ಯಕ್ಷರಾಗಿದ್ದರು. ಅನಂತ ಚಿತ್ರೆ ಅದರ ಪ್ರಧಾನ ಕಾರ್ಯದರ್ಶಿ. ಸುರೇಂದ್ರನಾಥ ಟಿಪ್ನಿಸ್, ಚಂದ್ರಕಾಂತ ಅಧಿಕಾರಿ, ನಾಗು ಪಾಟೀಲ, ಸುಬೇದಾರ್ ಮೋರೆ, ಮುಂತಾದವರು ಪಕ್ಷದ ಕಾರ್ಯಕರ್ತರು. ೧೯೩೮ರ ಜನವರಿ ೧೪ರಂದು ಬೊಂಬಾಯಿಯಲ್ಲಿ ರೈತರ ಮಹಾ ಸಮ್ಮೇಳನ ಆಯೋಜಿತವಾಗಿತ್ತು. ಖೋತಿ ವಿರುದ್ಧದ ಐಕ್ಯ ಹೋರಾಟದಲ್ಲಿ ಕಾಂಗ್ರೆಸ್ ಪಕ್ಷವು ಪಾಲ್ಗೊಂಡಿರಲಿಲ್ಲ, ಆದರೆ ಭಾರತ ಕಮ್ಯುನಿಸ್ಟ್ ಪಕ್ಷದ ಅನೇಕ ಕಾರ್ಯಕರ್ತರು ಸಕ್ರಿಯ ಸಂಘಟಕರಾಗಿ ಕೆಲಸ ಮಾಡುತ್ತಿದ್ದರು. ೧೯೩೮ರ ಮಹಾಸಭೆಯಲ್ಲಿ ಕೊಂಕಣ, ಸತಾರಾ, ನಾಸಿಕ್, ಕೊಲ್ಹಾಪುರ, ಮುಂತಾದ ಭಾಗಗಳಿಂದ ರೈತರು, ಕೂಲಿಕಾರರು, ಅಪಾರ ಸಂಖ್ಯೆಯಲ್ಲಿ ಭಾಗವಹಿಸಿದ್ದರು. ಸಾವಿರಾರು ಮಹಿಳೆಯರೂ ಪ್ರತಿಭಟನಾ ಮೆರವಣಿಗೆ ಮತ್ತು ಸಭೆಯಲ್ಲಿ ಪಾಲ್ಗೊಂಡಿದ್ದರು. ಚಿತ್ರೆ, ಸುರ್ಬಾನಾನಾ (ಸುರೇಂದ್ರನಾಥ ಟಿಪ್ನಿಸ್), ಮುಂತಾದವರಲ್ಲದೆ ಕಮ್ಯುನಿಸ್ಟ್ ಪಕ್ಷದ ಎಸ್.ಜಿ. ಸರ್ದೇಸಾಯಿ, ಶಾಮರಾವ್ ಪರುಲೇಕರ್, ಬಿ. ಟಿ. ರಣದಿವೆ ಮತ್ತಿತರ ಕಾರ್ಯಕರ್ತರು ಈ ಸಭೆಯಲ್ಲಿ ಹಾಜರಿದ್ದರು, ಸಭೆಯನ್ನು ಸಂಘಟಿಸುವುದರಲ್ಲಿ ಮುಂದಾಳುಗಳಾಗಿದ್ದರು. ಸಭೆಯನ್ನುದ್ದೇಶಿಸಿ ಅಧ್ಯಕ್ಷ ಅಂಬೇಡ್ಕರ್ ಅವರು ಮಾತನಾಡಿ ಖೋತಿಯ ನಿರ್ಮೂಲನವು ರೈತಾಪಿ ಜನರ ವಿಮುಕ್ತಿಗೆ ಅತ್ಯಗತ್ಯವೆಂದು ಒತ್ತಿ ಹೇಳಿದರು. ಅಂದಿನ ಭಾಷಣವು ಮರಾಠಿ ಭಾಷೆಯಲ್ಲಿತ್ತು, ಮತ್ತು ಅದು "ಕೊಂಕಣ್ ಕೃಷೀವಲ್" ಪತ್ರಿಕೆಯಲ್ಲಿ ಸುದೀರ್ಘವಾಗಿ ವರದಿಯಾಗಿತ್ತು. ಡಾ॥ ಅಂಬೇಡ್ಕರರ ಅಂದಿನ ಭಾಷಣದ ಒಂದು ಭಾಗ ಹೀಗಿದೆ : "ಈ ಸಂದರ್ಭದಲ್ಲಿ ನನ್ನ ಕಮ್ಯುನಿಸ್ಟ್ ಸ್ನೇಹಿತರಿಗೆ ಕೆಲವು ಆರೋಗ್ಯಕರ ಸಂಗತಿಗಳನ್ನು ಹೇಳುವುದು ಅಪ್ರಸ್ತುತವಾಗಲಾರದೆಂದು ಭಾವಿಸುತ್ತೇನೆ. ಕಮ್ಯುನಿಸ್ಟರ ಸಿದ್ಧಾಂತವನ್ನು ಕುರಿತಂತೆ ಹೇಳುವುದಾದರೆ ನಾನು ಅದನ್ನು ಸಾಕಷ್ಟು ಆಳವಾಗಿ ಅರಿತಿದ್ದೇನೆ. ಇಲ್ಲಿ ಉಪಸ್ಥಿತರಿರುವ ನನ್ನ ಕಮ್ಯುನಿಸ್ಟ್ ಸ್ನೇಹಿತರಿಗಿಂತಲೂ ಹೆಚ್ಚಾಗಿಯೇ ನಾನು ಕಮ್ಯುನಿಸ್ಟ್ ತತ್ತ್ವಶಾಸ್ತ್ರವನ್ನು ಅಧ್ಯಯನ ಮಾಡಿದ್ದೇನೆ. ಅದನ್ನು ಬಹಳ



ನಿಷ್ಠೆಯಿಂದ ನಾನು ಅಭ್ಯಾಸ ಮಾಡಿದ್ದೇನೆ. ಕಮ್ಯುನಿಸ್ಟ್ ಸಾಹಿತ್ಯವು ನನಗೆ ಬಹಳ ಆಕರ್ಷಕವಾಗಿ ಕಂಡಿದೆ. ಅದನ್ನು ಎಷ್ಟರಮಟ್ಟಿಗೆ ನಾವು ಉಪಯೋಗಿಸಿಕೊಳ್ಳುತ್ತೇವೆ ಎಂಬುದು ಮುಖ್ಯ. ಕಮ್ಯುನಿಸ್ಟ್ ಸಿದ್ಧಾಂತದ ನೆಲೆಯಲ್ಲಿ ನಾವು ಕಾರ್ಯಪ್ರವೃತ್ತರಾದರೆ ಇಂಡಿಯಾದಲ್ಲಿ ನಾವು ಏನೆಲ್ಲಾ ಸಾಧಿಸಬಹುದು ಎನಿಸುತ್ತದೆ. ಬೇರೆ ದೇಶಗಳಲ್ಲಿ ಕಮ್ಯುನಿಸ್ಟರು ಸಾಧಿಸಿದುದಕ್ಕಿಂತಲೂ ಹೆಚ್ಚಾಗಿ, ಮತ್ತು ಅವರು ತೆಗೆದುಕೊಂಡ ಸಮಯಕ್ಕಿಂತಲೂ ಕಡಿಮೆ ಸಮಯದಲ್ಲಿ ಹಾಗೂ ಅವರ ಶ್ರಮಕ್ಕಿಂತಲೂ ಕಡಿಮೆ ಶ್ರಮದಿಂದ, ನಾವು ಅತೀವ ಯಶಸ್ಸನ್ನು ಸಾಧಿಸುವುದರಲ್ಲಿ ಅನುಮಾನವಿಲ್ಲ. ಆದ್ದರಿಂದಲೇ ದುಡಿಯುವ ಜನರ ಚಳುವಳಿ ಮತ್ತು ಹೋರಾಟಗಳಲ್ಲಿ ಕಮ್ಯುನಿಸ್ಟ್ ಸಿದ್ಧಾಂತಕ್ಕೆ ಪ್ರಮುಖ ಸ್ಥಾನವಿದೆ. ಆದ್ದರಿಂದ ನನ್ನ ದೃಷ್ಟಿಯಲ್ಲಿ ನಮ್ಮ ಸ್ವತಂತ್ರ ಮತ್ತು ಐಕ್ಯ ಸಂಘಟಿತ ಹೋರಾಟವು ಹಿಗ್ಗಬೇಕು. ನಮ್ಮಲ್ಲಿ ಭಿನ್ನಾಭಿಪ್ರಾಯಗಳಿಗೆ ಎಡೆ ಕೊಡಬಾರದು, ನಮ್ಮ ಹೋರಾಟಗಳು ಐಕ್ಯತೆಯಿಂದ ಕೂಡಿರಬೇಕು. ಕೆಚ್ಚೆದೆಯಿಂದ ಮುನ್ನುಗ್ಗಿ ನಾವು ಹೋರಾಡಬೇಕು."

ಕನ್ನಡ ವಿಶ್ವವಿದ್ಯಾಲಯದ ದಲಿತ ಅಧ್ಯಯನ ಪೀಠದ ವಿಚಾರಗೋಷ್ಠಿಯಲ್ಲಿ ಮಾರ್ಕ್ಸ್‌ವಾದಿ ವಿಶ್ಲೇಷಣೆಯೊಂದು ಅಸಂಗತ, ಅಪ್ರಸ್ತುತ, ಎನಿಸಿ ಕೊಳ್ಳುವುದಿಲ್ಲ. ಅಂಬೇಡ್ಕರರ ವ್ಯಾಖ್ಯಾನದಲ್ಲಿನ ಕಡೆಯ ವಾಕ್ಯವನ್ನು ನಾವು ಮನನ ಮಾಡಬೇಕು ಮತ್ತು ಅದರಂತೆ ಮುನ್ನಡೆಯಬೇಕು. ಅಂಬೇಡ್ಕರರ ಇಂಗಿತವನ್ನು ಕಾರ್ಯಗತಗೊಳಿಸುವ ಜವಾಬ್ದಾರಿ ನಮ್ಮ ಮೇಲಿದೆ. ಇತ್ತೀಚೆಗಷ್ಟೆ ಜರುಗಿದ ಗುಜರಾತ್ ಶಾಸನಸಭಾ ಚುನಾವಣೆಯು ಅದಕ್ಕೆ ಸೂಚನೆ ನೀಡಿದೆ, ಮುನ್ನುಡಿ ಬರೆದಿದೆ. ದಲಿತ ಮತ್ತು ಕಮ್ಯುನಿಸ್ಟ್ ಚಳುವಳಿಗಳು ಐಕ್ಯತೆಯಿಂದ ಕ್ರಿಯಾಶೀಲವಾಗುವುದು ಇಂದಿನ ತುರ್ತು ಅವಶ್ಯಕತೆಯಾಗಿದೆ. ಅಂಬೇಡ್ಕರರ ಸೂಚನೆಯನ್ನು ಒಪ್ಪಿ ಅದರಂತೆ ಹೆಜ್ಜೆ ಹಾಕದಿದ್ದರೆ ನಾವು ಪತನದ ದಿಕ್ಕಿನಲ್ಲಿ ಸಾಗುವುದು ಖಚಿತ.

ನಮ್ಮ ಇಂದಿನ ಸಾಮಾಜಿಕ – ರಾಜಕೀಯ ವಾತಾವರಣ ಎಷ್ಟು ಮಾರ್ಪಾಡಾಗಿದೆ ಎಂದರೆ ಯಾವ ಸಂಗತಿಯೂ ಸಂತಸ ಮತ್ತು ಭೀತಿ ತರುವಂತಿಲ್ಲ. ಒಂದರ್ಥದಲ್ಲಿ ಎಲ್ಲದಕ್ಕೂ ನಾವು ಒಗ್ಗಿಕೊಂಡುಬಿಡುತ್ತಿದ್ದೇವೆ, ಬಗ್ಗಿ ನಡೆಯಲು ಕಲಿಯುತ್ತಿದ್ದೇವೆ. ಹಾದಿಯಲ್ಲಿ ಒಂದು ಹಸುವನ್ನು ನಾವು ಒಯ್ಯುತ್ತಿದ್ದರೆ ಏಟು ಬೀಳಬಹುದು, ಮನೆಯಲ್ಲಿ ಕುರಿಮಾಂಸ ಇಟ್ಟುಕೊಂಡಿದ್ದರೆ ಅದು ಹಸುವಿನ ಮಾಂಸವೆಂದು ಆರ್ಭಟಿಸುತ್ತಾ ಯಾರೋ ಮನೆಗೆ ನುಗ್ಗಬಹುದು. ಯಾವುದೋ ಊರಿನಲ್ಲಿ ಒಬ್ಬ ಲಾರಿ ಡ್ರೈವರ್ ರಸ್ತೆಯಲ್ಲಿ ಅಡ್ಡಬಂದ ಒಂದು ಹಸುವನ್ನು ದಿಟ್ಟಿಸಿ ನೋಡಿದನಂತೆ, ಅದು ಗೋಮಾತೆಗೆ ಮಾಡಲಾದ ಅವಮಾನವೆಂದು ಹೇಳಿ ಕೆಲವರು ಅವನನ್ನು ಚೆನ್ನಾಗಿ ಹೊಡೆದರೆಂದು ಒಂದು ಪತ್ರಿಕೆಯಲ್ಲಿ ವರದಿಯಾಗಿತ್ತು. ಗುಜರಾತಿನ ಚುನಾವಣಾ ಸಮಯದಲ್ಲಿ ದೇಶದ ಕಾನೂನುಗಳು ಕೆಲವರಿಗೆ ಅನ್ವಯವಾಗುವುದಿಲ್ಲ, ಅವರಿಗೇ ಪ್ರತ್ಯೇಕ







**ನೋ**ಟದಲ್ಲಿನ ಮೊದಲ ಸೆಳೆತ
ಕಣ್ಣುಗಳ ಮಿಲನದ ತುಡಿತ
ಮೌನದಲಿ ಮಾತಿನ ಭೋರ್ಗರೆತ
ಎದೆಯಲಿ ಪ್ರೀತಿಯ ಜಲಪಾತ

ಧುಮ್ಮಿಕ್ಕುತ್ತಿರುವ ಪ್ರೀತಿಯಲಿ
ಸಾಗುವುವು ಭಾವಗಳು ಮೌನದಲಿ
ಒಂದರೊಡನೆ ಒಂದು ಬೆರೆತು
ಹೃದಯ ಹೃದಯಗಳನರಿತು

ಹೃದಯಗಳ ಸಂಗಮದಲಿ
ಮೌನ ಮಾತಾಗಿ ಮಾತು ಮೌನವಾಗಿ
ತೇಲಿ ಬರುವುದು ಸಂತಸದಲಿ
ಮನಗಳೆರಡೂ ಕೂಡಿ ಒಂದಾಗಿ

ಪ್ರೇಮಕ್ಕೆ ಪ್ರೇಮದ ಪಿಸುಮಾತಿಗೆ
ನಲ್ಲ ನಲ್ಲೆಯರ ಒಲವಿನಾಟಕೆ
ಹರಿದಾಡುತಲಿರುವ ಪ್ರೀತಿಗೆ
ಎಣೆಯೂ ಇಲ್ಲ ಎಲ್ಲೆಯೂ ಇಲ್ಲ

ಪ್ರೀತಿಯು ಚಂಚಲವಲ್ಲ
ಚಂಚಲತೆ ಪ್ರೀತಿಯೇ ಅಲ್ಲ

ತನುವ ಸೇರುವ ತವಕಕ್ಕಿಂತ
ಮನವ ಸೇರುವ ಪುಳಕ ಪ್ರೀತಿ

ಕಣ್ಣೋಟದಲಿ ಪರಿಶುದ್ಧವು
ಎದೆಯ ಗೂಡಿನಲಿ ನಿಷ್ಕಲ್ಮಶವು
ಮನಗಳಲಿ ಪ್ರೇಮ ಸಿಂಚನವು
ಇರಬೇಕು ಬೆರೆತಿರಬೇಕು

ಯೌವನದಲ್ಲಿ ಉಕ್ಕಿ ಹರಿದಾಡಿ
ಒಬ್ಬರನ್ನೊಬ್ಬರು ಬೆರೆತು ಕೂಡಿ
ಬತ್ತಿಹೋಗುವುದಲ್ಲ ಪ್ರೀತಿ
ಮುಪ್ಪಿನಲ್ಲೂ ಒಪ್ಪಿಕೊಳಬೇಕು
ಸಾವಿನಲ್ಲೂ ಅಪ್ಪಿಕೊಳಬೇಕು
ಸಾವಿನಾಚೆಯೂ ಸೇರಿ ನಗಬೇಕು.

**ಅರವಿಂದ್ (ಪುಟ್ಟಸ್ವಾಮಿ ಎಸ್. ಬಿ.)**
ಸಹ ಶಿಕ್ಷಕರು (ಕನ್ನಡ ಭಾಷೆ), ಸರ್ಕಾರಿ ಪ್ರೌಢಶಾಲೆ
ಹಾರೋಕೊಪ್ಪ, ಚನ್ನಪಟ್ಟಣ ತಾಲ್ಲೂಕು, ರಾಮನಗರ ಜಿಲ್ಲೆ

ನಿಯಮಗಳಿವೆ, ಎಂಬುದನ್ನು ನೋಡಿದ್ದೇವೆ. ಆ ಕೆಲವರು ಆಳುವ ಪಕ್ಷದ ನಾಯಕರು. ಜನರ ಮೇಲೆ ಬೇಕಾದಂತೆ ಬೈಗುಳ ಸುರಿಸುವವರಿದ್ದಾರೆ, ದೇಶದ್ರೋಹದ ಆಪಾದನೆಯನ್ನು ಕಂಡಕಂಡವರ ಮೇಲೆ ಹೊರಿಸುವವರಿದ್ದಾರೆ; ಅದನ್ನು ಪ್ರಶ್ನಿಸುವಂತಿಲ್ಲ. ಆದರೆ ಅದು ಅಂಬೇಡ್ಕರ್ ಮತ್ತು ಮಾರ್ಕ್ಸ್‌ರ ಹಾದಿಯಲ್ಲ. ಅಂಬೇಡ್ಕರ್, ಗಾಂಧಿ, ಮಾರ್ಕ್ಸ್ ಮತ್ತು ಬಸವಣ್ಣ ಇರಬೇಕಾದ ಕಡೆಗಳಲ್ಲಿ ಇಂದು ನಮ್ಮ ದೇಶದಲ್ಲಿ ಮನು ಪೀಠಾಧ್ಯಕ್ಷನಾಗಿ ಬಿಟ್ಟಿದ್ದಾನೆ. ಇಂತಹ ಹೀನಾಯ ಸನ್ನಿವೇಶಕ್ಕೆ ಪರ್ಯಾಯವೇನಾದರೂ ಬೇಕೆನಿಸಿದರೆ ಸಮಾನ ಮನಸ್ಕರು ಡಾ॥ ಬಾಬಾಸಾಹೇಬ್ ಅವರು ಸೂಚಿಸಿದ್ದಂತೆ ಐಕ್ಯ ಕಾರ್ಯಾಚರಣೆಗೆ ಮುಂದಾಗಬೇಕು; ಇಲ್ಲವಾದರೆ, ಅಂಬೇಡ್ಕರ್ – ಮಾರ್ಕ್ಸ್‌ರ ಹೆಸರುಗಳನ್ನು ಹೇಳುವುದನ್ನು ನಿಲ್ಲಿಸಬೇಕು. ಅರ್ಥಾತ್, ಆಯಾಕಾಲಕ್ಕೆ ಸಾಮರಸ್ಯವು ಯಾವ ಸ್ವರೂಪದ್ದು ಎಂಬುದನ್ನು ನಿರ್ದಿಷ್ಟವಾಗಿ ತಿಳಿಯಬೇಕು ಮತ್ತು ಅದನ್ನು ಅನುಷ್ಠಾನಕ್ಕೆ ತರಬೇಕು. ಹಾಗೆ ಮಾಡದಿದ್ದರೆ ಯಾರ ಮಾರ್ಗದರ್ಶನ ತಾನೆ ಏಕೆ ಬೇಕು?

ತನ್ನ ಜೀವಿತಕಾಲದಲ್ಲೇ ಮಾರ್ಕ್ಸ್ ಒಂದು ಪ್ರಶ್ನೆಯನ್ನು ಎದುರಿಸಬೇಕಾಗಿಬಂದಿತ್ತು : "ಅಯ್ಯಾ ಮಾರ್ಕ್ಸ್, ಅದೇನೋ ಮಾರ್ಕ್ಸ್‌ವಾದವಂತೆ, ಏನದು?" ಅದಕ್ಕೆ ಸಂಕ್ಷಿಪ್ತವಾಗಿ ಅವನು ಪ್ರತಿಕ್ರಿಯಿಸಿದ್ದ : ಅಂಥದೇನೂ ವಿಶಿಷ್ಟವಾದ ಮಾರ್ಕ್ಸ್‌ವಾದವೆಂಬುದಿಲ್ಲ. ಪ್ರಕೃತಿ ವಿಜ್ಞಾನದ ಪದ್ಧತಿಯ ಅನುಸರಣೆಯನ್ನು ಸಾಮಾಜಿಕ ಸನ್ನಿವೇಶಗಳ ವಿಶ್ಲೇಷಣೆಗೆ ಬಳಸುವುದು ವೈಜ್ಞಾನಿಕ ಹಾದಿಯಾಗುತ್ತದೆ. ಹಿಂದಿನ ಮತ್ತು ಇಂದಿನ ಚಾರಿತ್ರಿಕ ಸಂದರ್ಭಗಳ ಅರ್ಥೈಸುವಿಕೆಗೆ ಇದು ಪ್ರಶಸ್ತವಾದ ವಿಧಾನ, ಅಷ್ಟೆ." ಮಹಿಳಾ ಪ್ರಶ್ನೆಯನ್ನು ಅರ್ಥೈಸಿಕೊಳ್ಳಲು ಸಹ ಇದೇ ಮಾರ್ಗವನ್ನು ಅನುಸರಿಸಬೇಕಾಗಿದೆ.

ಇರುವುದನ್ನು "ಹೀಗಿದೆ" ಎಂದು ವಿವರಿಸುವುದರಲ್ಲಿ ವಿಶೇಷವೇನೂ ಇಲ್ಲ; ಅದನ್ನು ಬದಲಾಯಿಸುವುದು ಹೇಗೆಂಬುದು ಪ್ರಖರವಾದ ಪ್ರಶ್ನೆ. ಅಂದರೆ, ನಮ್ಮ ನಿರೀಕ್ಷೆಗಳ ಪೂರೈಕೆಗೆ ಅಗತ್ಯವಾದ ಸನ್ನಿವೇಶದ ರಚನೆ ಹೇಗೆ? ಅದಕ್ಕೆ ಆಯಾಮಗಳು ಯಾವುವು? ಪ್ರತಿಬಂಧಕಗಳ ನಿವಾರಣೆ ಮಾಡುವುದೆಂತು? ಇದು ವೈಯ್ಯಕ್ತಿಕ ನೆಲೆಯಲ್ಲಿ ಸಿದ್ಧಿಸುತ್ತದೋ, ಸಾಮುದಾಯಿಕ ನೆಲೆಯಲ್ಲೋ? ಯಾರೆಲ್ಲಾ ಒಗ್ಗೂಡಿ ಈ ಪ್ರಕ್ರಿಯೆಯನ್ನು ಸಫಲಗೊಳಿಸಲು ಸಾಧ್ಯ? ಇಂತಹ ಪ್ರಶ್ನೆಗಳನ್ನು ಹಾಕಿಕೊಂಡು ಸರಿ ಉತ್ತರಗಳನ್ನು ಕಂಡುಕೊಂಡರೆ ನಾಲ್ಕು ಹೆಜ್ಜೆ ಮುಂದೆ ಹೋಗಲು ಖಂಡಿತ ಸಾಧ್ಯವಾಗುತ್ತದೆ.

ಮೂಲತಃ ಪ್ರಕೃತಿ ವಿಜ್ಞಾನದ ವಿಧಾನವು ಸ್ಥಗಿತವಾದುದಲ್ಲ. ನ್ಯೂಟನ್ ಮೇಧಾವಿಯೇ ಹೌದು, ಆದರೆ ವಿಜ್ಞಾನವು ಅವನ ಹಂತದಲ್ಲಿಯೇ ಉಳಿಯುವುದಿಲ್ಲ. ಅದು ಅನುಭವದ ಆಧಾರದಿಂದಾಗಿ ವಿಕಾಸ ಹೊಂದುತ್ತಿರುತ್ತದೆ. ಜ್ಞಾನದ ಹಾದಿಯೇ ಅದು. ಅಗಾಧ ಮಾಹಿತಿಯ ಸಂಗ್ರಹ, ನಂತರ ಅದೆಲ್ಲದರ ವಿಶ್ಲೇಷಣೆ, ಅದರಿಂದ ನಿಯಮಗಳ ಬಗೆಗಿನ ವಿವೇಕ. ಪ್ರಯೋಗದಿಂದ ಸಿದ್ಧವಾದ ತೀರ್ಮಾನವು ನಿಯಮಗಳ ತಿಳಿವಳಿಕೆಗೆ ಅರ್ಹತಾಪತ್ರ ನೀಡುತ್ತದೆ; ಕೇವಲ ಬೌದ್ಧಿಕ ಕಸರತ್ತಿನಿಂದ ಪ್ರಕೃತಿಯ ನಿಯಮಗಳು ಸಿದ್ಧಿಸುವುದಿಲ್ಲ. ಉದಾಹರಣೆಗೆ, ಮಾನವ ಜನಾಂಗದ ಚರಿತ್ರೆಯ ವಿವಿಧ ಹಂತಗಳಲ್ಲಿ ಮಹಿಳೆಯದು ಏನೋ ಒಂದು ನಿರ್ದಿಷ್ಟ ಸ್ಥಾನವಿದೆ. ಆ ಸ್ಥಾನ ಯಾವುದು ಮತ್ತು ಎಂಥದು? ಅದೇಕೆ ಹಾಗಿದೆ ಮತ್ತು ಅದೇನಾಗಬೇಕೆಂಬ ತೀವ್ರ ಅಪೇಕ್ಷೆ ನಮ್ಮಲ್ಲಿದೆ? ಹಾಗೆ ಬದಲಾಗಬೇಕಾದರೆ ಯಾರು ಮತ್ತು ಹೇಗೆ ಮಧ್ಯಪ್ರವೇಶ ಮಾಡಿ ವ್ಯವಸ್ಥೆಯನ್ನು ಪುನರ್ನಿರ್ಮಾಣ ಮಾಡಬೇಕು? ಪ್ರಕೃತಿ ವಿಜ್ಞಾನದ ಹಾದಿ ಇದು. ಹಿಂದಿನ ಮಾಹಿತಿ ಮತ್ತು ಇಂದಿನ ಮಾಹಿತಿ, ಎರಡನ್ನೂ ಕಲೆಹಾಕಿ ವಿಶ್ಲೇಷಣೆಯಲ್ಲಿ ತೊಡಗಬೇಕು; ಆದರೆ ವಿಶ್ಲೇಷಣಾ ವಿಧಾನ ಮಾತ್ರ ವಿಜ್ಞಾನದ ಮಾದರಿಯದು.

ಇದೆಲ್ಲಾ ತೀರಾ ಪ್ರಾಥಮಿಕ ಸೂತ್ರಗಳ ಪ್ರತಿಪಾದನೆಯೆಂಬ ತಿಳಿವು ಸಹಜ. ಆದರೆ ಮಾರ್ಕ್ಸ್‌ವಾದವೆಂದರೆ ಹಿಂಸೆಯ ಆಗರ, ಅದು ಯಾಂತ್ರಿಕ ಚಿಂತನೆ, ಎಲ್ಲವನ್ನೂ ಅದು ಕೇವಲ ಆರ್ಥಿಕ ಹಿನ್ನೆಲೆಯಲ್ಲಿಯೇ ವಿಶ್ಲೇಷಿಸಿಬಿಡುತ್ತದೆ, ಮುಂತಾದ ಆಪಾದನೆಗಳನ್ನು ನೂರೈವತ್ತು ವರ್ಷಗಳಿಂದ ಮಾಡುತ್ತಾ ಬರಲಾಗಿದೆಯಾದ್ದರಿಂದ ಈ ಪ್ರಸ್ತಾಪವು ಅಗತ್ಯವೆನಿಸಿತು. ಫ್ರಾನ್ತ್ಸ್ ಮೇರಿಂಗ್ ಎಂಬೊಬ್ಬ ಚಿಂತಕ ಮತ್ತು ಹೋರಾಟಗಾರ ಅನೇಕ ವರ್ಷಗಳ ಕಾಲ ಮಾರ್ಕ್ಸ್ ಜೊತೆ ಕೆಲಸ ಮಾಡಿದ್ದು, ನಂತರ ಅವನ ಜೀವನ ಚರಿತ್ರೆಯನ್ನು ಬರೆದಿದ್ದಾನೆ. ಅದು ಪ್ರಕಟವಾದ್ದು ೧೯೧೮ರಲ್ಲಿ. ಅಂದರೆ ಮಾರ್ಕ್ಸ್ ಜನಿಸಿದ ನಂತರದ ನೂರನೆಯ ವರ್ಷದಲ್ಲಿ. ಅದರಲ್ಲಿ ಅವನೊಂದು ಮಾತು ಹೇಳಿದ್ದಾನೆ :



"ಮಾರ್ಕ್ಸ್ ರಚಿಸಿದ 'ಬಂಡವಾಳ' ಎಂಬ ಗ್ರಂಥವು ಬೈಬಲ್‌ನಂತಹ ದೈವವಾಣಿಯೇನಲ್ಲ. ಅದರಲ್ಲಿ ಅಂತಿಮ ಸತ್ಯಗಳು, ಬದಲಾವಣೆಗೆ ನಿಲುಕದ ಸತ್ಯಗಳು, ತುಂಬಿಹೋಗಿಲ್ಲ. ಹೆಚ್ಚೆಂದರೆ ಆ ಗ್ರಂಥವು ನಮ್ಮ ಅಧ್ಯಯನಗಳ ಮುಂದುವರಿಕೆಗೆ ಒಂದು ವಿಪುಲವಾದ ಸೆಲೆ, ಅಷ್ಟೆ. ವೈಜ್ಞಾನಿಕ ವಿಶ್ಲೇಷಣೆಗಳು ಮತ್ತು ನಿರಂತರ ಹೋರಾಟಗಳು ನಡೆಯುತ್ತಲೇ ಇರುತ್ತವೆ; ಸತ್ಯದತ್ತ ಕ್ರಮಿಸಲು ಅವು ಅನಿವಾರ್ಯ ಸಾಧನಗಳು." ಮಾರ್ಕ್ಸ್‌ವಾದದ ಪ್ರವೃತ್ತಿ ಮತ್ತು ವಿಧಾನಗಳಿಗೆ ಇದೊಂದು ದ್ಯೋತಕ ಸೂತ್ರವೆನ್ನಬಹುದು.

ಇತಿಹಾಸದ ಕೆಲವು ಘಟನೆಗಳನ್ನು ನೆನೆಯೋಣ : ೧೭೭೬ರಲ್ಲಿ ಅಮೆರಿಕಾ ಸಂಯುಕ್ತ ಸಂಸ್ಥಾನವು ಅಸ್ತಿತ್ವಕ್ಕೆ ಬಂದಿತು. ಸ್ವಾತಂತ್ರ್ಯ ಸಂಗ್ರಾಮವು ಬ್ರಿಟನ್ನಿನ ವಸಾಹತು ನೀತಿಗೆ ಬಲವಾದ ಪೆಟ್ಟು ಕೊಟ್ಟಿತು. ಹೊಸ ದೇಶವು ತನ್ನ ಸಂವಿಧಾನವನ್ನು ಬರೆದುಕೊಂಡಿತು. ಥಾಮಸ್ ಜೆಫರ್‌ಸನ್ ಆ ಸಂವಿಧಾನದ ಕರ್ತೃ. "ಎಲ್ಲ ಮಾನವರೂ (ಮೆನ್) ಸಮಾನರಾಗಿ ಸೃಷ್ಟಿಸಲ್ಪಟ್ಟಿದ್ದಾರೆ" ಎಂದಿತು ಸಂವಿಧಾನ. ಆದರೆ ಆ 'ಮಾನವ'ರಲ್ಲಿ ಮಹಿಳೆಯರ ಸೇರ್ಪಡೆ ಆಗಿರಲಿಲ್ಲ. ಅವರ ಬಗ್ಗೆ ಜೆಫರ್‌ಸನ್ ದೊಡ್ಡ ಹಿರಿಯಣ್ಣನಂತೆ ನುಡಿದ : "ಅಮೆರಿಕಾದ ಮಹಿಳೆಯರು ತಮ್ಮ ಕೈಕೊಡವಿ ರಾಜಕೀಯದಿಂದ ದೂರ ಉಳಿದರೆ ಬುದ್ಧಿವಂತರೆನಿಸಿಕೊಳ್ಳುತ್ತಾರೆ." ಇದು ಅವನ ರಾಜಕೀಯ ನಿಲುವು. ಅವನು ಮದುವೆ ಮಾಡಿಕೊಳ್ಳಲಿಲ್ಲ, ಆದರೆ ಮನೆಗೆಲಸದ ಕರಿಯ ಮಹಿಳೆಯೊಡನೆ ಸಂಭೋಗ ನಡೆಸಿ ಅವಳಿಗೆ ಒಂದು ಮಗುವನ್ನು ಉಡುಗೊರೆಯಾಗಿ ನೀಡಿದ! ಸ್ಥಳೀಯ ಬುಡಕಟ್ಟು ಜನಾಂಗಗಳ ಲಕ್ಷಗಟ್ಟಲೆ ಜನರನ್ನು ನಿರ್ನಾಮ ಮಾಡಿದ್ದು "ಸ್ವತಂತ್ರ" ಅಮೆರಿಕಾದ ನೀಚ ಚಳುವಳಿ. ಆ ಬುಡಕಟ್ಟುಗಳಲ್ಲಿ ಮಹಿಳೆಯರಿಗೆ ಸಮಾನತೆಯು ಅನೂಚಾನವಾಗಿ ದೊರಕಿತ್ತು, ಆದರೆ ಬುಡಕಟ್ಟುಗಳನ್ನು ನಾಶ ಮಾಡಲಾಯಿತು. ಯೂರೋಪಿನಿಂದ ಬಂದಿದ್ದ ಮಹಿಳೆಯರಿಗೆ ಮೊದಲಿನಿಂದಲೂ ಅಸಮಾನತೆಯ ಪಿಡುಗಿದ್ದಿತು, ಹೊಸ ದೇಶದಲ್ಲಿ ಅದು ಮುಂದುವರಿಯಿತು. ಆ ದೇಶದಲ್ಲಿ ಈವರೆಗೆ ಒಬ್ಬ ಮಹಿಳೆ ಅಧ್ಯಕ್ಷಳಾಗಿ ಚುನಾಯಿತಳಾಗಿಲ್ಲ. ಅನೇಕ ದೊಡ್ಡ ದೊಡ್ಡ ಹುದ್ದೆಗಳಲ್ಲಿ ಮಹಿಳೆಯರು ದುಡಿಯುತ್ತಿದ್ದಾರೆ, ಆದರೆ ಅಲ್ಲಿಯ ಮಹಿಳಾ ಚಳುವಳಿಯು ಬಿರುಸಿನಿಂದ ಸಾಗುತ್ತಿದೆ; ಏಕೆಂದರೆ ಮಹಿಳೆಯರಿಗೆ ಸಮಾನತೆಯ ಸ್ಥಾನ ಇನ್ನೂ ದೊರಕಿಲ್ಲ.

೧೭೮೯ರಲ್ಲಿ ಫ್ರಾನ್ಸಿನಲ್ಲಿ ಕ್ರಾಂತಿ ಜರುಗಿತು. "ಸ್ವಾತಂತ್ರ್ಯ, ಸಮಾನತೆ, ಭ್ರಾತೃತ್ವ" ಇದು ಕ್ರಾಂತಿಯ ಘೋಷಣೆ. ಮಹಿಳೆಯರಿಗೆ ಈ ಮೂರರಲ್ಲಿ ಯಾವುದೂ ದಕ್ಕಲಿಲ್ಲ. ರೈತಾಪಿ ಜನರಿಗೆ ಮತ್ತು ಕಾರ್ಖಾನೆಗಳ ದುಡಿಮೆಗಾರರಿಗೆ ಹೊಸ ಸ್ವಾಗತಾರ್ಹ ಸವಲತ್ತುಗಳೇನೂ ಸಿಗಲಿಲ್ಲ, ಆದರೆ ಊಳಿಗಮಾನ್ಯ ಪ್ರಭುತ್ವದಿಂದ ಹೊರಬಂದು ಬಂಡವಾಳಶಾಹಿ ಪ್ರಭುತ್ವದಡಿ

ಬಾಳುವೆ ನಡೆಸುವ ಪರ್ಯಾಯ ಅವರ ಪಾಲಿಗೆ ಬಂತು. ಸಾಮಾನ್ಯ ಕೂಲಿಗಳಾಗಿದ್ದ ರೈತರು, ಕಾರ್ಮಿಕರು ಮತ್ತು ಮಹಿಳೆಯರು "ವ್ಯವಸ್ಥಿತ" ಕೂಲಿಗಳಾಗಿ ಬದಲಾದರು, ಅಷ್ಟೆ.

೧೮೪೦ರ ದಶಕದಲ್ಲಿ ಉಗ್ರ ಜನತಾ ಚಳುವಳಿಯೊಂದು ಬ್ರಿಟನ್ನಿನಲ್ಲಿ ವ್ಯಾಪಕವಾಗಿ ಹಬ್ಬಿತ್ತು. ಅದನ್ನು "ಚಾರ್ಟಿಸ್ಟ್ ಚಳುವಳಿ" ಎಂದು ಕರೆದಿದ್ದರು. ಅದೊಂದು ಸಾಮುದಾಯಿಕ ಚಳುವಳಿಯಾಗಿತ್ತು ಮತ್ತು ಅದು ಸಾಕಷ್ಟು ವ್ಯಾಪಕವಾಗಿತ್ತು. ಯಾವ ಪರಿಣಾಮಕಾರಿ ಬದಲಾವಣೆಯನ್ನೂ ಉಂಟುಮಾಡದೆ ಅದು ಮುದುಡಿಹೋಯಿತು. ಸಂಘಟನೆ ಸಹ ಬಹುಬೇಗ ಇಲ್ಲದಾಯಿತು. ಮಹಿಳೆಯರಿಗೆ ಯಾವ ಹೊಸ ಸೌಲಭ್ಯವೂ ಸುತರಾಂ ಸಿಗಲಿಲ್ಲ. ಇಂತಹ ಹುಸಿ ಬದಲಾವಣೆಗಳನ್ನು ಅಮೇರಿಕಾದ ಇತಿಹಾಸಕಾರ ಹವರ್ಡ್ ಜ಼ಿನ್ ತನ್ನ "ಅಮೇರಿಕಾದ ಜನತಾ ಇತಿಹಾಸ" ಎಂಬ ಗ್ರಂಥದಲ್ಲಿ (ಅಧ್ಯಾಯ ೯) "ಶರಣಾಗದೆಯೂ ದಾಸ್ಯ, ಸ್ವಾತಂತ್ರ್ಯವಿಲ್ಲದೆ ವಿಮುಕ್ತಿ" ಎಂದು ಹೆಸರಿಸಿದ್ದಾನೆ. ನಮ್ಮ ದೇಶದ ಚರಿತ್ರೆಯಲ್ಲಿ ಮಹಿಳೆಯರು ಶತಮಾನಗಳ ಕಾಲ ಅನುಭವಿಸುತ್ತಾ ಬಂದಿರುವುದು ಅದನ್ನೇ. ಅವಳಿಗೆ ದೇವಿ, ಮಾತೆ, ಕ್ಷಮಾಶೀಲೆ, ಮುಂತಾದ ನಾಮಧೇಯಗಳನ್ನು ಕರುಣಿಸಲಾಯಿತೇ ವಿನಾ ಸ್ವಂತದ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಲು ಅವಕಾಶ ನೀಡಲಾಗಲಿಲ್ಲ. ಅದಕ್ಕೆ ಅತ್ಯಗತ್ಯವಾಗಿ ಬೇಕಾದ ಪರಿಸರವಂತೂ ಇಂದಿಗೂ ರಚನೆಗೊಂಡಿಲ್ಲ. ನಮ್ಮ ಪ್ರಾಚೀನ ಸಂಸ್ಕೃತ ನಾಟಕಗಳಲ್ಲಿ ಮಹಿಳೆಯರು ಸಂಸ್ಕೃತದಲ್ಲಿ ಮಾತನಾಡುವುದಿಲ್ಲ; ಏಕೆಂದರೆ ಸಮಾಜದಲ್ಲಿ ಅವರು ಎರಡನೆಯ ದರ್ಜೆಯವರು. ಶಿಷ್ಟರು ಮಾತ್ರವೇ ಸಂಸ್ಕೃತದಲ್ಲಿ ಮಾತನಾಡಲು ಅರ್ಹರು. ಮಹಿಳೆಯರು ಆ ವರ್ಗಕ್ಕೆ ಸೇರುವುದಿಲ್ಲ. ಆದ್ದರಿಂದ ದುಷ್ಯಂತನು ಸಂಸ್ಕೃತದಲ್ಲಿ ಏನೋ ಹೇಳಿದರೆ ಅದಕ್ಕೆ ಶಕುಂತಲೆ ಪ್ರಾಕೃತದಲ್ಲಿ ಪ್ರತಿಕ್ರಿಯಿಸುತ್ತಾಳೆ. ಅಂದರೆ, ೧೮೩೦ರ ಸುಮಾರಿನಲ್ಲಿ ಅಮೇರಿಕಾದ ಕರಿಯ ಮಹಿಳೆಯರು ಯಾವ ಮುಗ್ಗಟ್ಟುಗಳನ್ನು ಎದುರಿಸುತ್ತಿದ್ದರೋ ಅವನ್ನು ನಮ್ಮ ದೇಶದ ಕೆಳವರ್ಗದ ಮಹಿಳೆಯರು ಹಲವು ಶತಮಾನಗಳಿಂದ ಅನುಭವಿಸುತ್ತಾ ಬಂದಿದ್ದಾರೆ. ಗುಲಾಮಿ ವ್ಯವಸ್ಥೆಯು ಔಪಚಾರಿಕವಾಗಿ ಇಲ್ಲದೆಯೂ ಅಂತಹ ವ್ಯವಸ್ಥೆಯಡಿ ಇರಬಹುದಾಗಿದ್ದ ಕಾರ್ಪಣ್ಯಗಳು ನಮ್ಮ ದೇಶದ ಕೆಳವರ್ಗದ ಮಹಿಳೆಯರನ್ನು ಕಾಡಿವೆ. ಜೈವಿಕ ಭಿನ್ನತೆಯಿಂದಾಗಿ ಒಂದು ರೀತಿಯ ಹೊರೆ, ಪುರುಷ ಪ್ರಾಧಾನ್ಯವೆಂಬ ಕಟುಕ ವ್ಯವಸ್ಥೆಯಿಂದಾಗಿ ಇನ್ನೊಂದು ರೀತಿಯ ಹೊರೆ. ಇದು ನಮ್ಮ ದೇಶದ ಮಹಿಳೆಯರ ಇತಿಹಾಸದ ಸಾರಾಂಶವೆಂದರೆ ತಪ್ಪಾಗಲಾರದು. ೧೮೮೦ರ ದಶಕದಲ್ಲಾಗಲೆ ಸಾವಿತ್ರಿಬಾಯಿ ಫುಲೆ ನಮ್ಮ ದೇಶದಲ್ಲಿ ಜಾಗೃತಿ ಮೂಡಿಸುವ ಮಹಾನ್ ಕ್ರಿಯಾಶೀಲೆಯಾಗಿದ್ದರು; ಆಗ್ಗೆ ಬ್ರಿಟನ್ನಿನಲ್ಲಿ ಮಹಿಳೆಯರಿನ್ನೂ ಮತದಾನದ ಹಕ್ಕಿಗಾಗಿ ಚಳುವಳಿ ನಡೆಸುತ್ತಿದ್ದರು. ಅದೇನೂ ಅದ್ಭುತವಾದ ವರ್ಗ ಹೋರಾಟವಲ್ಲ, ಮಹಿಳೆಯರು ಆಗ್ರಹಿಸಿದ್ದು ಕೆಲವು ಸಮಾನತೆಯ ಸೂತ್ರಗಳಿಗಾಗಿ, ಅಷ್ಟೆ. ವಸಾಹತುಶಾಹಿಯಿಂದ ಸಹ ಬ್ರಿಟನ್ನಿನ ಮಹಿಳೆಯರಿಗೆ ಗಣನೀಯ ಲಾಭ ದೊರೆಯಲಿಲ್ಲ, ಆ ದೇಶದಲ್ಲಿ ಬಂಡವಾಳಶಾಹಿ ವ್ಯವಸ್ಥೆ ವಿಕಸಿಸಲಷ್ಟೇ ವಸಾಹತುಶಾಹಿಯು ಸಹಾಯ ಮಾಡಿದ್ದು. ಬ್ರಿಟನ್ನಿನ ಮಹಿಳೆಯರಿಗೆ ಮತದಾನದ ಹಕ್ಕು ಮೊದಲ ಮಹಾಯುದ್ಧ ಮುಗಿದ ೧೯೧೮ರ ನಂತರ ದೊರೆಯಿತು. ಈ ಒಂದು ಹಕ್ಕು ಮಾತ್ರ ಯಾವ ತಕರಾರೂ ಇಲ್ಲದೆ ಪುರುಷರಿಗೆ ಲಭ್ಯವಾದಾಗಲೇ ನಮ್ಮ ದೇಶದಲ್ಲಿ ಮಹಿಳೆಯರಿಗೂ ದೊರೆಯಿತು. ನಮ್ಮ ದೇಶದ ಮಹಿಳೆಯರು ಸ್ವಾತಂತ್ರ್ಯ ಹೋರಾಟದಲ್ಲಿ ಅಗಾಧ ಸಂಖ್ಯೆಯಲ್ಲಿ ಪಾಲ್ಗೊಂಡರಾದರೂ ಅವರ ಸಾಮಾಜಿಕ ಮತ್ತು ರಾಜಕೀಯ ಸ್ಥಾನಮಾನವು ಅಷ್ಟಾಗಿ ಉತ್ತಮಗೊಳ್ಳಲಿಲ್ಲ. ಲೋಕಸಭೆಯಲ್ಲಿ ಗೀತಾ ಮುಖರ್ಜಿ ಮಂಡಿಸಿದ್ದ ಕರಡು ನಿರ್ಣಯವನ್ನು ಶಾಸನವಾಗಿ ಪರಿವರ್ತಿಸಲು ನಮ್ಮ ಸಂಸತ್ತು ಇನ್ನೂ ಮನಸ್ಸು ಮಾಡಿಲ್ಲ. ಆ ನಿರ್ಣಯವು ವ್ಯವಸ್ಥೆಯನ್ನು ಆಮೂಲಾಗ್ರವಾಗಿ



ಬದಲಾಯಿಸಬೇಕೆಂಬ ಉದ್ದೇಶ ಹೊಂದಿಲ್ಲ, ಆದರೂ ಅದು ಅಂಗೀಕಾರವಾಗಿಲ್ಲ. ಅದಕ್ಕೆ ಬೇರೊಂದು ಯುದ್ಧವೇ ಆಗಬೇಕೇನೋ!

ಮಾರ್ಕ್ಸ್‌ವಾದವು ಮಹಿಳಾ ಪ್ರಶ್ನೆಯನ್ನು ನೋಡುವ ಪರಿಯನ್ನು ಪರಿಚಯಿಸಿಕೊಳ್ಳಲು ರೋಸಾ ಲುಕ್ಸೆಂಬುರ್ಗ್ ಮಾರ್ಕ್ಸ್‌ನ ಚಿಂತನೆಯ ಬಗ್ಗೆ ಬರೆದಿದ್ದ ಒಂದು ಟಿಪ್ಪಣಿಯನ್ನು ಗಮನಿಸಬೇಕು. ಅದು ಮೇರಿಂಗ್‌ಗೆ ಬರೆದಿದ್ದ ಒಂದು ಪತ್ರದ ಭಾಗ : "ನಿನ್ನ ಬರವಣಿಗೆಯು ದುಡಿಯುವ ಜನಕ್ಕೆ ವಿಶಿಷ್ಟವಾಗಿ ಮನದಟ್ಟು ಮಾಡಿಕೊಡುವುದೇನೆಂದರೆ ಸಮಾಜವಾದವು ಕೇವಲ ಅನ್ನ-ಬಟ್ಟೆಯ ಸಮಸ್ಯೆಯಲ್ಲ, ಅದೊಂದು ಸಾಂಸ್ಕೃತಿಕ ಚಳುವಳಿ ಮತ್ತು ಮಹತ್ವದ ವಿಶ್ವ ಸಿದ್ಧಾಂತ ಎಂದು." ಅಂದರೆ, ಕೆಲವೊಂದು ಆರ್ಥಿಕ ಸಂಬಂಧಗಳು ಬದಲಾಗಿಬಿಟ್ಟರೆ ಜನತೆಯ ಜಡ್ಡುಕಟ್ಟಿದ ಭಾವನೆಗಳೆಲ್ಲಾ ಥಟಕ್ಕನೆ ಬದಲಾಗಿಬಿಡುವುದಿಲ್ಲ ಎಂದರ್ಥ. ಪುರುಷ ಪ್ರಾಧಾನ್ಯವು ಬಡಪೆಟ್ಟಿಗೆ ಬಗ್ಗುವ ಅಮೂರ್ತ ಕಲ್ಪನೆಯಲ್ಲ. ಶತಮಾನಗಳ ಕಾಲ ಅದು ಸಮಾಜದ ಅಂತಸ್ಸಂಬಂಧಗಳನ್ನು ಆಳುತ್ತಾ ಬಂದಿದೆ. ಪುರುಷ ಪ್ರಾಧಾನ್ಯವು ಸಮಾಜದ ಸಂಸ್ಕೃತಿಯ ಚಹರೆಯಾಗಿರುವಾಗ ಅದನ್ನು ಗುಣಾತ್ಮಕವಾಗಿ ಬದಲಿಸುವುದು ಚಿಟಿಕೆ ಹೊಡೆಯುವಷ್ಟು ಸರಳವಲ್ಲ. ಔಪಚಾರಿಕವಾದ ಪರ್ಯಾಯ ಸಾಂಸ್ಕೃತಿಕ ಭಾವನೆಗಳನ್ನು ಬಿತ್ತುವುದರಿಂದ ಅಥವಾ ಜನರ ತಥಾಕಥಿತ ಮನಃಪರಿವರ್ತನೆಯಿಂದ ಈ ಸಮಸ್ಯೆಯು ಬಗೆಹರಿಯುವುದಿಲ್ಲ. ವ್ಯವಸ್ಥೆಯ ಮೂಲಭೂತ ಆಧಾರ ಅಥವಾ ಅಡಿಪಾಯದ ಬದಲಾವಣೆಯ ಪ್ರಶ್ನೆ ಇದು. ನೂತನ ಸಾಂಸ್ಕೃತಿಕ ವ್ಯಕ್ತಿತ್ವವನ್ನು ಕೇವಲ ಒಂದು ಕಸಿಮಾಡುವ ತಂತ್ರದ ಮೂಲಕ ಪಡೆಯಬಹುದಾಗಿದ್ದರೆ ಸಮಸ್ಯೆಯು ಇಷ್ಟು ಜಟಿಲವಾಗಿರುತ್ತಿರಲಿಲ್ಲ. ಇದನ್ನು ತಿಳಿಯಲು ಇನ್ನೊಂದು ಗಂಭೀರವಾದ ಸಮಸ್ಯೆಯ ಜೊತೆ ಇದನ್ನು ತುಲನೆ ಮಾಡಿ ಅರ್ಥೈಸಿಕೊಳ್ಳಬಹುದು. ಅದು ಶತಮಾನಗಳಿಂದ ನಮ್ಮ ದೇಶದ ಸಮಾಜವನ್ನು ಕೊಳಕು ಮಾಡಿರುವಂತಹ ವಿದ್ಯಮಾನಕ್ಕೆ ಸಂಬಂಧಿಸಿದೆ. ಅದು ದಲಿತರ ವಿಮೋಚನೆಯ ಪ್ರಶ್ನೆ. ಬಡತನವಂತೂ ಪ್ರಾಥಮಿಕ ಪ್ರಶ್ನೆ; ಸಾಂಸ್ಥಿಕ ಬದಲಾವಣೆಗಳಿಲ್ಲದೆ ಅದಕ್ಕೆ ಪರಿಹಾರವಿಲ್ಲ. ಇನ್ನು ಜಾತಿಯ ಕಪಿಮುಷ್ಟಿ, ಮುಂತಾದ ಜನರ ಆಂತರಿಕ ಭಾವನೆಗಳನ್ನು ಹಸನು ಮಾಡುವ ಮೂಲಕವಷ್ಟೇ ಕಳಚಿಹಾಕುತ್ತೇವೆಂದು ಹೊರಟರೆ ಇನ್ನೂ ಐನೂರು ವರ್ಷ ಸವೆಸಿದರೂ ಸಮಸ್ಯೆಗಳು ಈಗಿರುವಂತೆಯೇ ಉಳಿಯುವ ಸಾಧ್ಯತೆಯೇ ಹೆಚ್ಚು. ಭೂಮಿಯ ಒಡೆತನವನ್ನು ಮೂಲಭೂತವಾಗಿ ಪರಿವರ್ತಿಸಬೇಕೆಂಬ ಮಹದಾಶಯವನ್ನು ಡಾ॥ ಅಂಬೇಡ್ಕರರು ಹೊಂದಿದ್ದುದು ಇದೇ ಕಾರಣದಿಂದ. ೧೯೪೭ರಲ್ಲಿ ನಮ್ಮ ದೇಶವು ರಾಜಕೀಯ ಸ್ವಾತಂತ್ರ್ಯ ಪಡೆಯುವುದಕ್ಕೂ ಮುಂಚೆ ನಮ್ಮ ಸಂವಿಧಾನದಲ್ಲಿ ಅತ್ಯಗತ್ಯವಾಗಿ ಅಳವಡಿಸಲೇಬೇಕೆಂದು ಅವರು ಆಗ್ರಹಿಸಿದ್ದ ಅಂಶಗಳಲ್ಲಿ ಭೂಮಿಯ ಒಡೆತನದ ಪ್ರಶ್ನೆಯು ಸೇರಿದೆ. ಸೋದರಿ ಮಾಯಾವತಿಯವರು ಉತ್ತರ ಪ್ರದೇಶದ ಮುಖ್ಯಮಂತ್ರಿಯಾಗಿದ್ದಾಗ ನಾವು ಹೇಳುತ್ತಿದ್ದುದುಂಟು : "ರಾಜನಾಥಸಿಂಗ್ ಹೆಗಲ ಮೇಲೆ ಕೂತು ದಲಿತರ ಸಮಸ್ಯೆಯನ್ನು ಬಗೆಹರಿಸಲಾಗುವುದಿಲ್ಲ ಮತ್ತು ಲಕ್ನೋದಲ್ಲಿ ಡಾ॥ ಅಂಬೇಡ್ಕರ್ ಉದ್ಯಾನವನವು ಎಷ್ಟು ಎಕರೆಗಳ ವಿಸ್ತೀರ್ಣ ಉಳ್ಳದ್ದಾಗಿರಬೇಕು ಎಂಬುದಕ್ಕಿಂತ ಲಕ್ನೋದಿಂದ ಅರವತ್ತು ಕಿಲೋಮೀಟರ್ ದೂರದ ಚಿಕ್ಕಹಳ್ಳಿಯಲ್ಲಿ ಪ್ರತಿಯೊಂದು ದಲಿತ ಕುಟುಂಬಕ್ಕೂ ಎಷ್ಟು ಎಕರೆ ಭೂಮಿಯನ್ನು ನೀಡಲಾಗಿದೆ ಎಂಬುದು ಹೆಚ್ಚು ಮುಖ್ಯ" ಎಂದು. ಡಾ॥ ಅಂಬೇಡ್ಕರರ ದೂರದೃಷ್ಟಿಯ ಯೋಜನೆಯು ಇದಕ್ಕಿಂತಲೂ ಹೆಚ್ಚು ಪುರೋಗಾಮಿಯಾಗಿತ್ತು, ಹೆಚ್ಚು ಮೌಲಿಕವಾಗಿತ್ತು. ಸಮಾನತೆಯು ಆಕಾಶದಿಂದಲೋ, ಶ್ರೀರಾಮಚಂದ್ರನ ಕರುಣೆಯಿಂದಲೋ ದೊರೆಯುವುದಿಲ್ಲ. ಎಲ್ಲರೂ ಸಮಾನತೆಯ ಮೌಲ್ಯವನ್ನು ಒಪ್ಪಿ ಅನುಸರಿಸಿದರೆ ಆಯಿತೆಂದು ಕಾಯುತ್ತಿದ್ದರೆ "ಬದುಕು ಜಟಕಾ ಬಂಡಿ" ಎಂದು ಗಾಡಿ ಹೊಡೆಯುತ್ತಿರಬೇಕು, ಅಷ್ಟೆ. ಸಮಾನತೆಯನ್ನು ಒಂದು

ನಿರ್ದಿಷ್ಟ ಆರ್ಥಿಕ ಹಿನ್ನೆಲೆಯಲ್ಲಿ ಮಾತ್ರವೇ ಪಡೆದುಕೊಳ್ಳಲು ಸಾಧ್ಯ ಮತ್ತು ಅದಕ್ಕಾಗಿ ಚರಿತ್ರೆಯಲ್ಲಿ ವಿವಿಧ ಮಾದರಿಗಳ ಹೋರಾಟಗಳು ಎಲ್ಲ ದೇಶಗಳಲ್ಲೂ ನಡೆಯುತ್ತಾ ಬಂದಿವೆ.

ಡಾ॥ ಅಂಬೇಡ್ಕರರು ಸ್ಥಾಪಿಸಿದ್ದ "ಶೆಡ್ಯೂಲ್ಡ್ ಕ್ಯಾಸ್ಟ್ ಫೆಡರೇಶನ್ ಪಾರ್ಟಿ"ಯ ವತಿಯಿಂದ ಸರ್ಕಾರಕ್ಕೆ ೧೫.೦೩.೧೯೪೭ರಂದು ಸಲ್ಲಿಸಲಾದ ಜ್ಞಾಪನಾಪತ್ರದಲ್ಲಿ ಡಾ॥ ಅಂಬೇಡ್ಕರ್ ಅವರು ಭೂಮಿಯ ಒಡೆತನದ ಬಗ್ಗೆ ಅತ್ಯಂತ ತೀವ್ರಗಾಮಿ ಸೂಚನೆಗಳನ್ನು ನೀಡಿದ್ದರು. ಆ ಜ್ಞಾಪನಾಪತ್ರವು ನಿಜವಾಗಿಯೂ ಡಾ॥ ಅಂಬೇಡ್ಕರರು ಆಶಿಸಿದ್ದ ಸಂವಿಧಾನದ ಸ್ವರೂಪವನ್ನು ನಮಗೆ ತಿಳಿಸಿಕೊಡುತ್ತದೆ. ಸ್ವಾತಂತ್ರ್ಯಾನಂತರ ಸಂವಿಧಾನ ರಚನಾ ಮಂಡಲಿಯ ಪರವಾಗಿ ಅವರ ನೇತೃತ್ವದಲ್ಲಿ ಮಂಡಿಸಲಾಗಿದ್ದ ಸಂವಿಧಾನದ ಪಠ್ಯಕ್ಕೆ ಕೆ. ಎಂ. ಮುನ್ಷಿ, ಪುರುಷೋತ್ತಮದಾಸ ಟಂಡನ್, ಮುಂತಾದವರು ಸಂವಿಧಾನ ರಚನಾ ಮಂಡಲಿಯ ಸಭೆಗಳಲ್ಲಿ ಹಲವು ಆಕ್ಷೇಪಗಳನ್ನೆತ್ತಿ ಎಷ್ಟೋ ಕಲಮುಗಳನ್ನು ಸಭೆಯು ತಿರಸ್ಕರಿಸುವಂತೆ ಮಾಡಿದ್ದರು. ಎಷ್ಟೋ ಸೂತ್ರಗಳಿಗೆ ಡಾ॥ ರಾಜೇಂದ್ರ ಪ್ರಸಾದ್ ಸಭಾಧ್ಯಕ್ಷರಾಗಿ ಮುನ್ಷಿ-ಟಂಡನ್ ಪರ ವಕಾಲತ್ತು ವಹಿಸಿಬಿಡುತ್ತಿದ್ದರು. ೧೯೪೭ರ ಡಾ॥ ಅಂಬೇಡ್ಕರ್ ಅವರ ಜ್ಞಾಪನಾಪತ್ರದ ಸೂಚನೆಗಳನ್ನು ೧೯೫೦ರ ಸಂವಿಧಾನದ ಸೂಚನೆಗಳ ಜೊತೆ ತುಲನೆ ಮಾಡಿ ನೋಡುವುದು ಆರೋಗ್ಯಕರ. ೧೯೪೭ರ ಜ್ಞಾಪನಾಪತ್ರದ ಕೆಲವು ಭಾಗಗಳು ಹೀಗಿವೆ :

೨.೧.೯ : ಕೂಲಿ ಕೊಡದೆ ದುಡಿಮೆ ಮಾಡಿಸಿಕೊಳ್ಳುವುದು, ಬಿಟ್ಟಿ ಕೆಲಸ ಮಾಡಿಸಿಕೊಳ್ಳುವುದು ಶಿಕ್ಷಾರ್ಹ ಅಪರಾಧ.

೨.೨.೪ : (ಆರ್ಥಿಕ ಶೋಷಣೆಯನ್ನು ತಡೆಗಟ್ಟಲು ಕ್ರಮಗಳು)

ಅ. ಪ್ರಮುಖ ಉದ್ದಿಮೆಗಳು ಸರ್ಕಾರದ ವಶದಲ್ಲಿರಬೇಕು.

ಆ. ವಿಮಾ ವ್ಯವಹಾರಗಳು ಪೂರ್ತಿ ಸರ್ಕಾರದ್ದೇ ಆಗಿರಬೇಕು, ಪ್ರತಿಯೊಬ್ಬರಿಗೂ ವಿಮೆಯ ಸೌಲಭ್ಯ ಇರಬೇಕು.

ಇ. ಕೃಷಿಯನ್ನು ಒಂದು ಉದ್ದಿಮೆಯಂತೆ ಸಂಘಟಿಸಬೇಕು ಮತ್ತು ಅದು ಇಡಿಯಾಗಿ ಸರ್ಕಾರದ ಅಧೀನದಲ್ಲಿರಬೇಕು.

ಈ. ಖಾಸಗಿ ಒಡೆತನದಲ್ಲಿರುವ ಉದ್ದಿಮೆ, ವಿಮೆ ಮತ್ತು ಕೃಷಿ ಭೂಮಿಯನ್ನು ಅವಕ್ಕೆ ಸೂಕ್ತ ಪರಿಹಾರ ನೀಡಿ ಸರ್ಕಾರದ ಅಧೀನದಲ್ಲಿರಿಸಿಕೊಳ್ಳಬೇಕು.

೨.೨.೫ :

ಅ. ಸರ್ಕಾರವು ವಶಕ್ಕೆ ತೆಗೆದುಕೊಂಡ ಭೂಮಿಯನ್ನು ಬೇಸಾಯಕ್ಕಾಗಿ ಆಯಾ ಹಳ್ಳಿಗಳ ಜನಕ್ಕೆ ಹಂಚಿಕೆ ಮಾಡಬೇಕು. ಹೀಗೆ ಬೇಸಾಯ ಮಾಡುವವರನ್ನು ಸರ್ಕಾರದ ಗುತ್ತಿಗೆದಾರರೆಂದು ಪರಿಗಣಿಸಬೇಕು.

ಆ. ಕೃಷಿಯನ್ನು ಸಹಕಾರಿ ತತ್ವದಡಿ ಸಂಘಟಿಸಬೇಕು.

ಇ. ಅದಕ್ಕಾಗಿ ಸೂಕ್ತವಾಗಿ ಸಮಗ್ರ ನಿಯಮಗಳನ್ನು ರೂಪಿಸಬೇಕು.

ಈ. ಸಹಕಾರಿ ಕೃಷಿಯಡಿ ಬಂದ ಉತ್ಪನ್ನವನ್ನು ಬೇಸಾಯಗಾರರಿಗೆ ಹಂಚಬೇಕು; ಉತ್ಪಾದನೆಗೆ ತಗಲುವ ಖರ್ಚನ್ನು ಬೇಸಾಯಗಾರರಿಂದ ಪಡೆಯಬೇಕು.

ಉ. ಹೀಗೆ ಬೇಸಾಯಗಾರರಿಗೆ ಸಹಕಾರಿ ತತ್ವದಡಿ ಭೂಮಿ ಹಂಚುವಾಗ ಅವರ ಜಾತಿ, ಧರ್ಮ, ಇತ್ಯಾದಿಗಳು ಗಣನೆಗೆ ಬರಕೂಡದು.

ಋ. ಸರ್ಕಾರವು ಬೇಸಾಯಗಾರರಿಗೆ ನೀರು, ದನ, ಕೃಷಿ ಸಲಕರಣೆಗಳು, ಬೀಜ, ಗೊಬ್ಬರ, ಇತ್ಯಾದಿಗಳನ್ನು ಸರಬರಾಜು ಮಾಡಬೇಕು.

ಎ. ಇಂತಹ ಸರಬರಾಜಿಗೆ ತಗಲುವ ಖರ್ಚನ್ನು ಬೇಸಾಯಗಾರರಿಂದ ಪಡೆಯಬೇಕು.

ಏ. ಈ ಯೋಜನೆಯನ್ನು ಸಂವಿಧಾನವು ಜಾರಿಯಾದ ಹತ್ತು ವರ್ಷಗಳೊಳಗಾಗಿ ಪೂರ್ಣ ಅನುಷ್ಠಾನಕ್ಕೆ ತರಬೇಕು.

ಅಂಬೇಡ್ಕರರ ಈ ಯಾವ ಸೂಚನೆಗಳೂ ನಮ್ಮ ಇಂದಿನ ಸಂವಿಧಾನದಲ್ಲಿ ಪ್ರತಿಫಲಿತವಾಗಿಲ್ಲ. ಬದಲಾಗಿ ಆಸ್ತಿಯ ಹಕ್ಕನ್ನು ಮೂಲಭೂತ ಹಕ್ಕು ಎಂದು ನಮೂದಿಸಲಾಗಿದೆ. ಅದನ್ನು ಡಾ॥ ಅಂಬೇಡ್ಕರ್ ಅವರು ಸಂವಿಧಾನ ರಚನಾ ಸಭೆಗಳಲ್ಲಿ ವಿರೋಧಿಸಿದ್ದರು, ಆದರೆ ಬಹುಮತದಿಂದಾಗಿ ಅದು ಸಂವಿಧಾನದಲ್ಲಿ ಸೇರಿಕೊಂಡುಬಿಟ್ಟಿತು. ಆಸ್ತಿಯೇ ಇಲ್ಲದ ಜನಕ್ಕೆ ಇಂತಹ ಮೂಲಭೂತ ಹಕ್ಕಿನಿಂದ ಎಂತಹ ಪ್ರಯೋಜನವಾದೀತು ಎಂಬುದು ಡಾ॥ ಅಂಬೇಡ್ಕರರ ವಾದವಾಗಿತ್ತು. ಅವರು ಮಂಡಿಸಿದ್ದ ಇಂತಹ ಬೇರೆ ಸೂಚನೆಗಳನ್ನು ಸಹ ನಾವು ಗಮನಿಸಬೇಕು. ಅವು ಕಮ್ಯುನಿಸ್ಟರ ಸೂಚನೆಗಳಲ್ಲ, ಅವು ಡಾ॥ ಬಾಬಾಸಾಹೇಬ ಅಂಬೇಡ್ಕರ್ ಅವರು ತಮ್ಮ ಪಕ್ಷದ ವತಿಯಿಂದ ನೀಡಿದ್ದ ಸಲಹೆಗಳೆಂಬುದನ್ನು ನೆನಪಿನಲ್ಲಿಡಬೇಕು. ಇದೆಲ್ಲದರ ಸಾರಾಂಶ ವೇನೆಂದರೆ ದಲಿತರ ಸಮಸ್ಯೆಗಳ ಪರಿಹಾರಕ್ಕೆ ಸಾಂಸ್ಥಿಕ ಮೂಲಭೂತ ಬದಲಾವಣೆಗಳು ಅನಿವಾರ್ಯ, ಎಂದು. ಮಹಿಳಾ ಸಮಸ್ಯೆಗೆ ಸಹ ಯಾವ ಅನುಮಾನವೂ ಇಲ್ಲದೆ ಸಾಂಸ್ಥಿಕ ಬದಲಾವಣೆಗಳನ್ನು ಕೈಗೊಳ್ಳಬೇಕಾದ್ದು ಅನಿವಾರ್ಯ. ಸಾಮಾನ್ಯವಾಗಿ ಅರ್ಥೈಸುವಂತೆ, ಸ್ತ್ರೀವಾದವು ಪ್ರಕೃತದ ಸನ್ನಿವೇಶದಲ್ಲೇ, ಅಂದರೆ ಬಂಡವಾಳಶಾಹಿ – ಅರೆಊಳಿಗಮಾನ್ಯ ವ್ಯವಸ್ಥೆಯಲ್ಲೇ, ಸಮಾನ ಹಕ್ಕುಗಳನ್ನು ಪಡೆಯಬಯಸುತ್ತದೆ, ಅದಕ್ಕಾಗಿ ಹೋರಾಡುತ್ತದೆ. ವ್ಯವಸ್ಥೆಯಲ್ಲಿ ಸಾಂಸ್ಥಿಕ ಬದಲಾವಣೆ ಇಲ್ಲದೆ ದಲಿತರ ಸಮಸ್ಯೆಗಳಿಗಾಗಲಿ, ಮಹಿಳೆಯರ ಸಮಸ್ಯೆಗಳಿಗಾಗಲಿ ಪೂರ್ಣ ಪ್ರಮಾಣದ ಪರಿಹಾರವನ್ನು ಪಡೆಯಬಯಸುವುದು ಮರೀಚಿಕೆಯಲ್ಲಿ ನೀರು ಪಡೆದು ಬಾಯಾರಿಕೆ ಹಿಂಗಿಸಿಕೊಳ್ಳುವ ಆಸೆಗೆ ಸಮಾನವಾದ್ದು. ಬಂಡವಾಳಶಾಹಿಯಡಿ ಏನಾದರೂ ಎಲ್ಲ ದುಡಿಮೆಗಾರರಿಗೂ "ಸಮಾನತೆ" ಲಭಿಸುವಂತಾದರೆ ಮಹಿಳೆಯರಿಗೂ ಸಮಾನತೆ ದೊರೆತೀತು ಎಂದು ಹೇಳಿದರೆ ಅದು ಸಿನಿಕತನವಾಗುವುದಿಲ್ಲ. ಅದು ವಾಸ್ತವ, ಏಕೆಂದರೆ ಬಂಡವಾಳಶಾಹಿಯು ಒಂದು ವರ್ಗದ ಹಿತವನ್ನು ರಕ್ಷಿಸುತ್ತದೆಯೇ ವಿನಾ ಇಡೀ ಸಮಾಜದ ಸಮಾನ ಬೆಳವಣಿಗೆಗೆ ಬದ್ಧವಾಗಿರುವುದಿಲ್ಲ.

ಪಿತ್ರಾರ್ಜಿತ ಆಸ್ತಿಯಲ್ಲಿ ಹೆಣ್ಣುಮಕ್ಕಳಿಗೆ ಸಮಪಾಲು ದೊರೆಯುವಂತಾದರೆ ಸಾಮಾಜಿಕ ಸಮಾನತೆಯತ್ತ ಕ್ರಮಿಸಲು ಸಾಧ್ಯವೆಂಬ ವಾದವು ಬಹುಕಾಲದಿಂದ ಪ್ರಚಲಿತವಾಗಿದೆ. ಆಸ್ತಿಯೇ ಇಲ್ಲದ ಕುಟುಂಬಗಳ ಹೆಣ್ಣುಮಕ್ಕಳ ಪ್ರಮಾಣ ಎಷ್ಟಿದೆಯೆಂಬುದರ ಮಾಹಿತಿಯ ಅಭಾವದಲ್ಲಿ ಇಂತಹ ವಾದದ ಉಪಯುಕ್ತತೆಯ ಬಗ್ಗೆ ನಿಶ್ಚಿತವಾಗಿ ಏನನ್ನೂ ಹೇಳಲಾಗದು. ಆಸ್ತಿಯುಳ್ಳ ಕುಟುಂಬಗಳ ಮಹಿಳೆಯರಿಗೆ ಪಿತ್ರಾರ್ಜಿತ ಆಸ್ತಿಯಲ್ಲಿ ಸಮಪಾಲು ಲಭಿಸಿದರೆ ಅವರಿಗಾದರೂ ಸಮಾನತೆ ಕಟ್ಟಿಟ್ಟ ಬುತ್ತಿ ಎನ್ನಲಾಗುವುದಿಲ್ಲ, ಏಕೆಂದರೆ ಪುರುಷ ಪ್ರಾಧಾನ್ಯದ ಪ್ರಭಾವವು ಅದರಿಂದ ಕೂಡಲೆ ಇಲ್ಲವಾಗುವುದಿಲ್ಲ. ನಮ್ಮ ರಾಜ್ಯದಲ್ಲಿ ಪಿತ್ರಾರ್ಜಿತ ಆಸ್ತಿಯ ಪಾಲಿನ ಹಕ್ಕನ್ನು ಕಾನೂನಿನನ್ವಯ ಮಹಿಳೆಯರಿಗೆ ಮಾನ್ಯ ಮಾಡಲಾಗಿದೆ; ಅದರ ಪರಿಣಾಮಗಳ ಬಗ್ಗೆ ಏನು ಅಧ್ಯಯನಗಳು ನಡೆದಿವೆಯೆಂಬುದನ್ನು ಪರಾಮರ್ಶೆ ಮಾಡಬೇಕು. ಮೂಲತಃ ಆ ಹಕ್ಕಿನ ಅಭಾವದಿಂದಾಗಿಯೇ ಮಹಿಳಾ ಅಸಮಾನತೆ ಇದೆಯೇ ಎಂಬುದನ್ನು ತಿಳಿಯ ಬೇಕಾಗಿದೆ. ಯಾವ ಅನುಮಾನವೂ ಇಲ್ಲದೆ ಒಪ್ಪಬಹುದಾದ ಪ್ರಮೇಯವೆಂದರೆ ನಮ್ಮ ಆರ್ಥಿಕ ವ್ಯವಸ್ಥೆಯ ಒಂದು ಪರಿಣಾಮ ಮಹಿಳಾ ಅಸಮಾನತೆ ಎಂಬುದು. ಗುಲಾಮರನ್ನು ಅಥವಾ ಜೀತದಾಳುಗಳನ್ನು ಹಿಂದೆ ಪೀಳಿಗೆಯಿಂದ ಪೀಳಿಗೆಗೆ ಒಂದೇ ಕುಟುಂಬದಡಿ ಮುಂದುವರಿಸಲಾಗುತ್ತಿತ್ತು. ಆ ಕುಟುಂಬ ದವರನ್ನಲ್ಲದಿದ್ದರೆ ಬೇರೆಯವರನ್ನು ಜೀತದಾಳುಗಳನ್ನಾಗಿ ಪಡೆಯುವ ಊಳಿಗ ಪ್ರಭುಗಳು ಇದ್ದರು. ಆದ್ದರಿಂದ ಪರಿಹಾರವಿರುವುದು ಜೀತದಾಳು ಎಂಬ ಸಾಧ್ಯತೆಯನ್ನು ಇಲ್ಲವೆನಿಸಿದಾಗ ಮಾತ್ರ. ಪಿತ್ರಾರ್ಜಿತ ಆಸ್ತಿಯ ಹಕ್ಕು ಮಹಿಳೆಯರಿಗೆ ಅನ್ವಯವಾಗುವುದು ಸ್ವಾಗತಾರ್ಹ, ಆದರೆ ಅದು ಮಹಿಳಾ ವಿಮೋಚನೆಗೆ ಪ್ರಬಲ ಸಾಧನವಲ್ಲ. ಆ ಹಕ್ಕನ್ನು ಜಾರಿಗೆ ತಂದಾಗಲೂ ಬಹುಪಾಲು ಮಹಿಳೆಯರು ಅಂತಹ ಕಾನೂನಿನ ಪರಿಧಿಯಿಂದ ಹೊರಗೆ ಉಳಿದುಬಿಡುತ್ತಾರೆ, ಏಕೆಂದರೆ ಹೇಳಿಕೊಳ್ಳಬಹುದಾದ ಯಾವ ಆಸ್ತಿಯೂ ಇಲ್ಲದ ಕುಟುಂಬಗಳು ನಮ್ಮ ದೇಶದಲ್ಲಿ ಬೇಕಾದಷ್ಟಿವೆ. ಭೂಮಿ, ಬಂಡವಾಳ, ಉದ್ಯಮ, ಇವೆಲ್ಲಾ ಖಾಸಗಿಯಾಗಿರುವುದಕ್ಕೆ ಪರ್ಯಾಯವಾಗಿ ಅವು ಸಾಮಾಜಿಕ ಹತೋಟಿಗೆ ಬರದಿದ್ದರೆ ಆಗ ಪಿತ್ರಾರ್ಜಿತ ಆಸ್ತಿಯ ಹಕ್ಕಿನಿಂದ ಮಹತ್ವದ ನಿರೀಕ್ಷೆ ಇರಿಸಿಕೊಳ್ಳಲಾಗುವುದಿಲ್ಲ. ಜೊತೆಗೆ, ಖಾಸಗಿಯಾಗಿರುವ ಉತ್ಪಾದನಾ ಸಾಧನಗಳು (ಭೂಮಿ, ಬಂಡವಾಳ, ಇತ್ಯಾದಿ) ಸಾಮಾಜಿಕ ಒಡೆತನಕ್ಕೆ ಸೇರಿದಾಗ ಆಸ್ತಿಯ ಹಕ್ಕಿಗೆ ಅರ್ಥವಿರುವುದಿಲ್ಲ. ಖಾಸಗಿ ಬಳಕೆಯ ವಸ್ತುಗಳು (ಮನೆ, ಬಟ್ಟೆ, ವಾಹನ, ಒಡವೆ, ಇತ್ಯಾದಿಗಳು) ಹೇಗಿದ್ದರೂ ವೈಯ್ಯಕ್ತಿಕ ಆಸ್ತಿಯಾಗಿರುತ್ತವೆಯೇ ವಿನಾ ಸಾಮಾಜಿಕ ಆಸ್ತಿಯಾಗಿ ಪರಿವರ್ತನೆ

ಹೊಂದುವುದಿಲ್ಲ. ಇಂತಹ ಖಾಸಗಿ ಆಸ್ತಿಯ ಹೆಚ್ಚಳವಾಗಬೇಕೆಂಬುದು ಸಮಾಜವಾದದ ಮೂಲ ಆಶಯ. ಶಿಕ್ಷಣ, ಆರೋಗ್ಯ, ವಸತಿ, ಸಂಚಾರ, ಮುಂತಾದುವುಗಳಿಗೆ ಖಾಸಗಿ ಆಸ್ತಿಯು ಪ್ರಮುಖ ಆಸರೆ.

ಬೇರೊಂದು ಆಯಾಮದಲ್ಲಿ ಮಹಿಳಾ ಸಮಾನತೆಯ ವಿಚಾರವನ್ನು ಪರಿಶೀಲಿಸೋಣ : ಜರ್ಮನಿಯ ಖ್ಯಾತ ಸಾಹಿತಿ ಗೊಯ್‌ತೆಗೆ ಪತ್ನಿಯೊಬ್ಬಳಲ್ಲದೆ ಪ್ರೀತಿ ಮಾಡುವುದಕ್ಕೆ ಬೇರೊಬ್ಬಳೂ ಇದ್ದಳು. ಗಿಯೋರ್ಗ್ ಸಾಂಡ್ ಎಂಬ ಸಾಹಿತಿ ಆಗೊಂದು ಪ್ರಶ್ನೆ ಎತ್ತಿದ್ದಳು : "ಮಹಿಳೆಗೆ ಅಂಥದೇ ಅವಕಾಶ ಬೇಡವೆಂದೇಕೆ ಹೇಳುತ್ತೀರಿ?" ಎಂದು. ಇದನ್ನು ಆಗಸ್ಟ್ ಬೆಬೆಲ್ ತನ್ನ "ಭವಿಷ್ಯದ ಸಮಾಜ" ಎಂಬ ಕಿರುಹೊತ್ತಿಗೆಯಲ್ಲಿ ಪ್ರಸ್ತಾಪಿಸಿ ಒಂದು ಮಾತು ಹೇಳಿದ್ದ: ಅವಳಿಗಾದರೆ ಕೇವಲ ಮಿದುಳಿನ ಸ್ವಾತಂತ್ರ್ಯ; ಹೃದಯದ ಸ್ವಾತಂತ್ರ್ಯ ಇಲ್ಲ; ಅವನಿಗಾದರೆ ಮಿದುಳು ಮತ್ತು ಹೃದಯ ಸ್ವಾತಂತ್ರ್ಯ, ಎರಡೂ ಉಂಟು, ಎಂದು. ಸಾಂಡ್ ಅಕ್ರಮ ಸ್ವಚ್ಛಂದತೆಯ ಬೆಂಬಲಿಗಳಲ್ಲ; ಅವಳು ಲಿಂಗಸಂಬಂಧೀ ದೃಷ್ಟಿಯಲ್ಲಿನ ವೈಪರೀತ್ಯವನ್ನು ಟೀಕಿಸಿದ್ದಳು, ಅಷ್ಟೆ. ೧೯೧೭ರ ಮಹಾನ್ ಅಕ್ಟೋಬರ್ ಸಮಾಜವಾದಿ ಕ್ರಾಂತಿಯ ತರುವಾಯದ ರಷ್ಯದಲ್ಲಿ ಲೈಂಗಿಕ ಸಂಬಂಧಗಳ ಪ್ರಶ್ನೆಯನ್ನು ತೀವ್ರವಾದ ಚರ್ಚೆಗೆ ಒಡ್ಡಲಾಗಿತ್ತು. ಒಂದು ಬಣದ ವಾದ ಹೀಗಿತ್ತು : ಸಮಾಜವಾದದಲ್ಲಿ ಸಾಮೂಹಿಕತೆಗೆ ಅಗ್ರಸ್ಥಾನವಿದೆ; ಒಟ್ಟಾಗಿ ಚಹಾ ಸೇವಿಸಲು ನಿರ್ಬಂಧಗಳೇನೂ ಇಲ್ಲದಿರುವಂತೆ ಲೈಂಗಿಕತೆಗೂ ಅನವಶ್ಯಕ ಮಿತಿಗಳನ್ನು ಹೇರದಿರಬೇಕು, ಎಂದು. ಕ್ಲಾರಾ ಜೆಟ್‌ಕಿನ್ ಮತ್ತು ಲೆನಿನ್ ನಡುವೆ ನಡೆದ ದೀರ್ಘ ಸಂಭಾಷಣೆಯೊಂದು ಮಹಿಳಾ ಪ್ರಶ್ನೆಯನ್ನು ಕೇಂದ್ರವನ್ನಾಗಿ ಹೊಂದಿತ್ತು. ಅದರಲ್ಲಿ ಈ "ಚಹಾ ಸೇವನೆ"ಯ ವಿಷಯವೂ ಬಂದಿತ್ತು. ಅದಕ್ಕೆ ಲೆನಿನ್ ಪ್ರತಿಕ್ರಿಯೆ ಬಹಳ ಸಂಕ್ಷಿಪ್ತವಾಗಿತ್ತು : "ಹೌದು, ಸಾಮೂಹಿಕವಾಗಿ ಚಹಾ ಸೇವಿಸುತ್ತೇವೆ, ಆದರೆ ಎಲ್ಲರೂ ಒಂದೇ ಬಟ್ಟಲಿನಿಂದ ಕುಡಿಯುವುದಿಲ್ಲ, ಅಲ್ಲವೇ?" ಸ್ತ್ರೀವಾದದ ಹಾದಿ ತಪ್ಪಿಸುವಿಕೆಗೆ ಒಂದು ನೆಲೆಯಲ್ಲಿ ಲೆನಿನ್ನನ ಈ ಉತ್ತರ ಕಡಿವಾಣ ಹಾಕುತ್ತದೆ.

ನಮ್ಮ ದೇಶದ ಪ್ರಸಕ್ತ ಸಂದರ್ಭದ ವ್ಯವಸ್ಥೆಯಲ್ಲಿ ಬಂಡವಾಳಶಾಹಿ ಮತ್ತು ಅರೆ – ಊಳಿಗಮಾನ್ಯತೆ, ಎರಡೂ ಇವೆ. ಬಂಡವಾಳಶಾಹಿಯೆಂದರೆ "ಔಪಚಾರಿಕ ಸಮಾನತೆ" ಎಂದು ಲೆನಿನ್ ವ್ಯಾಖ್ಯಾನಿಸಿದ್ದ. ಅಂದರೆ, ನಮ್ಮ ದೇಶದ ಎಲ್ಲರಿಗೂ ಮುಖೇಶ್ ಅಂಬಾನಿ ಆಗುವ ಸ್ವಾತಂತ್ರ್ಯವಿದೆ, ಹಕ್ಕಿದೆ, ಎಂದರ್ಥ. ಒಂದು ವಸತಿಸಮುಚ್ಚಯದ ಕೊಳಚೆ ನೀರು ಶುದ್ಧೀಕರಣ ಘಟಕದಲ್ಲಿ ಸ್ವಚ್ಛತೆಯ ಕೆಲಸ ಮಾಡುವಾಗ ಉಸಿರುಗಟ್ಟಿ ಸಾಯುವ ಸ್ವಾತಂತ್ರ್ಯ ಮತ್ತು ಹಕ್ಕು ಸಹ ಎಲ್ಲರಿಗೂ ಇದೆ. ಆದರೆ ಆ 'ಹಕ್ಕು' ಚಲಾಯಿಸಿ ಕೊಳಚೆಗುಂಡಿಯಲ್ಲಿ ಸಾಯುವವರು ನಿರ್ದಿಷ್ಟ ಹಿನ್ನೆಲೆಯುಳ್ಳವರು, ಬಡತನದಲ್ಲಿ ಬೆಂದಿರುವವರು. ಅಂದರೆ, ಔಪಚಾರಿಕ ಸಮಾನತೆಯ ಜೊತೆ ವಾಸ್ತವಿಕ ಆರ್ಥಿಕ –ಸಾಮಾಜಿಕ ಅಸಮಾನತೆಯೂ ಇದೆ. ಷೇರುಪೇಟೆಯಲ್ಲಿ ದಗಲ್ಬಾಜಿ ಮಾಡಿ ಅಂಬಾನಿ ಆಗಬಹುದು, ಇಲ್ಲವೇ ಇದ್ದುದನ್ನೆಲ್ಲಾ ಕಳೆದುಕೊಂಡು ನಿರ್ಗತಿಕರಾಗಿ ಆತ್ಮಹತ್ಯೆಯನ್ನೂ ಮಾಡಿಕೊಳ್ಳಬಹುದು. ಈ ಸಂದರ್ಭ – ಸೌಲಭ್ಯಗಳು ಮಹಿಳೆಯರಿಗೂ ಉಂಟು. ಉತ್ಪಾದನಾ ಸಾಧನಗಳನ್ನು, ಉದಾಹರಣೆಗೆ ಉದ್ಯಮ, ಭೂಮಿ, ಬಂಡವಾಳ, ಇತ್ಯಾದಿಗಳನ್ನು, ತಮ್ಮ ಖಾಸಗಿ ಆಸ್ತಿಯಾಗಿ ಹೊಂದಿರುವ ಮಹಿಳೆಯರು ವಿರಳ. ಗಂಡಂದಿರ ಹೆಂಡತಿಯರಾಗಿ ಅನೇಕ ಮಹಿಳೆಯರು ಕಂಪನಿಗಳ ನಿರ್ದೇಶಕ ಮಂಡಲಿಗಳಲ್ಲಿದ್ದಾರೆ, ಕೆಲವರು ಸ್ವಂತದ ಉದ್ದಿಮೆಗಳನ್ನೂ ಹೊಂದಿದ್ದಾರೆ. ಅಂಥವರಿಗೆ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಗಣನೀಯ ಸ್ಥಾನ ಉಂಟು, ಆದರೆ ಅವರೆಲ್ಲಾ ಪುರುಷ ಪ್ರಾಧಾನ್ಯದ ಸೆರೆಯಿಂದ ಮುಕ್ತರಾಗಿಯೇ ಇರುತ್ತಾರೆಂದು ಹೇಳಬರುವುದಿಲ್ಲ. ವೈಯ್ಯಕ್ತಿಕ ಮತ್ತು ಮನೋವಿಜ್ಞಾನಾತ್ಮಕ ಅಂಶಗಳು ಭಿನ್ನವಾಗಿ ವ್ಯಕ್ತವಾಗಲು ಇದೂ ಒಂದು ಕಾರಣ. ಉತ್ಪಾದನಾ ಸಾಧನಗಳ ಮಾಲಿಕತ್ವವು ಮಹತ್ವದ ವಿಷಯವೇ ಸರಿ, ಆದರೆ ಅದೊಂದರಿಂದಲೇ ಮಹಿಳೆಯರ ಸ್ಥಾನಮಾನಗಳು ಸುಗಮವಾಗುವುದಿಲ್ಲ. ಅಲ್ಲದೆ, ಮಹಿಳಾ ಸಮುದಾಯದ ಕನಿಷ್ಠ ಸಂಖ್ಯೆಯವರಿಗೆ ಮಾತ್ರವೇ ಅನ್ವಯವಾಗುವ ಸಂಗತಿ ಇದು.

*(ಮುಂದುವರಿಯುವುದು)*

**ಜಿ. ರಾಮಕೃಷ್ಣ**
೨–ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ
ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫

## ಮಳೆಯ ಅಬ್ಬರ

ಮೇಘ ರಾಜನಿಗೆ ಅಮೋಘ ಸ್ವಾಗತವು
ಈ ಘಳಿಗೆ ಅದ್ಭುತಕರವು ನಿಜವು
ಜೂನು ಮಾಸದಾ ಆದಿ ಕಾಲದಲಿ ಬಾನು ।
ಜಿಲಿಯುವ ತೆರಹ ಅದ್ಭುತ ಕರವು ॥
ಅಟ್ಟಹಾಸದಲಿ ಸುಟ್ಟು ಜಿಡುವೆನೆಂಬಷ್ಟು ।
ಸುರಿಯಿತು ಇನ್ನಷ್ಟು ರಭಸದಲಿ ।
ಮಳೆ ಇಳೆಗೆ ದಣಿಯದ ತೆರದಲಿ

**ಕೀರಿಕ್ಕಾಡು ವನಮಾಲಾ ಕೇಶವ ಭಟ್ಟ**
ಕಾಸರಗೋಡು – ೬೭೧ ೫೪೩

# ಜೈವಿಕ ತಂತ್ರಜ್ಞಾನದ ನಾಳೆಗಳು ಏನನ್ನು ಹೊತ್ತು ತರಲಿವೆ?

ನಮ್ಮ ಜೀನ್‌ಗಳಲ್ಲಿ ಸಣ್ಣ ಪುಟ್ಟ ಬದಲಾವಣೆ ಮಾಡಿ, ತೊಂದರೆದಾಯಕ, ರೋಗಕಾರಕ ಜೀನನ್ನು ತೆಗೆದು, ಅದರ ಬದಲಿಗೆ ಆರೋಗ್ಯಕಾರಿ ಜೀನನ್ನು ಇರಿಸಿ ಪ್ರಯೋಗ ಮಾಡಿ ದಶಕಗಳೇ ಸರಿದಿವೆ. ೧೯೯೦ರಲ್ಲೇ ಇದರ ಮೊದಲ ಪ್ರಯೋಗ ಮನುಷ್ಯರ ಮೇಲೆ ಆಗಿದ್ದೂ ಉಂಟು. ಆದರೆ ಆಗಿನ್ನೂ ಮಾನವನ ಡಿ.ಎನ್.ಎ.ಗೆ ಕೈಹಾಕಿ, ಅವಶ್ಯಕತೆಗೆ ತಕ್ಕ ಹಾಗೆ ಬದಲಿಸಿ, ಉಪಯುಕ್ತ ಫಲಿತಾಂಶ ಗಳನ್ನು ನೀಡುವ ಈ ಪ್ರಕ್ರಿಯೆ ಶೈಶವ ಹಂತದಲ್ಲಿತ್ತು. ಈಗ ದಶಕಗಳ ಅಧ್ಯಯನ ಹಾಗೂ ಪ್ರಯೋಗಗಳ ಫಲವಾಗಿ ಜೈವಿಕ ತಂತ್ರಜ್ಞಾನದ ಭವಿಷ್ಯದ ಭರವಸೆಯಾಗಿ ಜೀನ್ ಥೆರಪಿ ನಿಂತಿದೆ.

*ಹುಟ್ಟುವ ಮುನ್ನವೇ ಮಗುವಿಗಿರುವ ಅನುವಂಶಿಕ ಸಮಸ್ಯೆಗೆ ಶಾಶ್ವತ ಪರಿಹಾರ, ಜೀನ್ ಥೆರಪಿಯ ಮೂಲಕ ಸಾಧ್ಯ*

ಜೈವಿಕ ತಂತ್ರಜ್ಞಾನ ಎಂದೊಡನೆ ವಿಜ್ಞಾನದ ಹಿನ್ನೆಲೆ ಇಲ್ಲದವರು ಅಥವಾ ಇದರ ಬಗ್ಗೆ ಹೆಚ್ಚು ಕೇಳಿಲ್ಲದವರು ಇದೇನೋ ಬಹಳ ಸಂಕೀರ್ಣ ವಿಚಾರ ಅಂದುಕೊಳ್ಳಬಹುದು; ಆದರೆ ಈ ಜೈವಿಕ ತಂತ್ರಜ್ಞಾನ ಹೊಸತೇನಲ್ಲ; ಲಕ್ಷಾಂತರ ವರ್ಷಗಳಿಂದ ನಮ್ಮ ಜೊತೆಗೆ, ನಮ್ಮ ಬದುಕಿನ ಅವಿಭಾಜ್ಯ ಅಂಗವಾಗಿಯೇ ಇದೆ. ಆದರೆ ಆಧುನಿಕ ಜೈವಿಕ ತಂತ್ರಜ್ಞಾನದ ಶಾಖೆ ಹುಟ್ಟಿಕೊಂಡಿದ್ದೇ ಕೆಲವು ದಶಕಗಳ ಕೆಳಗೆ. ಹಾಗಾದರೆ ಲಕ್ಷಾಂತರ ವರ್ಷಗಳ ಕೆಳಗೇ ಇದು ನಮ್ಮ ಬದುಕಿನ ಭಾಗ ಹೇಗಾಯಿತು?

ಜೀವಿಗಳ ಒಳಗಿರುವ ವ್ಯವಸ್ಥೆಯನ್ನು, ಜೀವಿಗಳ ಜೀವಕೋಶಗಳನ್ನು ಅಥವಾ ಜೀವಿಗಳನ್ನೇ ಒಂದು ಉಪಯುಕ್ತ ಪ್ರಕ್ರಿಯೆಗೆ ಬಳಸುವ ತಂತ್ರಜ್ಞಾನವೇ ಜೈವಿಕ ತಂತ್ರಜ್ಞಾನ. ಇದು ಜೀವವಿಜ್ಞಾನ ಮತ್ತು ತಂತ್ರಜ್ಞಾನಗಳ ಸಂಗಮ. ಈಗ ಯೋಚಿಸಿ – ಇದನ್ನು ನಾವು ಅನಾದಿಕಾಲದಿಂದಲೂ ಬಳಸುತ್ತಲೇ ಬಂದಿದ್ದೇವೆ ಅಲ್ಲವೆ? ಮೊಸರು ತಯಾರಿಸಲು ಹಾಲಿಗೆ ಹೆಪ್ಪು ಹಾಕುವುದು ಅಂದರೆ ಲ್ಯಾಕ್ಟೋಬ್ಯಾಸಿಲ್ಲಸ್ ಬ್ಯಾಕ್ಟೀರಿಯಾವನ್ನು ಬಳಸಿಕೊಂಡು ಹಾಲನ್ನು ಮೊಸರಾಗಿಸುವುದು ಎಂದೇ ಅರ್ಥ. ಅದೇ ರೀತಿ ಉಪ್ಪಿನಕಾಯಿ, ಇಡ್ಲಿ, ದೋಸೆ ಹಿಟ್ಟು, ವಿವಿಧ ಬಗೆಯ ಮದ್ಯಗಳ ತಯಾರಿ – ಇವೆಲ್ಲಾ ಜೈವಿಕ ತಂತ್ರಜ್ಞಾನದ ಮೂಲಭೂತ ಉಪಯುಕ್ತತೆ; ಆದರೆ, ಜೈವಿಕ ತಂತ್ರಜ್ಞಾನ ಕೇವಲ ಅಡುಗೆ ಮನೆಗೆ ಸೀಮಿತವಾಗಿಲ್ಲ; ವೈದ್ಯಕೀಯ ಕ್ಷೇತ್ರ, ಕೃಷಿ ಸೇರಿದಂತೆ ಅಮಿತ ಕ್ಷೇತ್ರಗಳಿಗೆ ಹೊಸ

**ಕ್ಷಮಾ ವಿ. ಭಾನುಪ್ರಕಾಶ್**


*ಮಾನವಕುಲದ ಒಳಿತಿಗೆ ಜೀವಿಗಳನ್ನು /ಜೈವಿಕ ಕಣಗಳನ್ನು ಬಳಸಿಕೊಳ್ಳುವ ತಂತ್ರಜ್ಞಾನವೇ ಜೈವಿಕ ತಂತ್ರಜ್ಞಾನ*


*ಡಿ.ಎನ್.ಎ. ಒಳಗಿನ ಜೀನ್‌ಗಳಲ್ಲಿ ಅತಿ ಸೂಕ್ಷ್ಮ ಬದಲಾವಣೆ ಮಾಡಿ ಅದ್ಭುತ ಫಲಿತಾಂಶಗಳನ್ನು ಕೊಡಮಾಡಿದೆ ಜೈವಿಕ ತಂತ್ರಜ್ಞಾನ*



ಜಗತ್ತಿನ ಹಸಿವು, ಅಪೌಷ್ಟಿಕತೆ ನಿವಾರಣೆಗೆ ಜೈವಿಕ ತಂತ್ರಜ್ಞಾನ ಹೊಸ ಆಶಾಕಿರಣ




ವೈರಸ್‌ನಂತಹ ವಾಹಕದ ಮೂಲಕ ಬೇಡದ ಜೀನ್‌ನ ಬದಲಿಗೆ ಬೇಕಾದ ಜೀನ್ ಅನ್ನು ಮಾನವನ ದೇಹಕ್ಕೆ ಸೇರಿಸಿದರೆ, ಸವಾಲಿಗೆ ಜವಾಬು ಸಿಕ್ಕಂತೆಯೇ!

ಆಯಾಮಗಳನ್ನೇ ನೀಡುತ್ತಿದೆ. ೨೦ನೆಯ ಶತಮಾನದ ಪ್ರಾರಂಭದಲ್ಲಿ ವಿಜ್ಞಾನದ ಒಂದು ಶಾಖೆಯಾಗಿ ಬೆಳೆದ ಜೈವಿಕ ತಂತ್ರಜ್ಞಾನ (ಬಯೋ ಟೆಕ್ನೋಲೊಜಿ) ಇಂದು ಬೆಳೆಯುತ್ತಿರುವ ನಮ್ಮ ಅವಶ್ಯಕತೆಗಳಿಗೆ ಅನಿವಾರ್ಯವೇ ಆಗಿದೆ. ಸೂಕ್ಷ್ಮಜೀವಿಗಳ ಬಳಕೆಯಿಂದ ಪ್ರತಿಜೈವಿಕಗಳ (ಆಂಟಿಬಯೋಟಿಕ್) ಸೃಷ್ಟಿ, ಇನ್ಸುಲಿನ್‌ನಂತಹ ಅತ್ಯುಪಯುಕ್ತ ಹಾರ್ಮೋನುಗಳ ಸಂಶ್ಲೇಷಣೆ, ಲಸಿಕೆಗಳ ಮೂಲಕ ಸಿಡುಬಿನಂತಹ ಮಾರಣಾಂತಿಕ ರೋಗಗಳ ನಿರ್ನಾಮ, ಅತಿವೃಷ್ಟಿ – ಅನಾವೃಷ್ಟಿಯಂತಹ ತೀವ್ರತರನಾದ ಪ್ರಾಕೃತಿಕ ಪರಿಸ್ಥಿತಿಗಳನ್ನು ಏಕರೀತಿಯಲ್ಲಿ ನಿರ್ವಹಿಸಿ ಫಲ ಕೊಡುವ ಬೆಳೆಗಳು, ಕೀಟಗಳ ಕಾಟಕ್ಕೆ ಕೇರ್ ಮಾಡದ ಸಸ್ಯಗಳು, ಹುಟ್ಟುವ ಮೊದಲೇ ಆನುವಂಶಿಕ ಸಮಸ್ಯೆಗಳಿಗೆ ವೈದ್ಯಕೀಯ ಪರಿಹಾರ ಪಡೆದು ಜನಿಸುವ ಮಕ್ಕಳು – ಇಂತಹ ಸಾವಿರಾರು ಅಸಾಧ್ಯವೆನಿಸಿದ್ದ ವಿದ್ಯಮಾನಗಳನ್ನು ಸಾಧ್ಯಮಾಡಿದ ಜೀವವಿಜ್ಞಾನದ ಈ ಶಾಖೆಗೆ ಈಗ ಸರ್ಕಾರ ಮತ್ತು ಖಾಸಗಿ ಸಂಸ್ಥೆಗಳು ನೂಕುಬಲ ಕೊಟ್ಟಿವೆ.

**ವೈದ್ಯಕೀಯ ಕ್ಷೇತ್ರದಲ್ಲೂ ಜೈವಿಕ ತಂತ್ರಜ್ಞಾನದ ದಾಪುಗಾಲು**

ಬೃಹತ್ ಪ್ರಮಾಣದಲ್ಲಿ ಜೀವರಕ್ಷಕ ಪ್ರತಿಜೈವಿಕಗಳ, ಇನ್ಸುಲಿನ್‌ನಂತಹ ಹಾರ್ಮೋನುಗಳ, ಅನೇಕ ಅತಿಮುಖ್ಯ ಔಷಧಿಗಳ ಕ್ಷಿಪ್ರಗತಿಯ ಉತ್ಪಾದನೆಯೂ ಸೇರಿ ವೈದ್ಯಕೀಯ ಕ್ಷೇತ್ರದ ಶೇ.೫೦ ಭಾಗ ಸಾಮ್ರಾಜ್ಯವನ್ನು ಜೈವಿಕ ತಂತ್ರಜ್ಞಾನವೇ ಆಳುತ್ತಿದೆ. ಇದರ ಜೊತೆಗೆ ಜೀನ್ ಥೆರಪಿ, ಆಕರಕೋಶಗಳ(ಸ್ಟೆಮ್ ಸೆಲ್) ಬಳಕೆ, ನ್ಯಾನೋ ಔಷಧ ಮತ್ತು ದೇಹದೊಳಗೆ ಔಷಧ ತಲುಪಿಸುವ ಹೊಸ ವ್ಯವಸ್ಥೆಗಳು ಈ ಕ್ಷೇತ್ರದಲ್ಲಿ ಭರವಸೆ ಮೂಡಿಸಿವೆ.

ನಮ್ಮ ಜೀನ್‌ಗಳಲ್ಲಿ ಸಣ್ಣ ಪುಟ್ಟ ಬದಲಾವಣೆ ಮಾಡಿ, ತೊಂದರೆದಾಯಕ, ರೋಗಕಾರಕ ಜೀನನ್ನು ತೆಗೆದು, ಅದರ ಬದಲಿಗೆ ಆರೋಗ್ಯಕಾರಿ ಜೀನನ್ನು ಇರಿಸಿ ಪ್ರಯೋಗ ಮಾಡಿ ದಶಕಗಳೇ ಸರಿದಿವೆ. ೧೯೯೦ರಲ್ಲೇ ಇದರ ಮೊದಲ ಪ್ರಯೋಗ ಮನುಷ್ಯರ ಮೇಲೆ ಆಗಿದ್ದೂ ಉಂಟು. ಆದರೆ ಆಗಿನ್ನೂ ಮಾನವನ ಡಿ.ಎನ್.ಎ.ಗೆ ಕೈಹಾಕಿ, ಅವಶ್ಯಕತೆಗೆ ತಕ್ಕ ಹಾಗೆ ಬದಲಿಸಿ, ಉಪಯುಕ್ತ ಫಲಿತಾಂಶಗಳನ್ನು ನೀಡುವ ಈ ಪ್ರಕ್ರಿಯೆ ಶೈಶವ ಹಂತದಲ್ಲಿತ್ತು. ಈಗ ದಶಕಗಳ ಅಧ್ಯಯನ ಹಾಗೂ ಪ್ರಯೋಗಗಳ ಫಲವಾಗಿ ಜೈವಿಕ ತಂತ್ರಜ್ಞಾನದ ಭವಿಷ್ಯದ ಭರವಸೆಯಾಗಿ ಜೀನ್ ಥೆರಪಿ ನಿಂತಿದೆ. ಇದರ ಸಹಾಯದಿಂದ ಮಗು ಹುಟ್ಟುವ ಮೊದಲೇ ತನ್ನ ತಳಿಯ ನ್ಯೂನತೆಗಳನ್ನು ಸರಿಪಡಿಸಿಕೊಂಡು, ಮಾರಣಾಂತಿಕ ಅನಾರೋಗ್ಯ ಸಮಸ್ಯೆಗಳಿಲ್ಲದೆ ಜನಿಸಬಹುದಾಗಿದೆ. ಕೇವಲ ಜನನಕ್ಕೆ ಮೊದಲೇ ಅಲ್ಲದೇ, ಯಾವುದೇ ವಯಸ್ಸಿನ ವ್ಯಕ್ತಿಗೂ ಜೀನ್ ಚಿಕಿತ್ಸೆ ಪರಿಣಾಮಕಾರಿಯಾಗುವ ದಿನಗಳು ಹತ್ತಿರದಲ್ಲಿವೆ. ವೈಜ್ಞಾನಿಕ ಕ್ರಾಂತಿಯೆಂದರೆ ಇದಲ್ಲವೆ?



ಬಯೋಪ್ಲಾಸ್ಟಿಕ್ – ಇದು ಖಂಡಿತಾ ಮಣ್ಣಲ್ಲಿ ಮಣ್ಣಾಗತ್ತೆ!

ಚಿಕಿತ್ಸಕ ಪ್ರಕ್ರಿಯೆಗಳಿಗೆ ಪರೋಕ್ಷ ನೆರವು ಒದಗಿಸಲು ಆಕರಕೋಶಗಳ ಬಳಕೆ ಪ್ರಾರಂಭವಾಗಿ ದಶಕಗಳು ಕಳೆದಿದ್ದರೂ ಅವುಗಳನ್ನು ಬಳಸಿ ಹೊಸ ಅಂಗವನ್ನೇ ಸೃಷ್ಟಿಸಿ, ಯಾವುದೇ ಅಂಗಾಂಗ ದಾನಿಯ ನೆರವಿಲ್ಲದೇ ಅಂಗಾಂಗ ಕಸಿಯನ್ನು ಮಾಡುವುದು ಇನ್ನೂ ಪ್ರಾಯೋಗಿಕ ಹಂತದಲ್ಲಿಯೇ ಇದೆ. ಊತಕ (ಟಿಶ್ಯೂ)ಗಳನ್ನು ಈಗಾಗಲೇ ಬೆಳೆಸಿದ್ದರೂ, ಆಕರಕೋಶಗಳನ್ನು ಬಳಸಿ ಜಠರ, ಮೂತ್ರಕೋಶದಂತಹ ಅಂಗಾಂಗದ ಸೃಷ್ಟಿ ಮತ್ತು ಅದನ್ನು ಮನುಷ್ಯರೊಳಗೆ ಅಳವಡಿಸುವುದು ಇನ್ನೂ ಸಾಧ್ಯವಾಗಿಲ್ಲ. ಆದರೆ ಇದಕ್ಕೆ ತಕ್ಕ ತಯಾರಿ ಜಾಗತಿಕವಾಗಿ ಈಗಾಗಲೇ ನಡೆದಿದೆ; ಈ ಕನಸು ನನಸಾಗುವ ದಿನಗಳು ಬಹಳ ದೂರವಿಲ್ಲ ಎನ್ನುತ್ತಾರೆ ಸಂಶೋಧಕರು. ದಾನಿಗಳು ಸಿಕ್ಕದೆ ಅಂಗಾಂಗ ವೈಫಲ್ಯದಿಂದ ಪ್ರಾಣಕ್ಕೇ ಸಂಚಕಾರ ಅನುಭವಿಸುತ್ತಿರುವ ಸಾವಿರಾರು ಜನರ ಪಾಲಿಗೆ ಭವಿಷ್ಯದ ದಿನಗಳಲ್ಲಿ ಜೈವಿಕ ತಂತ್ರಜ್ಞಾನವು ಹೊಸಬೆಳಕು ಮೂಡಿಸೀತೆ? ಹೌದು ಎನ್ನುತ್ತವೆ ಈ ನಿಟ್ಟಿನ ಪ್ರಯೋಗಗಳು.

ಸೂಕ್ಷ್ಮಾತಿಸೂಕ್ಷ್ಮ ನ್ಯಾನೋಕಣಗಳನ್ನು ಈಗಾಗಲೇ ಎಲ್ಲ ಕ್ಷೇತ್ರಗಳಲ್ಲೂ ಅನೇಕ ಪ್ರಕ್ರಿಯೆಗಳ ಸುಧಾರಣೆಗಾಗಿ ಬಳಸಲಾಗುತ್ತಿದೆ; ಇದಕ್ಕೆ ವೈದ್ಯಕೀಯ ಕ್ಷೇತ್ರವೂ ಹೊರತಲ್ಲ. ಜೈವಿಕ ತಂತ್ರಜ್ಞಾನದ ಮೂಲಕ ಅನೇಕ ಔಷಧಿಗಳ ಭಾಗವಾಗಿ ಅಪಾಯಕಾರಿಯಲ್ಲದ ಧಾತುಗಳ ನ್ಯಾನೋಕಣಗಳನ್ನು ಸೇರಿಸಿ, ಆ ಔಷಧಿಯ ಪರಿಣಾಮವನ್ನು ದ್ವಿಗುಣವಾಗಿಸಿರುವುದು, ಕ್ಷಿಪ್ರ ಮತ್ತು ನಿರ್ದಿಷ್ಟವಾಗಿಸಿರುವುದು ಈಗಾಗಲೇ ಅಚ್ಚರಿದಾಯಕ ಫಲಿತಾಂಶಗಳನ್ನು ನಮ್ಮ ಮುಂದೆ ಇರಿಸಿದೆ. ಇದರ ಮುಂದಿನ ಹಂತವಾಗಿ ಹೃದಯದ ಸಂಕೀರ್ಣ ಸಮಸ್ಯೆ, ಆಲ್ಝೈಮರ್ಸ್, ಕ್ಯಾನ್ಸರ್‌ನಂತಹ ಭಯಾನಕ ಕಾಯಿಲೆಗಳಿಗಾಗಿ ಪರಿಹಾರೋಪಾಯವಾಗಿ ಜೈವಿಕ ತಂತ್ರಜ್ಞಾನದ ನ್ಯಾನೋಚಿಕಿತ್ಸೆ ಅಭಯಕೊಟ್ಟಿದೆ. ಉದಾಹರಣೆಗೆ, ಲೋಹದ ನ್ಯಾನೋಕಣಗಳನ್ನು ನೇರವಾಗಿ ಕ್ಯಾನ್ಸರ್ ಪೀಡಿತ ಊತಕಗಳಿಗೆ ಸೇರಿಸಿ, ಅಲ್ಲಿ ಗುರಿಯಿಟ್ಟು ಅವರೋಹಿತ ಕಿರಣಗಳನ್ನು ಬೀರಿದಾಗ, ಆ ನ್ಯಾನೋ ಲೋಹದ ತಟ್ಟೆ/ಮಸೂರಗಳು ಆ ಕಿರಣಗಳನ್ನು ಅಪರಿಮಿತ ಶಾಖವಾಗಿ ಪರಿವರ್ತಿಸಿ, ಗುರಿಯಿಟ್ಟು ಕ್ಯಾನ್ಸರ್‌ಪೀಡಿತ ಊತಕವನ್ನು ನಾಶಪಡಿಸುತ್ತವೆ. ಇಂತಹ ಅನೇಕ ಭರವಸೆದಾಯಕ ನಡೆಗಳು, ಜೈವಿಕ ತಂತ್ರಜ್ಞಾನದೆಡೆಗೆ ಜಗತ್ತೇ ಅಚ್ಚರಿ ಮತ್ತು ವಿಶ್ವಾಸದಿಂದ ನೋಡುವಂತೆ ಮಾಡಿದೆ.

ಡ್ರಗ್ ಡೆಲಿವರಿ ವ್ಯವಸ್ಥೆ ಅಥವಾ ನಿರ್ದಿಷ್ಟ ಔಷಧಿಯ ಅಣುಗಳನ್ನು ನಿರ್ದಿಷ್ಟ ಅಂಗಾಂಗ, ಊತಕ, ಕೋಶಗಳಿಗೆ ನೇರವಾಗಿ ನಿಖರವಾಗಿ ತಲುಪಿಸುವ ವ್ಯವಸ್ಥೆಗೆ ಜೈವಿಕ

ತಂತ್ರಜ್ಞಾನದ ಕೊಡುಗೆ ಅಪಾರ. ಇವುಗಳಲ್ಲಿ ಆಗುತ್ತಿದ್ದ ಏರುಪೇರನ್ನು ಸರಿದೂಗಿಸುವ ನಿಟ್ಟಿನಲ್ಲಿ, ನ್ಯಾನೋ ತಂತ್ರಜ್ಞಾನ ಹಾಗೂ ಜೀನ್ ಪಲ್ಲಟಗಳ ಸಹಾಯದಿಂದ ಸುಧಾರಣೆಗಳನ್ನು ತರುವಲ್ಲಿ ಯಶಸ್ಸು ಸಾಧಿಸಿದೆ. ಹೆಚ್ಚು ಪರಿಣಾಮಕಾರಿಯಾದ, ಮತ್ತಷ್ಟು ನಿಖರವಾದ ಔಷಧಿ ವಿತರಣಾ ವ್ಯವಸ್ಥೆಯನ್ನು ರೂಪಿಸಿ ನಮ್ಮ ಮುಂದಿಡಲಿದೆ ಜೈವಿಕ ತಂತ್ರಜ್ಞಾನ. ಇದೀಗ ಇದು ಬಿಲಿಯನ್ ಅಲ್ಲ, ಟ್ರಿಲಿಯನ್ ಡಾಲರ್ ಹೂಡಿಕೆಯ ಉದ್ಯಮವಾಗಿ ತಲೆ ಎತ್ತುತ್ತಿದೆ.

**ಕೃಷಿ ವಿಜ್ಞಾನಕ್ಕೂ ವಿಸ್ತರಿಸಿದ ಜೈವಿಕ ತಂತ್ರಜ್ಞಾನ**

ಬೆಳೆಯುತ್ತಿರುವ ಜನಸಂಖ್ಯೆಗೆ ಸಮರ್ಪಕವಾಗಿ ಆಹಾರ ಒದಗಿಸುವ ಸವಾಲು ಇಂದು ನಿನ್ನೆಯದಲ್ಲ; ಆದರೂ ಬಹುಪಾಲು ರಾಷ್ಟ್ರಗಳು ಈ ಸಮಸ್ಯೆಗೆ ಉತ್ತರಿಸುವ ಸ್ಥಿತಿಯಲ್ಲಿಲ್ಲ. ಇದರಿಂದ ಪಾರಾಗಲು ಜೈವಿಕ ತಂತ್ರಜ್ಞಾನದ ನೆರವಿನಿಂದ ಈಗಾಗಲೇ ಹಲವು ಪ್ರಯತ್ನಗಳು ನಡೆದಿದ್ದರೂ ಆ ಪ್ರಯತ್ನಗಳ ಪ್ರಮಾಣದಲ್ಲಿ ಹೆಚ್ಚಳವನ್ನು ಮುಂದಿನ ಹತ್ತಿಪ್ಪತ್ತು ವರ್ಷಗಳಲ್ಲಿ ನೋಡಬಹುದು. ರೋಗನಿರೋಧಕ ಜೀನ್‌ಗಳನ್ನು ಆಹಾರ ಬೆಳೆಗಳ ಜೀನೋಮ್‌ನೊಳಗೆ ಸೇರಿಸುವ ಮೂಲಕ, ಅವುಗಳ ಉಳಿವು ಮತ್ತು ಬೆಳವಣಿಗೆಗೆ ಖಾತ್ರಿ ನೀಡುತ್ತದೆ ಜೈವಿಕ ತಂತ್ರಜ್ಞಾನ; ರೋಗನಿರೋಧಕತೆಯಷ್ಟೇ ಅಲ್ಲದೇ ತೀವ್ರತರನಾದ ಆಮ್ಲೀಯ, ಕ್ಷಾರೀಯ ಪರಿಸ್ಥಿತಿಗಳಿಗೆ ಮತ್ತು ಹೆಚ್ಚಿನ ಅಥವಾ ಕಡಿಮೆ ತೇವಾಂಶದ ಪರಿಸ್ಥಿತಿಗಳಿಗೂ ಹೊಂದಿಕೊಂಡು ಬದುಕುವ ಸಾಮರ್ಥ್ಯವನ್ನು ಬೆಳೆಗಳಿಗೆ ನೀಡುತ್ತಿದೆ ಈ ತಂತ್ರಜ್ಞಾನ. ಜೈವಿಕ ತಂತ್ರಜ್ಞಾನದ ಹೊಸ ಸಾಧ್ಯತೆಗಳಿಗೆ ಇದು ನಾಂದಿಹಾಡಿದೆ. ಕೇವಲ ಬೆಳವಣಿಗೆಯ ಹಂತದಲ್ಲಷ್ಟೇ ಅಲ್ಲದೆ, ಕಟಾವಾದ ನಂತರ ಶೇಖರಿಸಿಟ್ಟಾಗ ಹೆಚ್ಚು ಕಾಲ ಹಾಳಾಗದೇ ಉಳಿಯುವಂತೆ ಮತ್ತು ಹೀಗೆ ಆರೋಗ್ಯಪೂರ್ಣವಾಗಿ ಉಳಿದ ಕೃಷಿಉತ್ಪನ್ನವು ಉತ್ತಮ ಗುಣಮಟ್ಟದ್ದಾಗಿರುವಂತೆ ಆಣ್ವಿಕ ನೆಲೆಗಟ್ಟಿನಲ್ಲಿ (ಮಾಲಿಕುಲಾರ್ ಲೆವೆಲ್) ಜೈವಿಕ ತಂತ್ರಜ್ಞಾನವು ಸಾಮರ್ಥ್ಯ ತೋರಿಸುತ್ತಿದೆ. ಮುಂದಿನ ದಿನಗಳಲ್ಲಿ ಮತ್ತಷ್ಟು ಹೆಚ್ಚು ಆಹಾರ/ವಾಣಿಜ್ಯಿಕ ಬೆಳೆ ಪ್ರಭೇದಗಳ ಜೀವಾವಧಿ ಹಾಗೂ ಗುಣಮಟ್ಟದ ಹೆಚ್ಚಳಕ್ಕೆ ಬೇಕಾದ ಸುಧಾರಣೆಗಳನ್ನು, ಆವಿಷ್ಕಾರಗಳನ್ನು ತನ್ನೊಡಲಲ್ಲಿ ಕಾಪಿಟ್ಟುಕೊಂಡಿದೆ. ಇಡೀ ಜಗತ್ತೇ ಹಸಿವು, ಅಪೌಷ್ಟಿಕತೆಗಳಿಂದ ಮುಕ್ತವಾಗುವ ದಿನಗಳು ದೂರವಿಲ್ಲ. ವಿಜ್ಞಾನ–ತಂತ್ರಜ್ಞಾನಗಳು ಸಮಾಜಕ್ಕೆ ಒದಗಿಬರುವುದರಲ್ಲೇ ಅವುಗಳ ಸಾರ್ಥಕತೆ ಇದೆ.

**ಕೈಗಾರಿಕಾ ಕ್ಷೇತ್ರಕ್ಕೂ ಜೈವಿಕ ತಂತ್ರಜ್ಞಾನದ ಪ್ರವೇಶ**

ನಮ್ಮ ದಿನನಿತ್ಯದ ಬಳಕೆಗೆ ಬೇಕಾಗುವ ಸಾಬೂನು, ಟೂಥ್‌ಪೇಸ್ಟ್, ಅಡುಗೆ ಮನೆಯ ಸಾಮಗ್ರಿ, ಮನೆಯಲ್ಲಿರುವ ಇತರ ವಸ್ತುಗಳು – ಹೀಗೆ ಬಹುಪಾಲು ಎಲ್ಲವೂ ಸಣ್ಣ ಅಥವಾ ದೊಡ್ಡ ಕೈಗಾರಿಕೆಗಳ ಉತ್ಪನ್ನಗಳೇ. ಇಂತಹ ಉತ್ಪನ್ನಗಳ ತಯಾರಿಯಲ್ಲಿ, ಪ್ಲಾಸ್ಟಿಕ್ ಮತ್ತು ಇತರ ಉಪಯುಕ್ತ ರಾಸಾಯನಿಕಗಳ ತಯಾರಿಯಲ್ಲಿ ಅನೇಕ ರಾಸಾಯನಿಕಗಳನ್ನು ಪೂರ್ವಗಾಮಿಯಾಗಿ ಅಥವಾ ವೇಗವರ್ಧಕವಾಗಿ ಬಳಸುವ ಬದಲು, ಜೈವಿಕ ತಂತ್ರಜ್ಞಾನದ ಸಹಾಯದಿಂದ ಕಿಣ್ವಗಳನ್ನು, ಸೂಕ್ಷ್ಮಾಣುಗಳ ಜೈವಿಕ ಕಣಗಳನ್ನು ಈ ಕ್ಷೇತ್ರದಲ್ಲಿ ಬಳಸಿಕೊಳ್ಳಲಾಗುತ್ತಿದೆ. ಹೀಗೆ ಜೈವಿಕ ಕಣಗಳ/ಜೈವಿಕ ಉತ್ಪನ್ನಗಳ ಬಳಕೆಯಿಂದ ಕೈಗಾರಿಕೆಗಳು ಕ್ಷಿಪ್ರ ಗತಿಯಲ್ಲಿ, ಹೆಚ್ಚು ಮಾಲಿನ್ಯ ಉಂಟುಮಾಡದೇ, ಜಗತ್ತಿನ ಜನರ ಅವಶ್ಯಕತೆಗಳನ್ನು ಪೂರೈಸುತ್ತಿದೆ. ದಿನೇ ದಿನೇ ಹೆಚ್ಚುತ್ತಿರುವ ಪ್ಲಾಸ್ಟಿಕ್ ಮತ್ತಿತರ ತ್ಯಾಜ್ಯದ ನಿರ್ಮೂಲನೆಗೆ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಈ ತಂತ್ರಜ್ಞಾನದ ಬಳಕೆ ಇದೆ. ಮುಂದೆ ಈ ನಿಟ್ಟಿನಲ್ಲಿ ಹೆಚ್ಚು ಪ್ರಗತಿಯನ್ನು ಕಾಣಬಹುದು. ಬೇಡಿಕೆಗೆ ತಕ್ಕಂತೆ ಔಷಧಿಗಳು, ಸಂಸ್ಕರಿತ ಆಹಾರ ಪದಾರ್ಥಗಳೂ ಸೇರಿದಂತೆ ಉತ್ತಮ ಗುಣಮಟ್ಟದ ಅತ್ಯವಶ್ಯಕ ವಸ್ತುಗಳ ಉತ್ಪಾದನೆ ಹೆಚ್ಚಿಸುವಲ್ಲಿಯೂ ಅನೇಕ ವಿನೂತನ ವಿಧಾನಗಳ ಬಳಕೆ, ಜೈವಿಕ ತಂತ್ರಜ್ಞಾನದ ಮೂಲಕ ಸಾಧ್ಯ ಎಂದು ಭರವಸೆ ಇಡಬಹುದಾಗಿದೆ.

**ಪರಿಸರ ಮತ್ತು ಜೈವಿಕ ತಂತ್ರಜ್ಞಾನ**

ಜೈವಿಕ ತಂತ್ರಜ್ಞಾನದ ಸಹಾಯದಿಂದ ಈಗಾಗಲೇ ಜೈವಿಕವಾಗಿ ವಿಘಟನೆಯಾಗಬಲ್ಲ ಪ್ಲಾಸ್ಟಿಕ್‌ನಂತಹ ವಸ್ತುಗಳನ್ನು ತಯಾರಿಸಲಾಗಿದೆ. ಕೃಷಿ ತ್ಯಾಜ್ಯ, ಹುಲ್ಲು, ಖಾದ್ಯ ತೈಲಗಳಂತಹ ಅಪಾಯಕಾರಿಯಲ್ಲದ ಜೈವಿಕ




ಉತ್ಪನ್ನಗಳನ್ನು ಬಳಸಿ ತಯಾರಿಸಲಾದ ಈ ಪಾಲಿಮರ್‌ಗಳು ಮಾಲಿನ್ಯವನ್ನು ತಡೆಗಟ್ಟಲು ಸಹಕಾರಿ. ಆದರೆ ಈ ಉತ್ಪನ್ನಗಳು ಪ್ಲಾಸ್ಟಿಕ್‌ಗಿಂತಾ ದುಬಾರಿಯಾಗಿವೆ. ಅವುಗಳನ್ನು ಕಡಿಮೆ ಖರ್ಚಿನಲ್ಲಿ ತಯಾರಿಸಿ ಅವುಗಳ ದರವನ್ನು ಇಳಿಸುವಲ್ಲಿ, ಅಂತಹ ಜೈವಿಕ ಪ್ಲಾಸ್ಟಿಕ್‌ಗಳ ಗುಣಮಟ್ಟವನ್ನು ಮತ್ತಷ್ಟು ಹೆಚ್ಚಿಸುವಲ್ಲಿ ತರಬೇಕಾದ ಸುಧಾರಣೆಗಳ ಮೇಲೆ ಜೈವಿಕ ತಂತ್ರಜ್ಞಾನ ಕ್ಷೇತ್ರ ತನ್ನ ದೃಷ್ಟಿ ನೆಟ್ಟಿದೆ. ಜೊತೆಗೆ ಈಗಾಗಲೇ ಜಲ –ನೆಲ – ಗಾಳಿಯಲ್ಲಿರುವ ಮಾಲಿನ್ಯಕಾರಕಗಳನ್ನು ನುಂಗಿ ನಿರ್ನಾಮಗೊಳಿಸಬಲ್ಲಂತಹ ಬ್ಯಾಕ್ಟೀರಿಯಾವನ್ನು ಜೀನ್ ಪಲ್ಲಟಗಳ ಮುಖಾಂತರ ಸಾಧಿಸಿದ್ದು, ಅಂತಹ ಸಹಾಯಕಾರಿ ಬ್ಯಾಕ್ಟೀರಿಯಾದ ಸಂಖ್ಯೆ ಹೆಚ್ಚಿಸುವಲ್ಲಿ ಹಾಗೂ ಮಾಲಿನ್ಯ ನಿವಾರಣೆಯಲ್ಲಿ ಅವುಗಳ ಬಳಕೆ ಸುಲಭಗೊಳಿಸುವಲ್ಲಿ ಜೈವಿಕ ತಂತ್ರಜ್ಞಾನವು ಮಹತ್ತರ ಪಾತ್ರ ವಹಿಸುತ್ತಿದೆ.

ಹಾಗೆಂದು ಜೈವಿಕ ತಂತ್ರಜ್ಞಾನವೆಂದರೆ ನಮಗೆ ಬೇಕಾದ್ದನ್ನು, ಅನುಕೂಲವಾದ್ದನ್ನು, ಹಿತಕರವಾದ್ದನ್ನು, ಅತ್ಯುಪಯುಕ್ತವಾದ್ದನ್ನು ಮಾತ್ರ ಕೊಡಮಾಡುವ ಮಾಯಾಚಾಪೆ ಖಂಡಿತ ಅಲ್ಲ. ಈ ಕ್ಷೇತ್ರದಿಂದ ಎಷ್ಟು ನೆರವು ದೊರೆಯುತ್ತದೋ ಅದೇ ಪ್ರಮಾಣದಲ್ಲಿ ಸಮಸ್ಯೆಯೂ ಸೃಷ್ಟಿಯಾಗಿರುವುದು ನಮ್ಮ ಕಣ್ಣಮುಂದೆ ಇದೆ. ಜೈವಿಕ ತಂತ್ರಜ್ಞಾನ ಕ್ಷೇತ್ರವು ಭವಿಷ್ಯದ ದಿನಗಳಲ್ಲಿ ಹೊಸ ಕಾಯಿಲೆಗೆ ಹೊಸ ಮದ್ದು, ಹೊಸ ಮಾಲಿನ್ಯಕಾರಕಕ್ಕೆ ಹೊಸ ಪರಿಹಾರದಂತಹ ಅಚ್ಚರಿಗಳನ್ನು ನೀಡುತ್ತದೆ ನಿಜ. ಆದರೆ ನಾವೇ ಸೃಷ್ಟಿಸಿರುವ ಸೂಪರ್‌ಬಗ್‌ಗಳು, ಜೈವಿಕ ಅಸ್ತ್ರಗಳಂತಹ ಸವಾಲುಗಳಿಗೆ ನಿಯಂತ್ರಣ ತರಬೇಕಾದ ಹೊಣೆಯೂ ತಂತ್ರಜ್ಞರಿಗಿದೆ. ನೈತಿಕತೆ ಉಳಿಸಿಕೊಳ್ಳುವುದು ಬರೀ ಸಮಾಜದ ಹೊಣೆಯಲ್ಲ; ವಿಜ್ಞಾನಿಗಳಿಗೂ ಇದು ಎಚ್ಚರಿಕೆಯ ಬಡಿಗೆಯಾಗಬೇಕು.

**ಕ್ಷಮಾ ವಿ. ಭಾನುಪ್ರಕಾಶ್**
ಎ–೧೦೩, ಲೆಡ್ಜ್, ಜಕ್ಕೂರು, ಬೆಂಗಳೂರು – ೫೬೦ ೦೬೪
Email : kshama.asmi@gmail.com

# ಭಾರತೀಯ ಆಧ್ಯಾತ್ಮಿಕ ಸಾಮ್ರಾಜ್ಯವಾದ

**ಫಾ**ಸಿಸ್ಟ್ ಸಿದ್ಧಾಂತ ಒಂದು ತತ್ವವಾಗಿ ಹುಟ್ಟಿದ್ದೇ ಭಾರತದಲ್ಲಿ. ಹಿಂದಿನಿಂದಲೂ ಸ್ವದೇಶಿ ಹಾಗೂ ವಿದೇಶಿ ಲೂಟಿಕೋರ ಆಳುವ ವರ್ಗಗಳಿಗೆ ಇಲ್ಲಿನ ಅಧ್ಯಾತ್ಮವೆಂದರೆ ವಿಪರೀತವಾದ ಗೌರವ, ಆಸ್ಥೆ. ಇಂದಿಗೂ ಸಹ ಭಾರತೀಯ ವೇದಾಂತದ ಬಗ್ಗೆ ವಿದೇಶೀಯರ ಆಕರ್ಷಣೆ ಕಡಿಮೆಯಾಗಿಲ್ಲ. ಈ ಆಕರ್ಷಣೆಗೆ ಆರ್ಥಿಕ, ರಾಜಕೀಯ ಕಾರಣಗಳಿವೆ ಎನ್ನುವುದು ರಹಸ್ಯದ ಮಾತೇನೂ ಅಲ್ಲ. ಬ್ರಿಟಿಷ್ ಸಾಮ್ರಾಜ್ಯಶಾಹಿಗಳು ಇಲ್ಲಿ ಕಾಲಿಟ್ಟಾಗಿನಿಂದಲೂ ಇಲ್ಲಿನ ಆಧ್ಯಾತ್ಮಿಕತೆಯ ಕಡೆಗೆ ಗಮನಹರಿಸಿ ನಮ್ಮ ಚರಿತ್ರೆ, ಸಂಸ್ಕೃತಿಗಳನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ವ್ಯಾಖ್ಯಾನಿಸಲು ಆರಂಭಿಸಿದರು. ಹೀಗೆ ಚರಿತ್ರೆಯನ್ನು ತಿರುಚಿ ಸಾಮ್ರಾಜ್ಯವಾದಿ ಧೋರಣೆಗೆ ಅನುಕೂಲವಾಗಿರುವಂತೆ ವ್ಯಾಖ್ಯಾನಿಸಿದವರಲ್ಲಿ ಮೊದಲಿಗ ಜೇಮ್ಸ್ ಮಿಲ್. ತನ್ನ 'ಬ್ರಿಟಿಷ್ ಇಂಡಿಯಾದ ಚರಿತ್ರೆ'ಯಲ್ಲಿಯೇ ದ್ವಿರಾಷ್ಟ್ರ ಸಿದ್ಧಾಂತದ ಬೀಜಗಳನ್ನು ನೆಟ್ಟವನು ಅವನು. ಅಂದಿನಿಂದ ಭಾರತದ ಚರಿತ್ರೆಯನ್ನು ಅಧ್ಯಯನ ಮಾಡಿದವರೆಲ್ಲರೂ ಹಿಂದೂ ಇಂಡಿಯಾ, ಮುಸ್ಲಿಮ್ ಇಂಡಿಯಾ ಮತ್ತು ಬ್ರಿಟಿಷ್ ಇಂಡಿಯಾ ಎಂಬ ಕೃತಕ, ಅವೈಜ್ಞಾನಿಕ ವಿಂಗಡಣೆಯ ಆಧಾರದ ಮೇಲೆ ಇಲ್ಲಿನ ಚರಿತ್ರೆಯನ್ನು, ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳುವುದನ್ನಾರಂಭಿಸಿದರು. ಇಂದಿಗೂ ಇದೇ ಅಧ್ಯಯನಾರೀತಿ ಮುಂದುವರೆಯುತ್ತಿದೆ. ಜೇಮ್ಸ್ ಮಿಲ್ ಹಿಂದು ಧರ್ಮದ ಬೆಂಬಲಿಗನೇನಲ್ಲ. ಅವನಿಗೆ ಇಲ್ಲಿನ ಹಿಂದು ಧರ್ಮವನ್ನು ಬೆಂಬಲಿಸಿದರೆ ಆಗುವ ಲಾಭ ಅರ್ಥವಾಗಲಿಲ್ಲ. ಆದರೆ ಆನಂತರ ಬಂದವರು ಇದನ್ನು ಗುರುತಿಸಿ ಭಾರತೀಯ ಆಧ್ಯಾತ್ಮಿಕತೆ ಔನ್ನತ್ಯವನ್ನು ಹಾಡಿಹೊಗಳಿ ತಮ್ಮ ಹಿತಾಸಕ್ತಿಯನ್ನು ಸುಲಭವಾಗಿ ಕಾಪಾಡಿಕೊಂಡರು. ಮ್ಯಾಕ್ಸ್‌ಮುಲ್ಲರ್ ಮೋಕ್ಷಮೂಲನಾದ. ಹೀಗೆ ರಾಷ್ಟ್ರೀಯ ಚಳುವಳಿ ಆರಂಭವಾಗುವುದಕ್ಕೂ ಮುನ್ನವೇ ಭಾರತೀಯ ವೇದಾಂತದಿಂದ ತಮಗೆ ಒದಗಬಹುದಾದ ಪ್ರಯೋಜನವನ್ನು ಗುರುತಿಸಿದ ಸಾಮ್ರಾಜ್ಯವಾದಿಗಳು ಇಲ್ಲಿನ ಲೂಟಿಕೋರ ಶಕ್ತಿಗಳನ್ನು ಹೊಗಳಲು ಹೊರಟರು. ಅವರ ಕಾರ್ಯಸೂಚಿಗೆ ತಕ್ಕಂತೆ

ಆಧ್ಯಾತ್ಮಿಕ ಸಾಮ್ರಾಜ್ಯವಾದವು ಆರ್ಥಿಕ ಸಾಮ್ರಾಜ್ಯವಾದದ ಮತ್ತೊಂದು ರೂಪ. ಜರ್ಮನಿಯಲ್ಲಿ ಈ ವಾದ ಬೆಳೆದದ್ದೇ ಹೀಗೆ. ಆರ್ಯನ್ ಜನಾಂಗೀಯ ಅಹಂಕಾರ, ಅಮಿತ ಆತ್ಮಸ್ತುತಿಗಳ ಜೊತೆ ಜೊತೆಗೆ ಫಾಸಿಸ್ಟ್ ಚಿಂತನೆಯು ಜರ್ಮನಿಯಲ್ಲಿ ಜನಪ್ರಿಯತೆಯನ್ನು ಪಡೆಯಿತು. ಇಂಥ ಶಕ್ತಿಗಳ ನಿಜವಾದ ಉದ್ದೇಶವೆಂದರೆ ಸಾಮ್ರಾಜ್ಯ ವಿಸ್ತರಣೆ. ಭಾರತದಲ್ಲಿಯೂ ಸಹ ಇಂಥ ಗುರಿ ಸಾಧನೆಗೆ ಹೊರಟಿರುವವರ ಬೆನ್ನಿಗೆ ಇಲ್ಲಿನ ಅಧ್ಯಾತ್ಮ ನಿಂತಿರುವುದು ವಾಸ್ತವ.

ಮೂಲ
**ಟಿ. ರವಿಚಂದ್**

ಕನ್ನಡಕ್ಕೆ
**ನಗರಗೆರೆ ರಮೇಶ್**



ಭಾರತೀಯರ ಧಾರ್ಮಿಕ ಮನೋಧರ್ಮವನ್ನು ಅದರಲ್ಲೂ ವಿಶೇಷವಾಗಿ ಇಲ್ಲಿನ ಸಾಮಾಜಿಕ ವ್ಯವಸ್ಥೆಯ ಅತ್ಯಂತ ಪ್ರಮುಖ ಲಕ್ಷಣವಾದ ವರ್ಣಾಶ್ರಮ ಪದ್ಧತಿಯನ್ನು ಆದರ್ಶದ ಮಾದರಿ ಎಂದು ಪ್ರಚಾರ ಮಾಡಿದರು. ತಮ್ಮ ಶೋಷಣೆಯನ್ನು ಸುಗಮಗೊಳಿಸಿಕೊಳ್ಳಲು ಇಲ್ಲಿನ ಧರ್ಮದ ಮುಸುಕನ್ನು ಜಾಣತನದಿಂದ ಬಳಸಿದರು.

೧೯೪೭ರ ಅಧಿಕಾರ ಹಸ್ತಾಂತರದ ನಂತರವೂ ಸಹ ಇಲ್ಲಿಗೆ ಬಂದ ಸಾಮ್ರಾಜ್ಯವಾದಿಗಳು ಹಿಂದೂ ಧರ್ಮವನ್ನು ಬಳಸಿಕೊಂಡು ತಮ್ಮ ಸ್ವಾರ್ಥ ತುಂಬಿದ ಯೋಜನೆಗಳನ್ನು ಮುಂದುವರೆಸುತ್ತಿದ್ದಾರೆ. ಇವರುಗಳಲ್ಲಿ ಮುಖ್ಯವಾಗಿ ಅಮೆರಿಕನ್ ಸಾಮ್ರಾಜ್ಯವಾದಿಗಳು ಈ ಕೆಲಸವನ್ನು ಅತ್ಯಂತ ಅಚ್ಚುಕಟ್ಟಾಗಿ ನಡೆಸಿಕೊಂಡು ಹೋಗುತ್ತಿದ್ದಾರೆ. ಅದರ ಮೂಲಕ ತಮ್ಮ ಗೂಢಚಾರಿ ಕಾರ್ಯಕಲಾಪಗಳಿಗೂ ಯಾವುದೇ ಅಡಚಣೆ ಯಾಗದಂತೆ ಹುಷಾರಾಗಿದ್ದಾರೆ. ಹಾಗಾಗಿಯೇ ರಾಷ್ಟ್ರೀಯ ಸ್ವಯಂಸೇವಕ ಸಂಘ, ವಿಶ್ವ ಹಿಂದೂ ಪರಿಷತ್‌ನಂಥ ಕೋಮುವಾದಿ ಶಕ್ತಿಗಳು ಅಮೆರಿಕನ್ ಸಾಮ್ರಾಜ್ಯವಾದಿಗಳಲ್ಲಿ ಆಸಕ್ತರಾಗಿದ್ದಾರೆ. ಅಮೆರಿಕದಲ್ಲಿ ತಿರುಪತಿ ತಿರುಮಲ ದೇವಸ್ಥಾನ (ಟಿಟಿಡಿ) ನಡೆಸುವ ಹಿಂದೂ ಧಾರ್ಮಿಕ ಕಾರ್ಯಕ್ರಮಗಳಿಗೆ ಎಲ್ಲ ರೀತಿಯ ಪ್ರೋತ್ಸಾಹ ಸಿಗುತ್ತಿದೆ. ಶೋಷಕ ವರ್ಗಗಳಿಗೆ ಧರ್ಮದ ಹಂಗಿಲ್ಲ. ಯಾವುದೇ ಧರ್ಮವೇ ಆಗಲಿ, ಅದು ತಮ್ಮ ಆರ್ಥಿಕ ಲಾಭಕ್ಕೆ ಇಂಬುಕೊಡುವುದಾದರೆ, ತಮ್ಮ ಸಾಮ್ರಾಜ್ಯಶಾಹಿ ಹುನ್ನಾರಗಳಿಗೆ ಸಹಾಯಕವಾಗುವು ದಾದರೆ ಆ ಧರ್ಮಕ್ಕೆ ಇಂಥ ಶಕ್ತಿಗಳ ಬೆಂಬಲವು ಎಂದಿಗೂ ಲಭ್ಯ. ಇಲ್ಲಿ ಅವರಿಗೆ ಮುಖ್ಯವಾದದ್ದು ಧರ್ಮ, ಧಾರ್ಮಿಕತೆ ಅಲ್ಲ, ಅದರ ಮೂಲಕ ತಾವು ಪಡೆಯಬಹುದಾದ ಆರ್ಥಿಕ, ರಾಜಕೀಯ ಪ್ರಯೋಜನಗಳು ಮಾತ್ರ.

ಭಾರತೀಯ ಅಧ್ಯಾತ್ಮ ಹಾಗೂ ಧಾರ್ಮಿಕತೆಗಳು ಫಾಸಿಸ್ಟ್, ಸಾಮ್ರಾಜ್ಯವಾದಿ, ಸರ್ವಾಧಿಕಾರಿ ಸಿದ್ಧಾಂತಗಳಿಗೆ ಸರಿಯಾಗಿ ಹೊಂದಿಕೊಂಡಿದ್ದು, ಅವುಗಳಿಗೆ ಪ್ರೇರಣಾಶಕ್ತಿಯೂ ಆಗಿದೆ. ಜರ್ಮನಿಯ ಬೂರ್ಷ್ವಾ ತತ್ವಜ್ಞಾನಿ ಷೋಪೇನ್ ಹೋವರ್ ಉಪನಿಷತ್ತುಗಳಿಂದಲೇ ಪ್ರೇರೇಪಿತನಾಗಿ ಪಾಶ್ಚಿಮಾತ್ಯ ಭೌತವಾದವನ್ನು ತಿರಸ್ಕರಿಸಿ 'ಫಾಸಿಸ್ಟ್ ಸಿದ್ಧಾಂತ'ವನ್ನು ಪ್ರತಿಪಾದಿಸಿದನು. ಹಾಗಾಗಿಯೇ, ಎಂ. ಎನ್. ರಾಯ್ ಅಂಥವರು ಫಾಸಿಸ್ಟ್ ತತ್ವದ ತವರುಮನೆ ಭಾರತ ಎಂದು ಹೇಳಿರುವುದು. ತನ್ನ 'ಫಾಸಿಜಂ' ಎಂಬ ಕೃತಿಯಲ್ಲಿ ಎಂ. ಎನ್. ರಾಯ್ "ಸೈದ್ಧಾಂತಿಕವಾಗಿ ಭಾರತವು ಫಾಸಿಜಂಗೆ ತುಂಬ ಹತ್ತಿರವಾದದ್ದು. ಬಹುಸಂಖ್ಯೆಯ ಜನರು ಈ ಅಂಶವನ್ನು ಗುರುತಿಸಿಲ್ಲ. ಆಧುನಿಕ ಭಾರತದಲ್ಲಿಯೂ ಹಲವರು ಬುದ್ಧಿಜೀವಿಗಳು ಅಧ್ಯಾತ್ಮದ ಹೆಸರಿನಲ್ಲಿ ಬೋಧಿಸುತ್ತಿರುವುದು ಮೌಢ್ಯ ತುಂಬಿದ ಅಧ್ಯಾತ್ಮವಾದಿ ಫಾಸಿಸ್ಟ್ ತತ್ವವಲ್ಲದೆ ಬೇರೆಯಲ್ಲ" ಎಂದು ಹೇಳುತ್ತಾರೆ. ಹಲವರು ಭಾರತೀಯ ಚಿಂತಕರು ಭಾರತೀಯ ಆಧ್ಯಾತ್ಮಿಕತೆಯ ಈ ಫಾಸಿಸ್ಟ್ ಲಕ್ಷಣಗಳನ್ನು ಗಮನಿಸಿಲ್ಲ. ವಿವೇಕಾನಂದ, ದಯಾನಂದ ಸರಸ್ವತಿ, ಅರವಿಂದ, ರಾಧಾಕೃಷ್ಣನ್ ಮುಂತಾದ ತತ್ವಜ್ಞಾನಿಗಳು ತಮಗೆ ತಿಳಿಯದೆಯೇ ಆಧ್ಯಾತ್ಮಿಕ ಸಾಮ್ರಾಜ್ಯವಾದವನ್ನು ಪ್ರಚಾರ ಮಾಡಿದರು. ಜಗತ್ತಿನ ಎಲ್ಲ ದೇಶಗಳಿಗಿಂತಲೂ ಆಧ್ಯಾತ್ಮಿಕವಾಗಿ ಎತ್ತರದಲ್ಲಿರುವುದು ಭಾರತ ಎಂಬುದು ಇವರ ವಿಶ್ವಾಸ. ಈ ದಿನಗಳಲ್ಲಿ ಹಿಂದೂ ಕೋಮುವಾದಿಗಳು ಹರಡುತ್ತಿರುವ ಇಸ್ಲಾಂ ವಿರೋಧಿ ಭಾವನೆಗಳು ವಿವೇಕಾನಂದರ ಮಾತುಗಳಲ್ಲಿ ಅಥವಾ ಬರಹಗಳಲ್ಲಿ ಎಲ್ಲಿಯೂ ಕಂಡುಬರುವುದಿಲ್ಲ. ಅವರಲ್ಲಿ ಭಾರತೀಯ ಆಧ್ಯಾತ್ಮಿಕ ಪರಂಪರೆಯ ಬಗ್ಗೆ ಎಷ್ಟೇ ಮೆಚ್ಚುಗೆ ಇದ್ದರೂ, ಕೋಮುಸಾಮರಸ್ಯದ ಬಗೆಗಿನ ಅವರ ಬದ್ಧತೆ ಪ್ರಶ್ನಾತೀತವಾದದ್ದು. ವಿವೇಕಾನಂದರನ್ನು ಆಕಾಶಕ್ಕೆ ಎತ್ತಿ ಹಿಡಿಯುತ್ತಿರುವ ಹಿಂದೂಧರ್ಮ ಅನುಯಾಯಿಗಳು ಹಾಗೂ ಮುಸ್ಲಿಂ ವಿರೋಧಿ ಗಳು ಅವರು ಇಸ್ಲಾಂ ಧರ್ಮದ ಕುರಿತು ಹೇಳಿದ ಮಾತುಗಳನ್ನು ಗಮನಿಸಬೇಕು. ಅವರ ಪ್ರಕಾರ ಇಸ್ಲಾಂ, ಭಾರತದ ಐಕ್ಯತೆಗೆ ದ್ರೋಹಕಾರಿಯಾಗಿದೆ. "ನಮ್ಮ ಮಾತೃಭೂಮಿ ಎರಡು ಮಹಾನ್ ವ್ಯವಸ್ಥೆಗಳ ಕೂಡಿಕೆ – ಹಿಂದೂ ಧರ್ಮ ಹಾಗೂ ಇಸ್ಲಾಂ ಧರ್ಮ. ನಮಗಿಂದು ಬೇಕಾಗಿರುವುದು ವೇದಾಂತದ ಮಿದುಳು ಮತ್ತು ಇಸ್ಲಾಂನ ದೇಹ. ಈ ಎರಡು ಶಕ್ತಿಗಳು ಒಂದಾಗುವುದು ಮಹಾನ್ ಆಶಯ." (ವಿವೇಕಾನಂದರ ರಚನೆಗಳು : ಸಂಪುಟ ೬, ಅದ್ವೈತಾಶ್ರಮ, ಕಲಕತ್ತಾ)

ಮಹಾನ್ ಮಾನವತಾವಾದದ ಪ್ರತಿಪಾದಕರಾದ ಎಂ. ಎನ್. ರಾಯ್ ಭಾರತೀಯ ಆಧ್ಯಾತ್ಮಿಕತೆಯ ಬಗ್ಗೆ ಹೇಳುವುದು ಹೀಗೆ : "ನಮ್ಮ ಅಧ್ಯಾತ್ಮವು ಹಿಂದಿ ನಿಂದಲೂ ಅಗ್ರ ವರ್ಗಗಳ ಸೇವೆಯಲ್ಲಿಯೇ ನಿಂತಿದೆ. ಬೇರೆ ಬೇರೆ ಕಾಲಘಟ್ಟಗಳಲ್ಲಿ ಸಂದರ್ಭಕ್ಕೆ ತಕ್ಕಂತೆ ತನ್ನ ರೂಪ ಮತ್ತು ಭಾಷೆಯನ್ನು ಬದಲಾಯಿಸಿಕೊಳ್ಳುತ್ತದೆ. ಇಲ್ಲಿನ ಅತೃಪ್ತ ಜನರನ್ನು, ದಂಗೆ ಏಳಬಹುದಾದವ ರನ್ನು ಅಂಥ ಪ್ರಯತ್ನಗಳಿಂದ ವಿಮುಖರನ್ನಾಗಿಸಿದೆ. ಸಾಮ್ರಾಜ್ಯವಾದಿಗಳು ಕರುಣೆ ತೋರಿಸಿ ಸ್ವಲ್ಪಮಟ್ಟಿಗಿನ ಅಧಿಕಾರವನ್ನು ದಯಪಾಲಿಸಿದರೆ ಅದನ್ನೇ ಮಹಾ ಪ್ರಸಾದವೆಂದು ಸ್ವೀಕರಿಸುವ ಆಧ್ಯಾತ್ಮಿಕ ಭಾವನಾವಾದಿ ಗಳಾದ ನಮ್ಮ ರಾಷ್ಟ್ರೀಯ ಚಳುವಳಿಯ ಮುಖಂಡರು ಫಾಸಿಸ್ಟ್ ಆಚರಣೆಯ ಜತೆಗೇ ನಿಲ್ಲುತ್ತಾರೆ. ಫಾಸಿಸ್ಟ್‌ರನ್ನು ಉತ್ತೇಜಿಸಿದ ಆಧ್ಯಾತ್ಮಿಕ ತತ್ವಜ್ಞಾನದ ಜನ್ಮ ಭೂಮಿ ಭಾರತ."

ಈ ಅಧ್ಯಾತ್ಮವಾದಿಗಳ ಮತ್ತೊಂದು ಸುಳ್ಳು ಪ್ರಚಾರವಿದೆ. ಜಗತ್ತಿನ ಎಲ್ಲ ಸಮಸ್ಯೆಗಳಿಗೆ ಪರಿಹಾರ ನಮ್ಮ ದೇಶದ ಆಧ್ಯಾತ್ಮಿಕ ಸಂಸ್ಕೃತಿಯಲ್ಲಿ ಸಿಗುತ್ತದೆ ಎಂದು ಅವರು ಪ್ರಚಾರ ಮಾಡುತ್ತಾರೆ. ಹಿಂದೂ ಧರ್ಮ ಪ್ರಚಾರಕರ ಪ್ರಮುಖ ಲಕ್ಷಣವೆಂದರೆ ಆತ್ಮಸ್ತುತಿ. ಭಾರತವನ್ನು ಮೀರಿದ ದೇಶ, ಹಿಂದೂ ಧರ್ಮಕ್ಕಿಂತಲೂ ಮಿಗಿಲಾದ ಧರ್ಮ ಜಗತ್ತಿನಲ್ಲಿಯೇ ಎಲ್ಲಿಯೂ ಇಲ್ಲವೆನ್ನುವುದು ಇವರ ನಂಬಿಕೆ. ಎಲ್ಲ ತತ್ವಸಿದ್ಧಾಂತಗಳನ್ನು ನಾವು ಈಗಾಗಲೇ ತಿಳಿದುಕೊಂಡಿರುವುದರಿಂದ ಪರರಿಂದ ನಾವು ಕಲಿಯಬಹುದಾದಂಥ ವಿಷಯಗಳು ಏನೂ ಇಲ್ಲ ಎನ್ನುವುದು ಇವರ ನಿಲುವು. ಇದೇ ಧೋರಣೆಯನ್ನೇ ೧೯೨೭ರಲ್ಲಿ ಭಾರತೀಯ ಕಾರ್ಮಿಕ ಚಳುವಳಿಯಲ್ಲಿ ಪ್ರಮುಖ ಪಾತ್ರ ವಹಿಸಿದ ಫಿಲಿಪ್ ಸ್ಪ್ರಾಟ್ ತನ್ನ 'ಹಿಂದೂ ಕಲ್ಚರ್ ಆ್ಯಂಡ್ ಪರ್ಸನಾಲಿಟಿ' ಎಂಬ ಕೃತಿಯಲ್ಲಿ 'ನಾರ್ಸಿಸ್ಟ್' ಮನೋಧರ್ಮವೆಂದು ಕರೆದನು. ಆಸ್ಟ್ರಿಯನ್ ಮನಃಶಾಸ್ತ್ರಜ್ಞ ಸಿಗ್ಮಂಡ್ ಫ್ರಾಯಿಡ್ ಆತ್ಮ ಪ್ರತ್ಯಯದ ಪ್ರವೃತ್ತಿ ಇರುವವರನ್ನು ನಾರ್ಸಿಸಸ್ ಎಂದು ಕರೆದನು. ವಿವೇಕಾನಂದರಂಥವರಲ್ಲಿ ಇಂಥ ಮನಸ್ಥಿತಿ ಸ್ಪಷ್ಟವಾಗಿ ಕಾಣುತ್ತದೆ. ಅದರ ಪರಿಣಾಮವಾಗಿ ಬೆಳೆದು ಬಂದದ್ದೇ ಹಿಂದೂ ಧರ್ಮಾಂಧತೆ. ಆದರೆ ವಿವೇಕಾನಂದರು ಭಾರತೀಯ ಅಧ್ಯಾತ್ಮವನ್ನು ಎಷ್ಟೇ ಹೊಗಳಿದರೂ ಭಾರತೀಯ ತತ್ವಜ್ಞಾನಿಗಳಲ್ಲಿನ ವೈರುಧ್ಯ ಗಳನ್ನು ಸ್ಪಷ್ಟವಾಗಿ ಗುರುತಿಸಿ ವಿಮರ್ಶಿಸಿದ್ದಾರೆ. ಆಧುನಿಕ ಭಾರತದಲ್ಲಿ ಶಂಕರನ ಅದ್ವೈತಕ್ಕೆ ಮಾನ್ಯತೆ ತಂದುಕೊಟ್ಟ ವಿವೇಕಾನಂದರು ಶಂಕರನಲ್ಲಿನ ವೈರುಧ್ಯಗಳನ್ನು ಎತ್ತಿತೋರಿಸದೇ ಬಿಡಲಿಲ್ಲ. ಅದ್ವೈತದಲ್ಲಿನ 'ದ್ವೈತ'ದ ವೈರುಧ್ಯವನ್ನು ಬಯಲಿಗೆಳೆದಿದ್ದಾರೆ. 'ಬ್ರಹ್ಮಸೂತ್ರ ಭಾಷ್ಯ'ದಲ್ಲಿನ ಅಪಶೂದ್ರಾಧಿಕರಣದಲ್ಲಿ ಶಂಕರನ ತಾತ್ವಿಕ ಕಸರತ್ತನ್ನು ಕಟುವಿಮರ್ಶೆಗೆ ಗುರಿಮಾಡಿದ್ದಾರೆ. ಅದ್ವೈತಿಗಳೆನಿಸಿಕೊಂಡವರು ವರ್ಣ, ಜಾತಿಗಳನ್ನು ಒಪ್ಪಲು ಹೇಗೆ ಸಾಧ್ಯ ಎಂದು ಪ್ರಶ್ನಿಸಿ ಶಂಕರನಲ್ಲಿಯೇ ಹುದುಗಿದ್ದ ಬ್ರಾಹ್ಮಣ್ಯದ ಅಹಂಕಾರವನ್ನು ಎತ್ತಿತೋರಿದ್ದಾರೆ. ವಿವೇಕಾನಂದರ ಬರಹಗಳ ಏಳನೆಯ ಸಂಪುಟದಲ್ಲಿ ಈ ವಿವರಗಳನ್ನು ಕಾಣಬಹುದು.

ಆಧುನಿಕ ವೈಜ್ಞಾನಿಕ ಸಾಧನೆಗಳನ್ನು ನಿರ್ಲಕ್ಷಿಸಿ, ಪ್ರಾಚೀನ ಭಾರತದಲ್ಲಿಯೇ ಎಲ್ಲವೂ ಇತ್ತು ಎಂದು ಹೇಳುವುದು ಈ ಧೋರಣೆಯ ಮತ್ತೊಂದು ಲಕ್ಷಣ. ಇಂಥ ಧೋರಣೆಗಳು ನಮ್ಮ ದೇಶದಲ್ಲಿ ವರ್ಗ ಐಕ್ಯತೆಯನ್ನು ಅಸಾಧ್ಯವನ್ನಾಗಿಸಿ, ಜನರ ನಿಜವಾದ ಸಮಸ್ಯೆಗಳನ್ನು ಮುಸುಕುಗೊಳಿಸಿ ಆಧ್ಯಾತ್ಮಿಕ ಶ್ರೇಷ್ಠತೆಯ ಹೆಸರಿನಲ್ಲಿ ಜನರ ನಿಜವಾದ ಸಾಮಾಜಿಕಪ್ರಜ್ಞೆ ಜಾಗೃತವಾಗದಂತೆ, ಮಿಥ್ಯೆಗಳಲ್ಲಿಯೇ ಸಂತೋಷವನ್ನು ಕಂಡುಕೊಳ್ಳುವಂತೆ ಮಾಡುವುದರಲ್ಲಿ ಯಶಸ್ವಿಯಾಗಿದೆ.

ಇಂಥ ಅಭಿವೃದ್ಧಿ ವಿರೋಧಿ ಚಿಂತನೆಗಳಲ್ಲಿ ಪ್ರಮುಖವಾದದ್ದು ಕೃಷ್ಣ ಪ್ರಜ್ಞೆ; ಭಕ್ತಿಯ ಮುಸುಕಿನಲ್ಲಿ ಸಾಮ್ರಾಜ್ಯವಾದಿ ದೇಶಗಳ ಬೆಂಬಲಕ್ಕೆ ನಿಂತಿರುವ ಇಸ್ಕಾನ್ (ಅಂತರರಾಷ್ಟ್ರೀಯ ಶ್ರೀ ಕೃಷ್ಣ ಕಾನ್‌ಷಿಯಸ್‌ನೆಸ್)ಅನ್ನು ಬಂಗಾಳದ ಭಕ್ತಿ ವೇದಾಂತ ಪ್ರಭುಪಾದ ಸ್ವಾಮಿ ೧೯೫೦ರಲ್ಲಿ ಸ್ಥಾಪಿಸಿದರು. ಆರಂಭದಿಂದಲೂ

**ಅರಿತು**

ಅರಿತು

ಅರಿತುದ ಕಲಿತು

ಕಲಿತು

ಕಲಿತುದ ಮರೆತು ।

ಮರೆತುದ ಮರೆಸಿಕೊಂಡೆ ।

ಇರುತಿಹ ಹೊಣೆಗಾರಿಕೆಯ ನಿತ್ಯವು ।

ಮರೆಯದೆ ಅನುಸರಿಸುತ್ತಿರುವೆನು ॥

**ಕೀರಿಕ್ಕಾಡು ವನಮಾಲಾ ಕೇಶವ ಭಟ್ಟ**
ಕಾಸರಗೋಡು – ೬೭೧ ೫೫೩

ಈ ಸಂಸ್ಥೆಗೆ ಅಮೇರಿಕನ್ ಗೂಢಚಾರಿ ಸಂಸ್ಥೆಗಳ ಜತೆ ಸಂಬಂಧಗಳಿದ್ದು ಒಂದು ರೀತಿಯಲ್ಲಿ ಅಮೇರಿಕನ್ ಸಾಮ್ರಾಜ್ಯವಾದಿಗಳ ರಕ್ಷಣೆಯೇ ಈ ಸಂಸ್ಥೆಯ ಮುಖ್ಯ ಉದ್ದೇಶ ಎನ್ನಬಹುದು. ಕೃಷ್ಣ ಪ್ರಜ್ಞೆ ಎನ್ನುವುದು ಕೇವಲ ನೆಪ ಮಾತ್ರ. ನಾಸ್ತಿಕರು, ವಿಚಾರವಾದಿಗಳು ಇತ್ತೀಚಿನ ದಿನಗಳಲ್ಲಿ ನಡೆಯುತ್ತಿರುವ ಧಾರ್ಮಿಕ ಪುನರುಜ್ಜೀವನದ ಪ್ರಯತ್ನಗಳನ್ನು 'ಧಾರ್ಮಿಕ' ಮಾತ್ರ ಎಂದು ಪರಿಗಣಿಸಿ ಅದರ ವಿರುದ್ಧ ಮಾತ್ರ ಧ್ವನಿ ಎತ್ತಿದರೆ ಸಾಲದು. ಇಂದಿನ ಲೂಟಿಕೋರ ವ್ಯವಸ್ಥೆಗೂ ಧಾರ್ಮಿಕವೆಂದು ಕರೆಯಿಸಿಕೊಳ್ಳುವ ಸಂಘಟನೆಗಳಿಗೂ ನಡುವಿನ ನಂಟನ್ನು ಗುರುತಿಸಿ ಈ ಎರಡೂ ಶಕ್ತಿಗಳ ವಿರುದ್ಧ ಹೋರಾಟವನ್ನು ರೂಪಿಸದ ಹೊರತು ಈ ಹೋರಾಟಗಳು ಯಶಸ್ಸನ್ನು ಕಾಣುವುದಿಲ್ಲ. ನ್ಯಾಯಮೂರ್ತಿ ಚಿನ್ನಪ್ಪರೆಡ್ಡಿಯವರು ಹೇಳಿದಂತೆ, "ವರ್ಗ ಸಂಘರ್ಷದ ಭಾಗವಾಗಿಯೇ ಇಂಥ ಶಕ್ತಿಗಳ ವಿರುದ್ಧದ ಹೋರಾಟ ನಡೆಯಬೇಕು" ಆಗ ಮಾತ್ರ ಇಂದಿನ ಶೋಷಕ ವ್ಯವಸ್ಥೆಯನ್ನೇ ಮುಂದುವರೆಸಿಕೊಂಡು ಹೋಗಬೇಕೆಂದು ಯತ್ನಿಸುವ ಭಾರತದ ದಲ್ಲಾಳಿ ಬೂರ್ಷ್ವಾ ವರ್ಗಗಳ ಹುನ್ನಾರಗಳನ್ನು ಸೋಲಿಸಲು ಸಾಧ್ಯ. ಆದರೆ ಅಭಿವೃದ್ಧಿಯ ವಿರೋಧಿಗಳಿಗೆ ವಿಜ್ಞಾನ ಸಂಪೂರ್ಣವಾಗಿ ಬೆಳೆಯುವುದು ಹಿಡಿಸುವುದಿಲ್ಲ. ಹಾಗಾಗಿ ವೈಜ್ಞಾನಿಕ ಪ್ರಗತಿಯನ್ನು ದಾರಿ ತಪ್ಪಿಸಿ, ಅದಕ್ಕೆ ಇಲ್ಲದ ಧಾರ್ಮಿಕ ಬಣ್ಣವನ್ನು ಬಳಿದು (ಸ್ವಾಮಿ ಚಿನ್ಮಯಾನಂದ ಇದರಲ್ಲಿ ಎತ್ತಿದ ಕೈ) ಜನರನ್ನು ತಪ್ಪುದಾರಿಗೆ ಎಳೆಯುತ್ತಾರೆ. ಅದರ ಭಾಗವಾಗಿಯೇ ಭಕ್ತಿ ವೇದಾಂತ ಬುಕ್‌ಟ್ರಸ್ಟ್ ಸ್ವರೂಪ ದಾಮೋದರ ದಾಸ್ ಎನ್ನುವವರು ಬರೆದ 'ದಿ ಸೈಂಟಿಫಿಕ್ ಬೇಸಿಸ್ ಆಫ್ ಕೃಷ್ಣ ಕಾನ್‌ಷಿಯಸ್‌ನೆಸ್' ಎಂಬ ಕೃತಿಯನ್ನು ಎರಡು ಲಕ್ಷ ಪ್ರತಿಗಳಿಗಿಂತಲೂ ಹೆಚ್ಚಿನ ಸಂಖ್ಯೆಯಲ್ಲಿ ಮುದ್ರಿಸಿ ಹಂಚಿ ಜನರಲ್ಲಿ ಹುಸಿ ವೈಜ್ಞಾನಿಕತೆಯನ್ನು ತುಂಬುತ್ತಿದ್ದಾರೆ. ಮೌಢ್ಯವನ್ನು ಪೋಷಿಸುತ್ತಿದ್ದಾರೆ. ಡಾರ್ವಿನ್ನನ ವಿಕಾಸವಾದ, ನ್ಯೂಟನ್ನನ ಗುರುತ್ವಾಕರ್ಷಣ ಸೂತ್ರಗಳನ್ನು ಇವರು ಕಪೋಲಕಲ್ಪಿತ ಚಿಂತನೆಗಳೆಂದೇ ಪ್ರತಿಬಿಂಬಿಸಿ ಶ್ರೀ ಕೃಷ್ಣ ಮಾತ್ರ ವಿಶ್ವದಲ್ಲಿನ ವಿಕಾಸ ಪ್ರಕ್ರಿಯೆಯ ಕಾರಣವೆಂದೂ ಅವನೇ ಏಕೈಕ ಮಹಾನ್ ವಿಜ್ಞಾನಿಯೆಂದೂ ಸುಳ್ಳುಗಳನ್ನೇ ಜನರಲ್ಲಿ ಬಿತ್ತುತ್ತಿದ್ದಾರೆ. ಭಗವದ್ಗೀತೆಯ ರೀತಿಯ ಧಾರ್ಮಿಕ ಗ್ರಂಥಗಳನ್ನು ಈ ಉದ್ದೇಶಕ್ಕಾಗಿ ಬಳಸಿಕೊಳ್ಳುತ್ತಿದ್ದಾರೆ. ಸುಶಿಕ್ಷಿತರೆನಿಸಿಕೊಂಡವರೂ ಸಹ ತಮ್ಮ ಧರ್ಮದ ಬಗೆಗಿನ ಅಂಧಾಭಿಮಾನದಿಂದಾಗಿ ಈ ಹಸಿ ಸುಳ್ಳುಗಳನ್ನು ನಿಜ ಎನ್ನುತ್ತಾರೆ. 'ಆಹಾ! ನಮ್ಮ ಧರ್ಮ ಅದೆಷ್ಟು ಶ್ರೇಷ್ಠವಾದದ್ದು' ಎಂದು ರೋಮಾಂಚಿತರಾಗುತ್ತಿದ್ದಾರೆ. ಕುತರ್ಕವೇ ತರ್ಕವಾಗಿ, ಅಬದ್ಧಗಳೇ ಮಹಾನ್ ತತ್ವಗಳ ರೂಪದಲ್ಲಿ ಇವರ ಗ್ರಂಥಗಳಲ್ಲಿ ಕಾಣಿಸಿಕೊಳ್ಳುತ್ತವೆ. ಇವುಗಳನ್ನು ಪ್ರಜ್ಞಾಪೂರ್ವಕವಾಗಿ ತಿರಸ್ಕರಿಸದಿದ್ದಲ್ಲಿ ಎಂಥವರಾದರೂ ಈ ಚಿಂತನೆಗಳ ಮೋಡಿಗೆ ಒಳಗಾಗುವ ಅಪಾಯವಿದೆ. ವರ್ಣಾಶ್ರಮ ಧರ್ಮದ ಪುನರುದ್ಧರಣ, ವಿಜ್ಞಾನದ ವಿರೋಧ ಇಂಥ ಮೂಢರ ಘೋಷಣೆಗಳಾಗಿ ಮೊಳಗುತ್ತಿವೆ. ಇವರು ಸಾಮ್ರಾಜ್ಯವಾದಿ ಬಂಡವಾಳವಾದಿ ಹಾಗೂ ಊಳಿಗಮಾನ್ಯ ಶಕ್ತಿಗಳ ಜತೆ ಕೈ ಜೋಡಿಸಿ ತಮ್ಮ ವರ್ಗದ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳುತ್ತಾರೆ. ಇಂಥ ಹಿನ್ನೆಲೆಯಲ್ಲಿ ಕೇವಲ ಭಾವನಾವಾದಿ ಸುಧಾರಣೆಗಳು ಘೋಷಣೆಯಾಗಿ ಉಳಿಯಬಲ್ಲವು ಮಾತ್ರ. ಇಂಥ ಮಾತುಗಳು ಕೆಲವು ಬಾರಿ ಪ್ರಜಾತಾಂತ್ರಿಕ ಶಕ್ತಿಗಳ ಬೆಳವಣಿಗೆಗೂ ಅಡ್ಡಿಯನ್ನುಂಟುಮಾಡಬಹುದು. ಆಧ್ಯಾತ್ಮಿಕ ಸಾಮ್ರಾಜ್ಯ ವಾದವನ್ನು ಎದುರಿಸಬೇಕೆಂದರೆ ವರ್ಗ ಸಂಘರ್ಷದ ಅಗತ್ಯವನ್ನು ಮನಗಂಡು ತಕ್ಷಣದ ವೈರಿಯನ್ನು ಗುರುತಿಸಿ ಅಂಥ ಶಕ್ತಿಗಳ ವಿರುದ್ಧ ಕಾದಾಡುವ ಶಕ್ತಿಗಳ ಜತೆ ಕೈಜೋಡಿಸುವುದು ಅತ್ಯಗತ್ಯ.

ಆಧ್ಯಾತ್ಮಿಕ ಸಾಮ್ರಾಜ್ಯವಾದವು ಆರ್ಥಿಕ ಸಾಮ್ರಾಜ್ಯವಾದದ ಮತ್ತೊಂದು ರೂಪ. ಜರ್ಮನಿಯಲ್ಲಿ ಈ ವಾದ ಬೆಳೆದದ್ದೇ ಹೀಗೆ. ಆರ್ಯನ್ ಜನಾಂಗೀಯ ಅಹಂಕಾರ, ಅಮಿತ ಆತ್ಮಸ್ತುತಿಗಳ ಜೊತೆ ಜೊತೆಗೆ ಫಾಸಿಸ್ಟ್ ಚಿಂತನೆಯು ಜರ್ಮನಿಯಲ್ಲಿ ಜನಪ್ರಿಯತೆಯನ್ನು ಪಡೆಯಿತು. ಇಂಥ ಶಕ್ತಿಗಳ ನಿಜವಾದ ಉದ್ದೇಶ ಸಾಮ್ರಾಜ್ಯ ವಿಸ್ತರಣೆ. ಭಾರತದಲ್ಲಿಯೂ ಸಹ ಇಂಥ ಗುರಿ ಸಾಧನೆಗೆ ಹೊರಟಿರುವವರ ಬೆನ್ನಿಗೆ ಇಲ್ಲಿನ ಅಧ್ಯಾತ್ಮ ನಿಂತಿರುವುದು ವಾಸ್ತವ.

ಕೃಷ್ಣ ಪ್ರಜ್ಞೆಯ ಹುಟ್ಟು ಹಾಗೂ ಹರಡುವಿಕೆಗಳ ಹಿಂದೆ ಇರುವವರು (ಪಾಶ್ಚಿಮಾತ್ಯ ಸಾಮ್ರಾಜ್ಯಶಾಹಿಗಳು) ಅಮೇರಿಕ ಹಾಗೂ ಇಂಗ್ಲೆಂಡ್‌ನಂಥ ದೇಶಗಳಲ್ಲಿಯೂ ಈ ಪ್ರಜ್ಞೆಯನ್ನು ಬೆಳೆಸಿಕೊಂಡು ಭಾರತೀಯ ಅಧ್ಯಾತ್ಮಕ್ಕೆ ಇನ್ನೂ ಕೆಲವು ಮಿಥ್ಯೆಗಳನ್ನು ಜತೆಗೂಡಿಸಿ ಜಾಗತಿಕ ವಿದ್ಯಮಾನವನ್ನಾಗಿಸಲು ಹೊರಟಿದ್ದಾರೆ. ಹರೇ ರಾಮ, ಹರೇ ಕೃಷ್ಣ ಎಂದು ಭಜನೆ ಮಾಡುತ್ತಾ ಭಕ್ತಿಪರವಶರಾಗಿ ನೃತ್ಯ ಮಾಡುತ್ತಾ ಬೀದಿ ಬೀದಿಗಳಲ್ಲಿ ಸಾಗುವ ಬಿಳಿಯರನ್ನು ಕಂಡ ನಾವು "ಬಿಳಿಯರೇ ನಮ್ಮ ಶ್ರೇಷ್ಠತೆಯನ್ನು ಗುರ್ತಿಸಿ ನಮ್ಮ ಧರ್ಮವನ್ನು ಪಾಲಿಸಬೇಕಾದರೆ, ನಾವು ನಂಬದಿರುವುದೇ!" ಎಂದು ಗೊಂದಲಕ್ಕೆ ಒಳಗಾಗುತ್ತೇವೆ. ಈ ಭಜನೆಗಳ ನೃತ್ಯಗಳ ಹಿಂದಿನ ಸಂಚುಗಳನ್ನು ಅರ್ಥ ಮಾಡಿಕೊಳ್ಳಲಾಗದ ಸಾಮಾನ್ಯಜನ ಇವುಗಳಿಗೆ ಮನಸೋತಿರುವುದು ಆಶ್ಚರ್ಯದ ಸಂಗತಿಯೇನಲ್ಲ. ಅವರು ಮುಗ್ಧರು, ಆದರೆ ಸರ್ಕಾರಗಳೇ ಇಂಥ ಶಕ್ತಿಗಳನ್ನು ಬೆಂಬಲಿಸಿ, ಅವರಿಗೆ ಎಲ್ಲ ರೀತಿಯ ನೆರವನ್ನು ನೀಡುವುದನ್ನು ಹೇಗೆ ಅರ್ಥ ಮಾಡಿಕೊಳ್ಳಬೇಕು? ಇಂಥ ಶಕ್ತಿಗಳ ವಿಜೃಂಭಣೆಯನ್ನು ಕೇವಲ ಕರಪತ್ರಗಳನ್ನು ಹರಡುವುದರ ಮೂಲಕ ಅಥವಾ ಪ್ರತಿಭಟನಾ ಸಭೆಗಳ ಮೂಲಕ ಎದುರಿಸುವುದು ಸಾಧ್ಯವಿಲ್ಲ. ಸರ್ಕಾರಗಳ ನೆರವಿಲ್ಲದೆಯೇ ಈ ಸಂಸ್ಥೆಗಳು ಕೋಟ್ಯಂತರ ರೂಪಾಯಿಗಳನ್ನು ಸಂಪಾದಿಸುವುದು ಹೇಗೆ ಸಾಧ್ಯ? ಅಂತರರಾಷ್ಟ್ರೀಯ ಕೃಷ್ಣ ಪ್ರಜ್ಞೆಯ ಸಂಘಟನೆಯವರು ಬಂಗಾಳದ ಮಾಯಾಪುರದ ವೇದ್ ನಗರದಲ್ಲಿ ದೇವಾಲಯದ ನಿರ್ಮಾಣಕ್ಕಾಗಿ ಮೂರು ನೂರು ಕೋಟಿಗಳ ಯೋಜನೆಯನ್ನು ಹಾಕಿಕೊಂಡಿದ್ದಾರೆ. ಇಷ್ಟು ಭಾರೀ ಮೊತ್ತದ ಹಣ ಇವರಿಗೆ ಎಲ್ಲಿಂದ ಬರುತ್ತದೆ? ಈ ಆಶ್ರಮಗಳ ಬೃಹತ್ ಆದಾಯಗಳ ಮೂಲಗಳನ್ನು ಹುಡುಕದ ಸರ್ಕಾರಗಳು ನಿಜವಾದ ಉದ್ದೇಶವನ್ನೂ ತಿಳಿಯಬೇಕಾಗಿದೆ. ಇದು ಕೇವಲ ಧರ್ಮಗಳ ವಿರೋಧವಲ್ಲ. ಆಳುವ ವರ್ಗಗಳು ತಮ್ಮ ಅಧಿಕಾರವನ್ನು ಕಾಪಾಡಿಕೊಳ್ಳಲು ಇಂಥ ದೇವಾಲಯಗಳ, ಆಶ್ರಮಗಳ ಸಂಸ್ಕೃತಿಯನ್ನು ಪೋಷಿಸುತ್ತವೆ. ಧಾರ್ಮಿಕ ಪುನರುಜ್ಜೀವನವಾದವು ಪಾಶ್ಚಿಮಾತ್ಯ ಸಾಮ್ರಾಜ್ಯವಾದಿಗಳ ಸಹಾಯಕ್ಕೆ ನಿಂತಿದೆ.

ಇಂಥ ಸಂದರ್ಭದಲ್ಲಿ ಫಾಸಿಸ್ಟ್, ಧಾರ್ಮಿಕ ಶಕ್ತಿಗಳ ವಿರೋಧವಾಗಿ ನಡೆಯುವ ಹೋರಾಟ ಸಾಮ್ರಾಜ್ಯವಾದಿ ಊಳಿಗಮಾನ್ಯ ಶಕ್ತಿಗಳಿಗೆ ಎದುರಾಗಿ ನಡೆಯುವ ಪ್ರಜಾತಾಂತ್ರಿಕ ಚಳುವಳಿಯ ಜತೆ ಸೇರಿ ಮುಂದುವರೆದರೆ ಮಾತ್ರ ಆ ಶಕ್ತಿಗಳನ್ನು ಸೋಲಿಸಲು ಸಾಧ್ಯ. ಈ ರೀತಿ ಮಾಡುವುದರಿಂದ ಮಾತ್ರ ಆಧ್ಯಾತ್ಮಿಕ ಸಾಮ್ರಾಜ್ಯವಾದದ ಭಾಗವಾದ ಕೃಷ್ಣ ಪ್ರಜ್ಞೆ ಎನ್ನುವ ಮೌಢ್ಯವನ್ನು ಕಿತ್ತೊಗೆಯಲು ಸಾಧ್ಯ. ಜಾಗತಿಕವಾಗಿ ೪೦ ದೇಶಗಳಲ್ಲಿ ೨೫೦ ಕೇಂದ್ರಗಳನ್ನು ನಡೆಸುತ್ತಿರುವ ಇಸ್ಕಾನ್‌ನನ್ನು ಕೇವಲ ಧಾರ್ಮಿಕ ಪುನರುಜ್ಜೀವನದ ವಿರುದ್ಧದ ಹೋರಾಟದ ಮೂಲಕ ಮಣಿಸಲು ಆಗದು. ವಿಚಿತ್ರವೆಂದರೆ ಎಡಪಕ್ಷಗಳು ಅಧಿಕಾರದಲ್ಲಿರುವ ಬಂಗಾಳದಲ್ಲಿಯೂ ಇಂಥ ಜನ ವಿರೋಧಿ ಶಕ್ತಿಗಳು ತಲೆ ಎತ್ತಿವೆ. ಇದಕ್ಕೆ ದಾರಿ ಮಾಡಿಕೊಟ್ಟ ಸರ್ಕಾರವನ್ನು ಎಡಪಕ್ಷದ ಸರ್ಕಾರ ಎಂದು ಕರೆಯುವುದಕ್ಕೆ ಮನಸುಬಾರದು. ಮೇಲಾಗಿ ಸರ್ಕಾರದ ಕಾರ್ಮಿಕ ಸಂಘಟನೆಗಳ ನಾಯಕರು ಸಹ ಈ ಕೇಂದ್ರಗಳಿಗೆ ಭೇಟಿ ನೀಡುತ್ತಾರೆಂದರೆ ಅವರ ತಾತ್ವಿಕಬದ್ಧತೆಯೇ ಪ್ರಶ್ನಾರ್ಹವಾಗುತ್ತದೆ. ಬಹುರಾಷ್ಟ್ರೀಯ ಸಂಸ್ಥೆಗಳಿಗೆ ಆಹ್ವಾನ ನೀಡಿದ ಈ ಪಕ್ಷದ ಸರ್ಕಾರ ಇಂಥ ಶಕ್ತಿಗಳ ಎದುರು ನಿಲ್ಲುತ್ತದೆ ಎನ್ನುವುದೇ ಅನುಮಾನದ ಸಂಗತಿ. ಸಂಸದೀಯ ರಾಜಕಾರಣವನ್ನೇ ತಮ್ಮ ರಾಜಕೀಯ ಯೋಜನೆಯ ಅತಿಮುಖ್ಯ ಭಾಗವನ್ನಾಗಿಸಿಕೊಂಡಿರುವ ಈ ಪಕ್ಷಗಳು ಕೃಷ್ಣ ಪ್ರಜ್ಞೆಗೆ ತಮ್ಮ ಬೆಂಬಲವನ್ನು ಪ್ರದರ್ಶಿಸುವುದರ ಮೂಲಕ ಬದ್ಧತಾರಾಹಿತ್ಯವನ್ನು ಬಯಲುಗೊಳಿಸಿವೆ.

ಹಾಗಾಗಿ ಪುನರುಜ್ಜೀವನವಾದದ ಸಾಮ್ರಾಜ್ಯವಾದದ ವಿರೋಧದ ಹೋರಾಟವು ಈ ಎಡಪಕ್ಷಗಳ ರಾಜಕೀಯದ ವಿರುದ್ಧ ಸಹ ನಡೆಯಬೇಕಾಗಿದೆ. ಆಗ ಮಾತ್ರ ರಾಷ್ಟ್ರದ ನಿಜವಾದ ಅಭಿವೃದ್ಧಿ ಸಾಧ್ಯ.

*('ಪ್ರಜಾಸಾಹಿತಿ' ತೆಲುಗು ಸಾಹಿತ್ಯ ಮಾಸಪತ್ರಿಕೆಯ ೧೯೮೪ರ ನವೆಂಬರ್ ಸಂಚಿಕೆಯಲ್ಲಿ ಪ್ರಕಟವಾದ ಲೇಖನವು ೨೦೧೯ರ ಆಗಸ್ಟ್ ಸಂಚಿಕೆಯಲ್ಲಿ ಪುನರ್ಮುದ್ರಣಗೊಂಡಿದೆ.)*

ಮೂಲ : **ಟಿ. ರವಿಚಂದ್;** ಕನ್ನಡಕ್ಕೆ : **ನಗರಗೆರೆ ರಮೇಶ್**
ನಂ. ೩೬೬, ೮ನೇ ಕ್ರಾಸ್, ೮ನೇ ಮೈನ್, ಪದ್ಮನಾಭನಗರ
ಬೆಂಗಳೂರು – ೫೬೦ ೦೭೦

# ಕೋತಿಗಳು

ತೆಲುಗು ಮೂಲ : ಡಾ॥ ತುಮ್ಮಲ ರಾಮಕೃಷ್ಣ
ಕನ್ನಡಕ್ಕೆ : ಕುಂ. ವೀರಭದ್ರಪ್ಪ




**ಕೋ**ತಿಗಳು ಕೋತಿಗಳನ್ನೇ ಹೋಲುತ್ತಿದ್ದವು. ಆದರೆ ಅವು ಸಾಧಾರಣ ಕೋತಿಗಳಿಗಿಂತ ಕಪ್ಪಗಿದ್ದವು. ಮುಸ್ಯಗಳೆಂದೇ ಭಾವಿಸಿದರು. ಅವುಗಳ ಮೂಲ, ಬಂದ ಕಾರಣ ತಿಳಿಯುವುದು ಸುಲಭವಿರಲಿಲ್ಲ. ಪ್ರಾಣಿ ಅಧ್ಯಯನ ವಿಭಾಗ ಈ ಕುರಿತು ನಿರಂತರ ಸಂಶೋಧನೆ ನಡೆಸಿ ತೀರ್ಮಾನಕ್ಕೆ ಬಂದಿತು. ಇವುಗಳ ಮೂಲ ಆಫ್ರಿಕಾ ಎಂದೂ ಅಲ್ಲಿಂದ ಅಮೇರಿಕಾ ಮತ್ತು ಏಷ್ಯಾ ಖಂಡದ ದೇಶಗಳಿಗೆ ವಲಸೆ ಹೋಗಿರಬಹುದು, ಅಥವಾ ಕಂಡರಾಗದ ಚೀನಾ ದೇಶ ನಮ್ಮ ದೇಶಕ್ಕೆ ಅವುಗಳನ್ನು ಸಾಗಿಸಿರಲೂಬಹುದೆಂದು ವರದಿ ಸಂದೇಹಿಸಿತು. ಇನ್ನೊಂದು ಸಂಶೋಧನಾ ಸಂಸ್ಥೆ ನೆರೆರಾಷ್ಟ್ರ ಪಾಕಿಸ್ತಾನದ ಕಡೆ ಬೆರಳು ಮಾಡಿತು. ಮೂಲ ಏನೇ ಇದ್ದರೂ ಕೋತಿಗಳು ಭೌತಿಕವಾಗಿ ವಿಲಕ್ಷಣವಾಗಿದ್ದವು. ತಲೆ ಚಿಕ್ಕದಿದ್ದರೆ ಬಾಲ ಅಗತ್ಯಕ್ಕಿಂತ ಹೆಚ್ಚು ಉದ್ದವಿತ್ತು. ಒಮ್ಮೊಮ್ಮೆ ಸ್ವಂತ ಕಾಲ ಮೇಲೆ ನಿಂತು ಮನುಷ್ಯರನ್ನು ನೆನಪಿಸುತ್ತಿದ್ದವು. ಗುಂಪು ಗುಂಪಾಗಿ ಕಟ್ಟಡಗಳ ಮೇಲೆ ಓಡಾಡಿದವು. ಮರದಿಂದ ಮರಕ್ಕೆ ಜಿಗಿದಾಡಿದವು. ಅಪಾರ್ಟ್‌ಮೆಂಟುಗಳ ಮುಂದೆ ಇಳಿಬಿಟ್ಟಿರುತ್ತಿದ್ದ ಮಹಿಳೆಯರ ಉಡುಪುಗಳನ್ನು ಹರಿದು ದಾಂಧಲೆ ಎಬ್ಬಿಸಿದವು. ಉದಾರ ಸ್ವಭಾವದ ಕೆಲವು



ಮಂಗಗಳು ಮಹಿಳೆಯರ ಬಣ್ಣಬಣ್ಣದ ಉಡುಪುಗಳನ್ನು ಧರಿಸಿ ಬಿನ್ನಾಣದಿಂದ ವಿಹರಿಸಿದವು. ನಗರಗಳ ಬೀದಿಗಳಲ್ಲಿ ಕವಾಯತು ಆರಂಭಿಸಿದವು. ಅವುಗಳ ಬೀಭತ್ಸಕಾರಿ ವರ್ತನೆಗೆ ನಗರಗಳಲ್ಲಿನ ಬಲಿಷ್ಠ ಶ್ವಾನಗಳು ಹೆದರಿದವು. ಎಲ್ಲೆಂದರಲ್ಲಿ ಅವೇ. ಹೀಗಾಗಿ ಮಕ್ಕಳು ಹಿರಿಯರು ರಸ್ತೆಗಳಲ್ಲಿ ಕಾಣಿಸಿಕೊಳ್ಳದೆ ಮನೆಯಲ್ಲಿ ಅಡಗಿದವು.

ಕೋತಿಗಳ ಕಡಿತದ ನಂಜಿನಿಂದ ವಿಲಕ್ಷಣ ಸಾಂಕ್ರಾಮಿಕ ವ್ಯಾಧಿ ವ್ಯಾಪಿಸಿತು. ಅಲ್ಲಲ್ಲಿ ಇದ್ದಕ್ಕಿದ್ದಂತೆ ಅಕಾಲ ಮೃತ್ಯು ಸಂಭವಿಸಿತು, ಆಸ್ಪತ್ರೆಗಳು ರೋಗಿಗಳಿಂದ ತುಂಬಿದವು. ಕೆಲವು ರೋಗಿಗಳು ನಂಜು ಉಲ್ಬಣಿಸಿ ಕೋತಿಗಳಂತೆ ವರ್ತಿಸಲಾರಂಭಿಸಿದರು. ಕೆಲವು ಕಡೆ ಕೋತಿಗಳು ಆಸ್ಪತ್ರೆಗಳನ್ನು ಪ್ರವೇಶಿಸಿ ರೋಗಿಗಳ ಆರೋಗ್ಯ ಪರಾಂಬರಿಸಿದವೆಂಬ, ಅವೇ ಸ್ಟೆಥೆಸ್ಕೋಪ್ ಧರಿಸಿ ಥೇಟ್ ಡಾಕ್ಟರುಗಳಂತೆ, ಔಷಧಿ ಮಾತ್ರೆ ವಿತರಿಸಲಾರಂಭಿಸಿದವೆಂಬ, ಅಲ್ಲಲ್ಲಿನ ವೈದ್ಯಕೀಯ ಪರಿಕರಗಳನ್ನು ಧ್ವಂಸ ಮಾಡಲಾರಂಭಿಸಿವೆ ಎಂಬ ವದಂತಿ ಹರಡಿತು. ಇವೇನೆ ಇರಲಿ, ಕೋತಿಗಳ ನಂಜು ದೇಶದಾದ್ಯಂತ ವ್ಯಾಪಿಸಿತು. ದೇಶದ ಪ್ರಜೆಗಳು, ವಿವಿಧ ರಂಗಗಳಲ್ಲಿನ ವಿಜ್ಞಾನಿಗಳು, ರಾಜಕಾರಣಿಗಳು ಕೋತಿಗಳ ಕುರಿತು ಚರ್ಚಿಸಲಾರಂಭಿಸಿದರು, ಶಾಸನ ಸಭೆ, ಲೋಕಸಭೆಗಳಲ್ಲೂ ಇದೇ ವಿಷಯ ಕುರಿತು ಚರ್ಚೆ ನಡೆಯಿತು. ಒಟ್ಟಾರೆ ಕೋತಿಗಳು ದೇಶದ ಮಾನಸಿಕಸ್ಥಿತಿಯನ್ನು ಅಲ್ಲೋಲ ಕಲ್ಲೋಲಗೊಳಿಸಿದವು. ಅವುಗಳಿಂದ ದೇಶದ ರಕ್ಷಣಾವ್ಯವಸ್ಥೆ ಹದಗೆಟ್ಟಿತು.

✴ ✴ ✴

ದೇಶದ ಸ್ಥಳೀಯ ಪ್ರಭುತ್ವ ಅವುಗಳನ್ನು ಓಡಿಸಲು ದೃಢನಿಶ್ಚಯ ಕೈಗೊಂಡಿತು. ಅದಕ್ಕೆಂದೇ ಸ್ವಯಂಸೇವಕರ ಪಡೆಯನ್ನು ನಿಯೋಜಿಸಿತು, ಪಡೆಯ ಸದಸ್ಯರು ವಿವಿಧ ಮಾರಕಾಯುಧಗಳನ್ನು ಹಿಡಿದು ಅವುಗಳ ವಿರುದ್ಧ ಯುದ್ಧ ಸಾರಿದರು. ಅಲ್ಲಲ್ಲಿ ಪಟಾಕಿಗಳನ್ನು ಸ್ಫೋಟಿಸಿದರು, ರಣವಾದ್ಯಗಳನ್ನು ಮೊಳಗಿಸಿ ಭೀಕರ ಸದ್ದು ಮಾಡಿದರು. ಆದರೆ ಅದಾವುದೂ ಕೋತಿಗಳ ಮೇಲೆ ಲವಲೇಶವೂ ಪರಿಣಾಮ ಬೀರಲಿಲ್ಲ. ಕೆಲವು ಕಡೆ ಕೋತಿಗಳು ಕಸಿದುಕೊಂಡಿದ್ದ ಕೋಲು ಲಾಠಿಗಳನ್ನು ಪ್ರತಿಭಟನಾಕಾರರ ವಿರುದ್ಧ ಝಳಪಿಸಿದವು. ಅವೇ ಪಟಾಕಿಗಳನ್ನು ಅವರತ್ತ ಎಸೆದವು ಎಂದ ಬಳಿಕ ಕೇಳುವುದೇನುಂಟು! ಎಲ್ಲಿಂದಲೋ ಕಾಲೇಜು ವಿದ್ಯಾರ್ಥಿಗಳ ಬಹುದೊಡ್ಡ ಗುಂಪು ಆಗಮಿಸಿತು. ಕೋತಿಗಳು ಆ ಗುಂಪುಗಳೊಂದಿಗೆ ಬೆರೆತವೋ ಗುಂಪುಗಳೇ ಅವುಗಳೊಂದಿಗೆ ಬೆರೆತವೊ! ಅರ್ಥವಾಗಲಿಲ್ಲ. ಅವೆಲ್ಲ ಆ ಕ್ಷಣ ದ್ವಿಪಾದಿಗಳಾಗಿ ಪರಿವರ್ತನೆಗೊಂಡಿದ್ದು ಅದಕ್ಕೆ ಕಾರಣ. ಆ ಗುಂಪಿನ ಒಡಲಿಂದ ಮೋಸ, ಭ್ರಷ್ಟಾಚಾರ, ಹಾಲು, ನೀರು ಇವೇ ಮೊದಲಾದ ವಸ್ತು ನಾಮವಾಚಕಗಳೂ, ದುರ್ಗಮ್ಮ, ಚೌಡಮ್ಮ, ಶಾಂಭವಿ, ಶಿವ, ರಾಮ, ಕೃಷ್ಣ ಇವೇ ಮೊದಲಾದ ನಾಮವಾಚಕಗಳೂ, ಹಠಾವ್, ಬಚಾವ್, ಗರೀಬು, ನವಾಬು ಇವೇ ಮೊದಲಾದ ಅರ್ಥವಾಗದ ಪದಗಳೂ ಕೇಳಿಬರಲಾರಂಭಿಸಿದವು.

ಮನುಷ್ಯರ ನಡುವೆ ನಿಂತಿದ್ದ ಕೋತಿಗಳು ಎಲ್ಲರಂತೆ ಅವು ಸಹ ಕೇಳಿಸಿಕೊಂಡವು, ಆದರೆ ಆ ಪದಗಳು ಅರ್ಥವಾಗಲಿಲ್ಲ. ಅಷ್ಟರಲ್ಲಿ ಯಾರೋ

ಕಲ್ಲೆಸೆದರೆಂಬ ಕಾರಣಕ್ಕೆ ಪೊಲೀಸರು ಕೆರಳಿದರು. ಲಾಠಿ, ಬೂಟು, ಗ್ಯಾಸ್, ಗಾಳಿಯಲ್ಲಿ ಗುಂಡು! ಪರಿಣಾಮ ಕೋತಿಗಳು ಮೆಲ್ಲಗೆ ಗುಂಪಿನಿಂದ ಬೇರ್ಪಡುವ ಇರಾದೆ ವ್ಯಕ್ತಪಡಿಸಿದವು, ಆದರೆ ಹಿರಿಯ ಕೋತಿಗಳು ಇದು ಸರಿಯಾದ ನಿರ್ಧಾರವಲ್ಲವೆಂದು ಸಲಹೆ ನೀಡಿದವು.

ಪೊಲೀಸರ ಮಾರಕಾಯುಧಗಳಿಗೆ ಹೆದರಕೂಡದು. ಹಲವು ದಶಕ ಅಜ್ಞಾತವಾಸ ಅನುಭವಿಸುವುದು ತಮಗೆ ಹೊಸದಲ್ಲ. ತಮಗೆ ಪ್ರಾಣಾರ್ಪಣೆ ತೃಣಸಮಾನ. ಕೆಲವು ನೂರರ ಸಂಖ್ಯೆಯ ಸಾವು ಮಾಮೂಲಾಗಿದೆ. ಮಾಲ್ಥಸ್ ಸಿದ್ಧಾಂತ. ಪ್ರಾಣ ನಮ್ಮದಾಗಿದ್ದರೆ ತಾನೆ ತಲೆ ಯೋಚಿಸುವುದು! ಯಾರಿಗೆ ಏನಾದರು ತಮಗೇನು! ದಾನ ನಿಮ್ಮದು, ತ್ಯಾಗ ನಿಮ್ಮದು, ಪರಿಣಾಮ ನಿಮ್ಮದು. ಕೊನೆಗೆ ಲೆಕ್ಕ ಹಾಕಿದರೆ ತಪ್ಪೇನು! ಹೆಸರಿಗೆ ಕುರ್ಚಿಯಲ್ಲಿ ನಾನು ಕುಳಿತಿದ್ದರೂ ಸುತ್ತ ನಿಲ್ಲುವುದು ನೀವಲ್ಲವೆ! ಹೇಗೋ ಕಾನೂನು ನಮ್ಮವು. ಪಂಚಭೂತಗಳು ಸಹ ನಮ್ಮವೆ! ನಾಯಕನ ಮಾತುಗಳಿಗೆ ಪರವಶಗೊಳ್ಳುತ್ತಿರುವರು. ಆದರೆ ಕೋತಿಗಳಿಗೆ ಮಾತ್ರ ಲವಲೇಶ ಅರ್ಥವಾಗಲಿಲ್ಲ. ಇನ್ನು ಸ್ವಲ್ಪ ಹೊತ್ತು ನಿಂತಿದ್ದರೆ ಹುಚ್ಚು ಹಿಡಿಯುವುದು ಖಚಿತವೆಂದು ಭಾವಿಸಿ ಅಲ್ಲಿಂದ ಮೆಲ್ಲಗೆ ಜಾರಿದವು.

ಕೋತಿಗಳು ಇದ್ದಕ್ಕಿದ್ದಂತೆ ಆರ್ಟ್ ಗ್ಯಾಲರಿ ಪ್ರವೇಶಿಸಿದವು. ಅವುಗಳ ಅನಿರೀಕ್ಷಿತ ಪ್ರವೇಶದಿಂದ ಅಲ್ಲಿದ್ದ ಎಲ್ಲರೂ ದಿಗ್ಭ್ರಮೆಗೊಂಡರು. ಹೆದರಿ ಅಲ್ಲಲ್ಲಿ ಅಡಗಿದರು. ಅದಾವುದನ್ನು ಲೆಕ್ಕಿಸದೆ ಕೋತಿಗಳು ಮನುಷ್ಯರಂತೆ ವರ್ತಿಸಲಾರಂಭಿಸಿದವು. ಅಲ್ಲಿದ್ದ ಪ್ರತಿಯೊಂದು ಕಲಾಕೃತಿಯನ್ನು ಆಸ್ವಾದಿಸಿದವು. ಅವುಗಳ ಪೈಕಿ ಒಂದು ಕೋತಿ ಕಲಾಕೃತಿಗಳನ್ನು ಪ್ರತ್ಯೇಕವಾಗಿ ವಿಶ್ಲೇಷಿಸತೊಡಗಿತು. ರಚನೆಗೆ ಬಳಸಿದ ಬಣ್ಣ ಕುರಿತ ಅದರ ವಿವರ ವಿದ್ವತ್ಪೂರ್ಣವಾಗಿತ್ತು. ಅದನ್ನು ಕೇಳಿಸಿಕೊಂಡ ಮನುಷ್ಯರು ಮೂಗಿನ ಮೇಲೆ ಬೆರಳಿರಿಸಿಕೊಂಡರು.

ಆ ಬಳಿಕ ಅವು ಫಿಲಂಸಿಟಿ ಕಡೆ ಪ್ರಯಾಣ ಬೆಳೆಸಿದವು. ತಡೆದ ಗೇಟ್ ಕೀಪರ್‌ನನ್ನು ತರಾಟೆಗೆ ತೆಗೆದುಕೊಂಡವು. ಬಿಡದಿದ್ದರೂ ಲೆಕ್ಕಿಸದೆ ಅವು ಪ್ರಹರಿಗೋಡೆಯನ್ನು ಹಾರಿ ಪ್ರವೇಶಿಸಿದವು. ಅಲ್ಲಿ ತಮ್ಮನ್ನೆ ಹೋಲುತ್ತಿದ್ದ ಜನರೊಂದಿಗೆ ಅವು ಬೆರೆತವು. ಪ್ರಪಂಚದ ಬೇರೆ ಬೇರೆ ಕಡೆಯಿಂದ ಆಗಮಿಸಿದ್ದ ಕವಿಗಳು ಕವಿತಾವಾಚನ ಆರಂಭಿಸಿದರು. ಹಿರಿಯ ಕೋತಿ ಹೋಗಿ ಮುಂದಿನ ಸಾಲಲ್ಲಿ ಕುಳಿತಿತು. ಕೋತಿಗಳು ಅಲ್ಲಲ್ಲಿ ಖಾಲಿಯಾಗುತ್ತಿದ್ದ ಆಸನಗಳನ್ನು ಆಕ್ರಮಿಸಲಾರಂಭಿಸಿದ್ದವು. ಗಲಾಟೆ ಗಜಿಬಿಜಿಯಿಂದ ಅಲ್ಲಿ ಯಾರಿಗೂ ಯಾರನ್ನೂ ಗುರುತಿಸುವ ವ್ಯವಧಾನವಿರಲಿಲ್ಲ. ಕಲಾಭಿಮಾನಿಗಳ ಆಗಮನ ನಿರ್ಗಮನ ನಿರಾತಂಕವಾಗಿ ಸಾಗಿತ್ತು. ವೇದಿಕೆ ಮೇಲೆ ಗಣ್ಯರನ್ನು ಸನ್ಮಾನಿಸುವುದು, ಅವರ ಸಾಧನೆಯನ್ನು ಪ್ರಶಂಸಿಸುವುದು, ಹೂಗುಚ್ಛಗಳನ್ನು ವಿನಿಮಯ ಮಾಡುವುದು ಅಡೆತಡೆಯಿಲ್ಲದೆ ಸಾಗಿತ್ತು. ಕೋತಿಗಳು ಸಹ ಸಹಪ್ರೇಕ್ಷಕರಂತೆ ಕರತಾಡನ ಮಾಡುವುದು, ಶಿಳ್ಳೆ ಹಾಕುವುದು, ಹರ್ಷೋದ್ಗಾರ ಮಾಡುವುದು ನಡೆದಿತ್ತು. ಆದರೆ ಅಲ್ಲಿದ್ದ ಯಾರು ಸಹ ಕೋತಿಗಳನ್ನು ಕೋತಿಗಳು ಎಂದು ಗುರುತಿಸದೆ ತಮ್ಮ ಪಾಡಿಗೆ ತಾವಿದ್ದರು. ಕಾರಣ ಹಸ್ತಲಾಘವ, ಆಲಿಂಗನ, ಪರಸ್ಪರ ಸೆಲ್ಫಿ ತೆಗೆದುಕೊಳ್ಳುವುದು.. ಹೀಗೆ ಅವರೆಲ್ಲರೂ ಬ್ಯುಜಿ ಇದ್ದರು. ಸಹಮಾನವರ ವರ್ತನೆ ನಡವಳಿಕೆ ಅಲ್ಲಿದ್ದ ಕೋತಿಗಳಿಗೆ ಆಶ್ಚರ್ಯ ತಂದಿತು. ಅವುಗಳಲ್ಲಿ ಎರಡು ಕೋತಿಗಳು ಮನುಷ್ಯರ ನಡವಳಿಕೆಯನ್ನು ಯಥಾವತ್ತಾಗಿ ಅನುಕರಿಸುವುದರ ಮೂಲಕ ಮುಖ್ಯವಾಗಿ ಗಣ್ಯ ಕವಿಗಳ ಗಮನ ಸೆಳೆದವು. ಅಂತಿಮವಾಗಿ ಕವಿಗಳೆಲ್ಲ ಒಂದು ತೀರ್ಮಾನಕ್ಕೆ ಬಂದರು, ಅದೆಂದರೆ... ಎಲ್ಲಾ ದೇಶಗಳಲ್ಲೂ ಆಕಾಶವಿರುವುದು ಮೇಲ್ಭಾಗದಲ್ಲಿ, ಭೂಮಿ ಇರುವುದು ಕೆಳಭಾಗದಲ್ಲಿ. ಎಲ್ಲಾ ಕಡೆ ನೀರು ಪ್ರವಹಿಸುವುದು ಪ್ರಪಾತದ ಕಡೆ. ಆದರೆ ಎಲ್ಲಾ ಕಡೆ ಓಟ್ ಬ್ಯಾಂಕ್ ರಾಜಕಾರಣಕ್ಕೆ ಅಡೆತಡೆ ಇಲ್ಲ. ಎಲ್ಲಾ ದೇಶಗಳಲ್ಲೂ ದೊಂಬಿ ದರೋಡೆಗಳು ನಿರ್ವಿರಾಮವಾಗಿ ಸಾಗಿರುವವು. ಅತ್ಯಾಚಾರ ಅನಾಚಾರ ಎಲ್ಲಾ ದೇಶಗಳಲ್ಲಿ ಮಾಮೂಲು ಸಂಗತಿ. ಚಿಂತಕರು, ವಿಚಾರವಾದಿಗಳು, ಹೋರಾಟಗಳು ಈ ದೇಶದ ವ್ಯವಸ್ಥೆಯನ್ನು ಬದಲಿಸಲಾರವು. ಈ ಸಮಾಜದಲ್ಲಿ ಬಲಿಷ್ಠರದ್ದೇ ದರ್ಬಾರ್, ಶೃತಿ ಲಯಕ್ಕನುಸಾರ ಹೊಗಳಿಕೆ ಕೇಳದ ಹೊರತು ಈ ದೇಶದ ಪ್ರಜೆಗಳು ನಿದ್ದೆ ಮಾಡುವುದಿಲ್ಲ. ಭಜನೆಯೇ ಪ್ರಜೆಗಳ ನೆಮ್ಮದಿಯ ಮೂಲಮಂತ್ರ.

ಸಮ್ಮೇಳನದ ಕೊನೆಗೆ ಕವಿಗಳು ಒಟ್ಟಿಗೆ ಚರ್ಚಿಸಿದರು. ಚರ್ಚೆಯ ಫಲಶ್ರುತಿಯ ಒಕ್ಕಣಿಕೆಯನ್ನು ಬಿಡುಗಡೆ ಮಾಡಿದರು. ಒಕ್ಕಣಿಕೆಯನ್ನು ಸಾಹಿತ್ಯಾಭಿಮಾನಿಗಳ ಸಮಕ್ಷಮ ಗಟ್ಟಿಯಾಗಿ ವಾಚಿಸಬೇಕೆಂದು ಕೋತಿಗಳು ಒತ್ತಾಯಿಸಿದವು. ಆದರೆ ಸಮ್ಮೇಳನದ ಸಂಘಟಕರು ಅದಕ್ಕೆ ಮಣಿಯಲಿಲ್ಲ. ಅದರ ಪರಿಣಾಮ ಕೋತಿಗಳು ಅಡಗಿಸಿಟ್ಟುಕೊಂಡಿದ್ದ ಕರಪತ್ರಗಳನ್ನು ತೆಗೆದು ತೂರಿದವು, ಧೈರ್ಯವಿದ್ದರೆ ಓದಿರಿ ಎಂದು ಸವಾಲು ಹಾಕಿದವು, ಎಲ್ಲರ ಕಡೆ ತೀಕ್ಷ್ಣನೋಟ. ಜಾಗ ಖಾಲಿ ಮಾಡಿದವು.

✳ ✳ ✳

ಕೋತಿಗಳಿಗೆ ಅಲ್ಲಿನ ಗ್ರಂಥಾಲಯಗಳನ್ನು ನೋಡಬೇಕೆಂಬ ಆಸೆಯಾಯಿತು. ಅದಕ್ಕೆ ನಿಖರ ಕಾರಣಗಳು ಯಾರಿಗೂ ತಿಳಿಯದು. ಹಿಂದೆಮುಂದೆ ಆಲೋಚಿಸದೆ ಅವು ಅಲ್ಲಿದ್ದ ಗ್ರಂಥಾಲಯಗಳನ್ನು ಪ್ರವೇಶಿಸಿದವು. ಅಲ್ಲಿನ ಅಧಿಕಾರಿಗಳು ನೋಡು ನೋಡುತ್ತಿದ್ದಂತೆ ಅವು ಮನುಷ್ಯರಂತೆ ಬದಲಾದವು. ಅವುಗಳಲ್ಲಿ ಕೆಲವು ಕಂಪ್ಯೂಟರ್ ಮುಂದೆ ಕುಳಿತು ಗ್ರಂಥಗಳ ಯಾದಿ ಹುಡುಕಲಾರಂಭಿಸಿದವು. ಮನುಷ್ಯರ ಸರ್ವಾಂಗೀಣ ಅಭಿವೃದ್ಧಿಗೆ ಕಾರಣ ಗ್ರಂಥಗಳು ಎಂಬ ನಿರ್ಣಯಕ್ಕೆ ಬಂದವು. ತಮ್ಮಂಥ ಮರ್ಕಟ ಸಮುದಾಯದ ಮಾಹಿತಿಯುಳ್ಳ ಗ್ರಂಥಗಳೇನಾದರು ಇರುವವೆ! ಹುಡುಕತೊಡಗಿದವು. ಆದರೆ ಅವಿರದೆ ಉಳಿದೆಲ್ಲಾ ಶಾಸ್ತ್ರಗಳಿಗೆ ಸಂಬಂಧಿಸಿದ ಕೃತಿಗಳು ಅಪಾರ ಸಂಖ್ಯೆಯಲ್ಲಿದ್ದವು. ಅಲ್ಲದೆ ಪುರಾಣ ಕೃತಿಗಳಿಗಲ್ಲಿ ಕೊರತೆ ಇರಲಿಲ್ಲ. ಆದರೆ ಆ ರಾಶಿಯಲ್ಲಿ ಹಸಿವೆಯಶಾಸ್ತ್ರ, ಮಾನವ ಸಮಾನತ್ವ ಶಾಸ್ತ್ರ, ಸ್ವಾತಂತ್ರ್ಯಶಾಸ್ತ್ರ, ಭ್ರಾತೃತ್ವಶಾಸ್ತ್ರ! ಇಂಥ ಒಂದೇ ಒಂದು ಮೌಲಿಕ ಶಾಸ್ತ್ರಕೃತಿ ಇಲ್ಲದಿರುವುದು ಅವಮಾನಕರವೆಂದೇ ಭಾವಿಸಿದವು. ಅಲ್ಲಿ ಮೇಡಿನ್ ಇಂಡಿಯಾ, ವಿಜನ್ ಡಾಕ್ಯುಮೆಂಟ್ಸ್, ಭಾರತದ ನೀಲಿನಕಾಶೆ ಇವೆಲ್ಲ ರಾರಾಜಿಸುತ್ತಿರುವುದನ್ನು ನೋಡಿ ಕೋಪದಿಂದ ಅರಚಿದವು.

ಅಲ್ಲಿದ್ದ ನೌಕರರು ಸಂಶೋಧನ ವಿಭಾಗಕ್ಕೆ ಹೋಗುವಂತೆ ಅವುಗಳಲ್ಲಿ ವಿನಂತಿಸಿದರು. ತೆರಳಿ ನೋಡಿದ ಅವುಗಳಿಗೆ ಅಲ್ಲಿ ಹೊಸತನ ಗೋಚರಿಸಲಿಲ್ಲ. ಜಾತಿ, ಸಂಸ್ಕೃತಿ ಮತ್ತಿತರ ಸಮಾಜಮುಖಿ ಚಿಂತನೆಗೆ ಸಂಬಂಧಿಸಿದ ಸಂಶೋಧನ ಶಾಸ್ತ್ರಗ್ರಂಥಗಳು ಅಲ್ಲಿ ಚಲ್ಲಾಪಿಲ್ಲಿಯಾಗಿದ್ದವು. ಅವುಗಳ ಸ್ಥಿತಿ ಕಂಡು ಕೋತಿಗಳು ಕನಲಿದವು. ಎಲ್ಲೂ ಯಾವುದರಲ್ಲೂ ಸತ್ಯವಿಲ್ಲವೆಂಬ, ವಾಸ್ತವ ಮತ್ತು ಅವಾಸ್ತವಗಳ ನಡುವೆ ಅಪಾರ ಕಂದಕವಿರುವುದೆಂಬ, ಹೇಳಿದ್ದೆ ಹೇಳುತ್ತಿರುವರೆಂಬ, ಬರೆದದ್ದೆ ಬರೆಯುತ್ತಿರುವರೆಂಬ, ಸರ್ವವೂ ಕಾಪಿ ಟೋಪಿಗೆ ಸಂಬಂಧಿಸಿದ ವ್ಯವಹಾರವೆಂಬ, ಯಾರಿಗೂ ಸ್ವಂತ ಆಲೋಚನೆ ವಿವೇಕ ವಿಶ್ಲೇಷಣೆ ಇಲ್ಲವೆಂಬ ಸತ್ಯವನ್ನು ಅವು ಅರ್ಥಮಾಡಿಕೊಂಡವು. ಹೆಸರು, ಹುದ್ದೆ, ಲಕ್ಷಗಟ್ಟಲೆ ವೇತನ, ಜವಾಬ್ದಾರಿ, ಸ್ವಂತ ವಿವೇಕ ಇಲ್ಲದ ಇವರೆಲ್ಲರ ಅಸ್ತಿತ್ವಕ್ಕೆ ಬೆಲೆ ಇಲ್ಲವೆಂದು ಭಾವಿಸಿದವು. ವಿಚಿತ್ರವೆಂದರೆ ಇಲ್ಲಿ ಯಾರೊಬ್ಬರಿಗೂ ಸಹ ವ್ಯವಧಾನ ಇಲ್ಲವೆನ್ನುವುದೆ ಆಶ್ಚರ್ಯಕರ ಸಂಗತಿ ಎಂದುಕೊಂಡವು. ಕ್ಯಾಂಟಿನ ಲ್ಯಾಬುಗಳ ಹತ್ತಿರ ಯೌವನ ಕಾಡುಬೆಳದಿಂಗಳಂತೆ ವೃಥಾ ಆಗುತ್ತಿರುವುದು. ಎಳೆ ಬಿಸಿಲನ್ನು ಭರಿಸಲಾರರು ಇವರೆಲ್ಲರು. ಲೊಚಗುಟ್ಟುವ ಹಲ್ಲಿ, ಲಿಂಬೆಹಣ್ಣು, ರಸ್ತೆ ದಾಟುವ ಬೆಕ್ಕು! ಇವುಗಳಿಗೆ ಹೆದರುವ ಇವರಿಗೆ ಗತಿ, ಗುರಿ ಇವೆರಡೂ ಇಲ್ಲವೆಂದು ಭಾವಿಸಿದವು.

✳ ✳ ✳

ಕೋತಿಗಳು ವಾರಕಾಲ ಸುದೀರ್ಘವಾಗಿ ಯೋಚಿಸಿದವು, ಆದರೂ ನಿಖರ ಫಲಿತಾಂಶ ಹೊಳೆಯಲಿಲ್ಲ. ಕೇಳಿಸಿಕೊಂಡವರೆಲ್ಲರೂ ಬರೀ ಅಂಗೈಯಲ್ಲಿ ಆಕಾಶ ತೋರಿಸುತ್ತಿರುವರು, ಗಾಳಿಯಲ್ಲಿ ಗೋಪುರಗಳನ್ನು ಕಟ್ಟುತ್ತಿರುವರು, ಮೂಕನಿಗೆ ಮಾತು ಕಲಿಸುತ್ತಿರುವರು. ಎಲ್ಲಿ ನೋಡಿದರಲ್ಲಿ ಪ್ರಶಸ್ತಿಪುರಸ್ಕೃತ ಖಾಲಿ ತಲೆಗಳು. ಪ್ರಪಂಚದಲ್ಲಿ ಅಮೂಲ್ಯವಾದುದು ಪ್ರಾಣ. ಅಕಾಲಿಕವಾಗಿ ಸಾಯುತ್ತಿರುವವರಲ್ಲಿ ವಿದ್ಯಾರ್ಥಿಗಳು, ರೈತರು, ಪ್ರೇಮಿಗಳು, ವಿವಾಹಿತರು, ಅವಿವಾಹಿತರು, ನಿರುದ್ಯೋಗಿಗಳೆ ಅಧಿಕ. ಹಸುಕಂದಮ್ಮಗಳ ಭವಿಷ್ಯಕ್ಕೆ ಭರವಸೆ ಭದ್ರತೆ ಇಲ್ಲವೇ ಇಲ್ಲ. ಯೋಚಿಸುತ್ತಿದ್ದ ಕೋತಿಗಳು ಅಸಹನೆಯಿಂದ ಕುದಿಯುತ್ತಿರುವವು. ಪರಸ್ಪರ ಜಗಳವನ್ನು ಉದ್ದೀಪಿಸುತ್ತಿರುವವು. ಪ್ರಪಂಚವೆಲ್ಲವೂ ನಕಲಿ! ಅರ್ಥವಾದ ಬಳಿಕ ಕಪ್ಪು ಕೋತಿಗಳು ಕೈಕೊಂಡ ನಿರ್ಧಾರವೇನೆಂದರೆ!

ತೆಲುಗು ಮೂಲ : **ಡಾ॥ ತುಮ್ಮಲ ರಾಮಕೃಷ್ಣ**
ತೆಲುಗು ವಿಭಾಗ, ಹೈದರಾಬಾದ್ ವಿಶ್ವವಿದ್ಯಾಲಯ, ಹೈದರಾಬಾದ್ – ೪೬
ಕನ್ನಡಕ್ಕೆ : **ಕುಂ. ವೀರಭದ್ರಪ್ಪ**
'ಅನ್ನಪೂರ್ಣ ನಿಲಯ', ಪೊಲೀಸ್ ಸ್ಟೇಷನ್ ಹತ್ತಿರ, ಕೊಟ್ಟೂರು – ೫೮೩ ೧೩೪, ಬಳ್ಳಾರಿ ಜಿಲ್ಲೆ

ಸಾಹಿತ್ಯ ಕ್ಷೇತ್ರದಲ್ಲಿ ಅನುವಾದವನ್ನು ಎರಡನೇ ದರ್ಜೆಯದನ್ನಾಗಿ ನೋಡುವ ಭಾವನೆ ಇದೆ. ಆದರೆ ಒಬ್ಬ ಸಮರ್ಥ ದ್ವಿಭಾಷಾ ಓದುಗ, ಸಹೃದಯ ವಿಮರ್ಶಕ ಮತ್ತು ಲೇಖಕ ಮಾತ್ರ ಅತ್ಯುತ್ತಮ ಅನುವಾದಕನಾಗಬಲ್ಲ. ಆತ ಸದ್ದಿಲ್ಲದೆ ಸಾಂಸ್ಕೃತಿಕ ರಾಯಭಾರಿಯ ಕೆಲಸ ಮಾಡುತ್ತಿರುತ್ತಾನೆ. ಅನುವಾದಕ ಮತ್ತೊಂದು ಭಾಷೆಯ, ಸಂಸ್ಕೃತಿಯ ಸಂವೇದನೆಯಲ್ಲಿ ಪರಕಾಯ ಪ್ರವೇಶ ಮಾಡಿ ಅದರ ಅರ್ಥ, ಭಾವಗಳನ್ನು ಅನುವಾದ ಕೃತಿಯಲ್ಲಿ ಪುನರ್ಸೃಷ್ಟಿ ಮಾಡಬೇಕಾಗುತ್ತದೆ. ಇದಕ್ಕೂ ವ್ಯುತ್ಪತ್ತಿ ಜ್ಞಾನ, ಕೌಶಲ ಸ್ಪಷ್ಟ , ನಿಖರ, ನಿಚ್ಚಳವಾಗಿ ಬೇಕು. ಅನುವಾದವನ್ನು ಕಲಾತ್ಮಕ ವಿಜ್ಞಾನ, ಪ್ರಜ್ಞಾಪೂರ್ವಕ ಕಲೆ ಎಂದು ಕರೆಯಲಾಗುತ್ತದೆ. ಕೃತಿಗೆ ಭಾಷೆ ದೇಹವಾದರೆ ವಸ್ತು ಆತ್ಮವಾಗಿರುತ್ತದೆ. ಇವೆರಡೂ ಊನವಾಗದಂತೆ ಪ್ರತಿ ಸೃಷ್ಟಿಸುವ ವಿಶ್ವಾಮಿತ್ರ ಕಲೆಯು ಒಬ್ಬ ಶ್ರೇಷ್ಠ ಅನುವಾದಕನಲ್ಲಿ ಅಡಗಿರುತ್ತದೆ.

ಚಂದ್ರಕಾಂತ ಪೋಕಳೆಯವರ ಅನುವಾದಿತ ಕೃತಿಗಳನ್ನು ಓದಿದಾಗ ನಮಗೆ ಒಬ್ಬ ಶ್ರೇಷ್ಠ, ಸಮರ್ಥ ಅನುವಾದಕನ ಪರಿಚಯವಾಗುತ್ತದೆ.

ಮೂಲದ ಭಾವ ಲುಪ್ತವಾಗದಂತೆ ಓದುವ ಗೇಯತೆಯನ್ನು ಹಿಡಿದುಕೊಂಡಿರುವ ಅವರ ಅನುವಾದಿತ ಕೃತಿಗಳು ಕನ್ನಡ ಸಾಹಿತ್ಯದಲ್ಲಿ ಸಂಚಲನೆಯನ್ನು ಉಂಟುಮಾಡಿದವು. ಮರಾಠಿ ದಲಿತ ಹಾಗೂ ಬಹಿಷ್ಕೃತ ಮನಸುಗಳ ಅಪರಿಚಿತ ನೋವಿನ ಲೋಕ ಕನ್ನಡ ಭಾಷೆಗೆ ಹೊಸದಾಗಿತ್ತು. ಮರಾಠಿ ಭಾಷೆಯ ದೇಹಾತ್ಮವನ್ನು ಕನ್ನಡದ ಆಯಾಮಕ್ಕೆ ಲೋಪವಾಗದಂತೆ ಅತ್ಯಂತ ಹತ್ತಿರದ ಪರ್ಯಾಯ ಭಾಷೆಗೆ ಬದಲಿಸುವ ಕುಶಲತೆ ಅವರ ಅನುವಾದಗಳಲ್ಲಡಗಿದೆ. ಅನುವಾದದ ಕ್ಲಿಷ್ಟತೆಗೆ ಪರಿಹಾರವಾಗಿ ಸರಳ ಉಪಾಯವೆಂದು ಉಪಭಾಷೆಯನ್ನು ಬಳಸುವ, ಬೆಳೆಸುವ ಗೋಜಿಗೆ ಅವರು ಹೋಗುವುದಿಲ್ಲ. ಮೂಲ ಭಾಷೆ, ಭಾವವನ್ನು ಪರಿಭಾವಿಸುವಂತೆಯೇ ಅನುವಾದವನ್ನು ಓದುವುದರಲ್ಲಿ ಚಂದ್ರಕಾಂತ ಪೋಕಳೆಯವರ ಹೆಚ್ಚುಗಾರಿಕೆ ಮತ್ತು ಛಾಪು ಇದೆ.

೧೯೪೯ರಲ್ಲಿ ಉತ್ತರ ಕನ್ನಡ ಜಿಲ್ಲೆಯ ಮಂಚೀಕೇರಿಯಲ್ಲಿ ಜನಿಸಿ ಕರ್ನಾಟಕ ವಿಶ್ವವಿದ್ಯಾಲಯದಿಂದ ೧೯೭೨ರಲ್ಲಿ ಕನ್ನಡ ಭಾಷೆಯಲ್ಲಿ ಸ್ನಾತಕೋತ್ತರ ಪದವಿ ಪಡೆದು ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ತಾಲ್ಲೂಕಿನ ಉತ್ತರದ ಗಡಿ ಊರಾದ ಬೇಡಕಿಹಾಳದಲ್ಲಿ ಕನ್ನಡ ಉಪನ್ಯಾಸಕರಾಗಿ ಲಕ್ಷೆ ಶಿಕ್ಷಣ

ಸಂದರ್ಶಕರು
ರಾಜಕುಮಾರ ಎಸ್. ಸಂಕಪಾಳ




# ಕನ್ನಡ ಮರಾಠಿ ಸಾಂಸ್ಕೃತಿಕ ಭಾಷಾ ಸೇತು ಪ್ರೊ|| ಚಂದ್ರಕಾಂತ ಪೋಕಳೆ

ಸಂಸ್ಥೆಯ ಬಿ. ಎಸ್. ಕಾಂಪೋಜಿಟ್ ಪದವಿ ಪೂರ್ವ ಕಾಲೇಜಿನಲ್ಲಿ ಕನ್ನಡ ಉಪನ್ಯಾಸಕರಾಗಿ ವೃತ್ತಿ ಕಾರ್ಯಾರಂಭ ಮಾಡಿ ಅಲ್ಲಿಯೇ ಪ್ರಾಚಾರ್ಯರಾಗಿ ನಿವೃತ್ತರಾದರು.

ಮರಾಠಿಯಿಂದ ಕನ್ನಡಕ್ಕೆ ಈವರೆಗೆ ೧೨೦ಕ್ಕೂ ಮಿಕ್ಕಿ ಕೃತಿಗಳನ್ನು ಅನುವಾದ ಮಾಡಿದ್ದಾರೆ. ಹಲವು ವಿಶ್ವವಿದ್ಯಾಲಯಗಳಿಗೆ ಇವರ ಕೃತಿಗಳು ಪಠ್ಯಗಳಾಗಿವೆ. ೨೦೦೪ರಲ್ಲಿ ಇವರ 'ಮಹಾನಾಯಕ' ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಪುರಸ್ಕಾರ ದೊರೆತಿದೆ. ೧೯೯೮ರಲ್ಲಿ ಮುಂಬೈ ಕರ್ನಾಟಕ ಸಂಘದ ವರದರಾಜ ಆದ್ಯ ಪ್ರಶಸ್ತಿ, ೨೦೦೨ ಮತ್ತು ೨೦೦೭ರಲ್ಲಿ ಎರಡು ಬಾರಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ೨೦೧೩ರಲ್ಲಿ ಕುವೆಂಪು ಭಾಷಾ ಭಾರತಿ ಗೌರವ ಪ್ರಶಸ್ತಿ ಮೊದಲಾದವುಗಳು ಇವರ ಅನುವಾದ ಕಾರ್ಯಕ್ಕೆ ಸಂದ ಇತರ ಪುರಸ್ಕಾರಗಳು. ಇಂದಿಗೂ ಅವಿರತವಾಗಿ ಸದಾ ಅನುವಾದ, ಅಧ್ಯಯನಗಳಲ್ಲಿ ತೊಡಗಿ ಕನ್ನಡಕ್ಕೆ ಹೊಸದೆನಿಸುವ ಕೃತಿಗಳ ಪರಿಚಯ, ಅನುವಾದ ಮಾಡುವುದರಲ್ಲಿ ಕಾರ್ಯಶೀಲರಾಗಿದ್ದಾರೆ. ಬೆಳಗಾವಿಯಲ್ಲಿ ನೆಮ್ಮದಿಯ ನಿವೃತ್ತಿ ಜೀವನ ನಡೆಸುತ್ತ ಅನಗತ್ಯ ತೋರಿಕೆಯ ಅಸಹಜತೆಯಿಂದ ದೂರ ಇರುವ ಇವರು 'ಹೊಸತು'ವಿನ ಸಂದರ್ಶನಕ್ಕೆ ದೊರಕಿದರು.

**ಹೊಸತು :** ಸರ್, ನಾನು 'ಹೊಸತು' ಪತ್ರಿಕೆಯಿಂದ ತಮ್ಮ ಸಂದರ್ಶನಕ್ಕಾಗಿ ಬಂದಿದ್ದೇನೆ. ನಮಸ್ಕಾರ.

**ಚಂದ್ರಕಾಂತ ಪೋಕಳೆ :** ನಮಸ್ಕಾರ ಬನ್ನಿ.

**ಹೊಸತು :** ನಿಮ್ಮ ಬಾಲ್ಯ ಜೀವನ, ಹಿನ್ನೆಲೆ ತಿಳಿಸಿ.

**ಪೋಕಳೆ :** ನಾನು ಜನಿಸಿದ್ದು ಉತ್ತರ ಕನ್ನಡ ಜಿಲ್ಲೆಯ ಮಂಚೀಕೇರಿಯಲ್ಲಿ. ಪ್ರಾಥಮಿಕ, ಮಾಧ್ಯಮಿಕ ಶಿಕ್ಷಣ ಹುಟ್ಟಿದ ಊರಲ್ಲಿ ನಡೆಯಿತು. ಬಳಿಕ ಪಿಯುಸಿ ಕಾರವಾರದಲ್ಲಿ, ಪದವಿ ಶಿಕ್ಷಣ ಧಾರವಾಡದಲ್ಲಿ ನಡೆಯಿತು. ೧೯೭೨ರಲ್ಲಿ ಕನ್ನಡ ಎಂ.ಎ. ಪದವಿ ಗಳಿಸಿದೆ. ನನ್ನ ಮಾತೃಭಾಷೆ ಕೊಂಕಣಿ. ತಾಯಿ ಮರಾಠಿ ಭಾಷೆಯವರು. ರಜೆಯಲ್ಲಿ ಅಜ್ಜನ ಊರಿಗೆ ಹೋದಾಗ ಮರಾಠಿ ಭಾಷೆಯ ಸಂಸ್ಕೃತಿಯ ಒಡನಾಟ ಒದಗುತ್ತಿತ್ತು. ಬಾಲ್ಯದಿಂದಲೂ ರೇಡಿಯೋದಲ್ಲಿ ಮರಾಠಿ ಅಭಂಗಗಳನ್ನು, ಪೂಜೆಯ ಆರತಿ ಹಾಡುಗಳನ್ನು ಕೇಳಿ ರೂಢಿ ಇತ್ತು. ಕುಮಾರ ಗಂಧರ್ವರ ಹಾಡು ಬಹಳ ಇಷ್ಟವಾಗುತ್ತಿತ್ತು. ಮರಾಠಿ ಭಾವಗೀತೆಗಳಲ್ಲಿ ಆಸಕ್ತಿ. ಪ್ರಾಯಶಃ ಮರಾಠಿ ಭಾಷೆಯ ಸಂಸ್ಕೃತಿಯ ಬೀಜ ಇಲ್ಲೇ ಬಿತ್ತಿ ಅಂಕುರಿಸಿರಬೇಕು. ಮರಾಠಿ ಹೆಂಡತಿಯಿಂದಾಗಿ ಅದು ಹೆಮ್ಮರವಾಗಿ ಬೆಳೆಯಿತು.

**ಹೊಸತು :** ಅನುವಾದ ಕ್ಷೇತ್ರವನ್ನೇ ಗಂಭೀರವಾಗಿ ಪರಿಗಣಿಸಲು ನಿಮಗಿದ್ದ ಮೂಲ ಪ್ರೇರಣೆ ಯಾವುದು?

**ಪೋಕಳೆ :** ೧೯೭೨ರಲ್ಲಿ ಬೆಳಗಾವಿಯ ಗಡಿ ಪ್ರದೇಶ ಬೇಡಕಿಹಾಳದಲ್ಲಿ ಪ್ರಾಧ್ಯಾಪಕ ವೃತ್ತಿ ಆರಂಭವಾಯಿತು. ಅದು ದ್ವೈಭಾಷಿಕ ಪ್ರದೇಶ. ಅಲ್ಲಿ ಎರಡು ಭಾಷೆ, ಸಂಸ್ಕೃತಿಗಳ ಸಂಪರ್ಕ ಒಡನಾಟ ಒದಗಿತು. ಇದರಿಂದ ಕನ್ನಡ-ಮರಾಠಿ ಭಾಷೆಯ ತೌಲನಿಕತೆಯನ್ನು ಗಮನಿಸುವ ಅಭಿಲಾಷೆಯಾಯಿತು. ಮರಾಠಿ ಗೆಳೆಯರ ಸಂಪರ್ಕದಿಂದ ಮರಾಠಿ ಸಾಹಿತ್ಯದ ಬಗ್ಗೆ ಅಭಿರುಚಿ ಬೆಳೆಯಿತು. ಮಹತ್ವದ ಲೇಖಕರ, ಚಿಂತಕರ, ವಿಚಾರವಾದಿಗಳ, ಸಮಾಜ ಸುಧಾರಕರ – ಹೀಗೆ ಆಧುನಿಕ ಮರಾಠಿ ಸಾಹಿತ್ಯದ ಶ್ರೇಷ್ಠರ ಕೃತಿಗಳ ಅಧ್ಯಯನವನ್ನು ನಡೆಸುತ್ತಾ ಹೋದಂತೆ ಕನ್ನಡ ಮರಾಠಿಯ ಭಿನ್ನತೆ, ವೈಶಿಷ್ಟ್ಯ, ಹೊಸತನ ಎಲ್ಲವನ್ನೂ ಅರಿಯುತ್ತಾ ಹೋದೆ. ಎರಡೂ ಭಾಷೆಗಳಲ್ಲಿ ಮಾತನಾಡುವುದು, ವ್ಯವಹರಿಸುವುದು ಸಾಧ್ಯವಾಯಿತು. ಎರಡು ಭಾಷೆಗಳ ಬಗೆಗೆ ಚರ್ಚೆ ಮಾಡುವ, ತುಲನೆ ಮಾಡುವ ಗೆಳೆಯರು ದೊರಕಿದರು. ನಾನು ಎಂ.ಎ. ಓದುವಾಗ ಮರಾಠಿ ದಲಿತ ಸಾಹಿತ್ಯದ ಬಗೆಗೆ ಚರ್ಚೆ ನಡೆಯುತ್ತಿತ್ತು. ಫುಲೆ, ಅಂಬೇಡ್ಕರ್ ಪ್ರಭಾವದ ಬಗೆಗೆ, ವಿಶೇಷತೆಯ ಬಗೆಗೆ ಕನ್ನಡ ಲೇಖಕರು ವಿಮರ್ಶೆ ಮಾಡುವುದು ಕಂಡುಬಂತು. ಪ್ರಾಯಶಃ ಈ ಎಲ್ಲ ಹಿನ್ನೆಲೆಯಿಂದಾಗಿ ನಾನು ಅನುವಾದ ಕ್ಷೇತ್ರವನ್ನು ಆಯ್ದುಕೊಂಡೆ. ಹಾಗೆ ನಾನು ಭಾಷಾಂತರದ ಸೈದ್ಧಾಂತಿಕ ಹಿನ್ನೆಲೆ ಅರಿತವನಲ್ಲ. ಆದರೂ ಏಕೆ ಭಾಷಾಂತರವನ್ನು ಪ್ರಾಯೋಗಿಕವಾಗಿ ಮಾಡಿ ನೋಡಬಾರದು ಎಂಬ ವಿಚಾರ ನನ್ನಲ್ಲಿ ಮೂಡುತ್ತಾ ಹೋಯಿತು. ಆದಷ್ಟು ಅದನ್ನು ಕಾರ್ಯರೂಪಕ್ಕೆ ತರಲು ಕಥೆಗಳನ್ನು ಮೊದಲಿಗೆ ಆಯ್ಕೆ ಮಾಡಿ ಪತ್ರಿಕೆಗಳಿಗೆ ಕಳಿಸುವ ನಿರ್ಧಾರ ಮಾಡಿದೆ. ಸನಿಹದ ನಿಪ್ಪಾಣಿಯಲ್ಲಿ ಮಹದೇವ ಮೋರೆ ಎಂಬ ಮರಾಠಿ ಲೇಖಕರ ಪರಿಚಯವಾಯಿತು. ಅವರ ದೇವದಾಸಿ, ಡ್ರೈವ್ ಕ್ಲೀನರ್‌ಗಳು, ಬೀಡಿ ಕಾರ್ಮಿಕರು, ತಂಬಾಕು ವಖಾರಿಯಲ್ಲಿ ದುಡಿವ ಮಹಿಳೆಯರ ಸಮಸ್ಯೆಗಳ ಕುರಿತು ಕಥೆ ಬರೆದಿದ್ದಾರೆ. ಅವರಿಂದ ಅನುಮತಿ ಪಡೆದು ಅಂಥ ಕಥೆಗಳನ್ನೇ ಭಾಷಾಂತರಿಸಿ ಕನ್ನಡ ಪತ್ರಿಕೆಗಳಿಗೆ ಕಳಿಸಿದೆ. ಉತ್ತಮ ಪ್ರತಿಸ್ಪಂದನೆ ಸಿಕ್ಕಿತ್ತು. ಹೀಗೆ ನನ್ನ ಭಾಷಾಂತರ ಕಾಯಕ ಮುಂದುವರೆಯಿತು.



*ಸಂದರ್ಶಕರೊಂದಿಗೆ ಪ್ರೊ|| ಚಂದ್ರಕಾಂತ ಪೋಕಳೆ*

**ಹೊಸತು :** ಮರಾಠಿ ಭಾಷೆಯ ಸಂಸ್ಕೃತಿಯ ಸಂವೇದನೆಗಳನ್ನು ಕನ್ನಡ ಭಾಷೆಯ ಜಾಯಮಾನಕ್ಕೆ ಅನುವಾದಿಸುವಾಗ ನೀವು ಎದುರಿಸಿದ ತೊಡಕುಗಳೇನು ?

**ಪೋಕಳೆ :** ಸಾಮಾನ್ಯವಾಗಿ ಕಥೆ, ಕಾದಂಬರಿಗಳು ಸೃಜನಾತ್ಮಕವಾದುದರಿಂದ ಅನುವಾದ ಸರಾಗವಾಗಿ ಇರುತ್ತದೆ. ಅದು ತೃಪ್ತಿಯನ್ನು ನೀಡುತ್ತದೆ. ಆದರೆ ಇಲ್ಲೂ ಒಂದು ತೊಡಕಿದೆ. ಗ್ರಾಂಥಿಕ ಭಾಷೆಯನ್ನು ಸರಾಗವಾಗಿ ಅನುವಾದ ಮಾಡಬಹುದು. ಆದರೆ ಆಡುನುಡಿ, ಪ್ರಾದೇಶಿಕ ಭಾಷೆಗಳ ಅನುವಾದ ಕಷ್ಟ. "ಚಕ್ರ" ಎಂಬುದು ಜಯವಂತ ದಳವಿ ಅವರ ಕಾದಂಬರಿ. ಅದು ಮುಂಬೈ ಜೋಪಡಪಟ್ಟಿ ಸಂಸ್ಕೃತಿಗೆ ಸಂಬಂಧಿಸಿದ ಕೃತಿ. ಅಲ್ಲಿಯ ಜನರು ಹಿಂದಿ, ಮರಾಠಿ, ಗುಜರಾತಿ ಹೀಗೆ ಬೇರೆ ಬೇರೆ ಭಾಷೆಗಳನ್ನು ಮಿಶ್ರಣ ಮಾಡಿ ಮಾತನಾಡುತ್ತಾರೆ. ಭಾಷೆಯ ಧ್ವನಿ, ಏರಿಳಿತ, ವಾಚ್ಯಾರ್ಥ, ಸೂಚ್ಯಾರ್ಥ, ವ್ಯಂಗ್ಯಾರ್ಥ, ಉಪಹಾಸ ಎಲ್ಲವೂ ಗ್ರಾಂಥಿಕ ಭಾಷೆಗಳಿಗಿಂತ ಭಿನ್ನವಾಗಿರುತ್ತದೆ. ಇಂಥಲ್ಲಿ ಅನುವಾದ ಕಷ್ಟ. ಸಂಶೋಧನಾ ಕೃತಿ, ವಿಮರ್ಶಾತ್ಮಕ ಕೃತಿ, ಪ್ರಾಚೀನ ಕಾವ್ಯ ಮುಂತಾದವುಗಳ ಭಾಷಾಂತರ ಸವಾಲಿನದು. ಒಮ್ಮೆ ರಾ. ಚಿಂ. ಢೇರೆಯವರ "ಶ್ರೀ ವಿಠ್ಠಲ" ಹಾಗೂ "ನಾಥ ಸಂಪ್ರದಾಯ"ವನ್ನು ಡಾ|| ಎಂ. ಎಂ. ಕಲಬುರ್ಗಿಯವರು ಭಾಷಾಂತರಿಸುವಂತೆ ಸೂಚಿಸಿದರು. ನಾನು ಈ ಹಿಂದಿನ ಸೃಜನಶೀಲ ಕೃತಿಗಳ ಅನುವಾದದ ಮಾದರಿಯನ್ನೇ ಅನುಸರಿಸಿ ಅನುವಾದಿತ ಹಸ್ತಪ್ರತಿಯನ್ನು ಅವರೆದುರಿಗೆ ಇಟ್ಟೆ. ಅದನ್ನು ಓದುತ್ತಾ ಅವರು ನಡುನಡುವೆ ತಿದ್ದುಪಡಿಗಳನ್ನು ಸೂಚಿಸಿದರು. ಮೂಲ ಪದ್ಯಗಳು, ಶಾಸನ, ತಾಮ್ರಪಟಗಳ ಬರಹವಿದ್ದಲ್ಲಿ ಅವರು ನೀಡಿದ ಸಲಹೆ ಏನೆಂದರೆ "ಗದ್ಯವನ್ನು ನೇರವಾಗಿ ಭಾಷಾಂತರಿಸಬಹುದು. ಆದರೆ ಪದ್ಯವಿದ್ದಲ್ಲಿ ಮೂಲವನ್ನು ನೀಡಬೇಕಾಗುತ್ತದೆ.

ಇದು ಒಂದು ಕ್ರಮ. ಓದುಗರು ಮೂಲವನ್ನು ಓದಿ ಅದರ ಜೊತೆಗೆ ಅನುವಾದವನ್ನು ಗಮನಿಸುತ್ತಾರೆ. ಅನುವಾದಕ ಮಾಡಿರುವ ತಪ್ಪುಗಳಿದ್ದಲ್ಲಿ ಮುಂದಿನವರು ಅದನ್ನು ಸರಿಪಡಿಸುತ್ತಾರೆ ಅಥವಾ ತಿದ್ದುಪಡಿ ಮಾಡುತ್ತಾರೆ. ಸಂಶೋಧನೆ ಹೊಸ ಹೊಸ ಸಾಧ್ಯತೆಗಳನ್ನು ಹುಟ್ಟುಹಾಕುವುದರಿಂದ ಅನುವಾದಕ್ಕಿಂತ ಮೂಲ ಪಠ್ಯ ಮಹತ್ವದ್ದು. ಮುಂದಿನ ಅನುವಾದಕರು ಬೇರೆ, ಬೇರೆ ಅರ್ಥ ಸಾಧ್ಯತೆಗಳನ್ನು ಕಂಡುಹಿಡಿಯಬಹುದು" ಎಂದರು. ಕೆಲವೊಮ್ಮೆ ಮೂಲ ನುಡಿಗಟ್ಟುಗಳನ್ನು ಉಳಿಸಿ ಅದರ ಕನ್ನಡ ಅನುವಾದ ನೀಡಬೇಕಾಗಿರುತ್ತದೆ ಅಥವಾ ಅದಕ್ಕೆ ಸರಿಸಮವಾಗಿ ಹತ್ತಿರದ ಅರ್ಥ ಹೇಳುವ ನೀಡುವ ನುಡಿಗಟ್ಟು ಬೇಕಾಗಿರುತ್ತದೆ. ಮರಾಠಿ ಗಾದೆ ಮಾತಿಗೆ ಕನ್ನಡ ಗಾದೆ ಮಾತು ನೀಡಬೇಕಾಗಿರುತ್ತದೆ. ಮರಾಠಿಯಲ್ಲಿ ಕೆಲವು ವಿಶಿಷ್ಟ ಅರ್ಥಗಳಿಗೆ ಚಾರಿತ್ರಿಕ ಹಿನ್ನೆಲೆ ಇರುತ್ತದೆ. ಕನ್ನಡದಲ್ಲಿ ಅದೇ ಪದವಿದ್ದರೂ ಅದರ ಅರ್ಥ, ಛಾಯೆ ಬೇರೆ. ಉದಾಹರಣೆ : "ಸರಕಾರ", "ಮಹಾರಾಜ", "ಸವಾರಿ", "ಬೂವಾ" ಪದಗಳು. ಮರಾಠಿ ದಲಿತ ಆತ್ಮಕತೆಗಳಲ್ಲಿ ಆಯಾ ಪ್ರದೇಶದ ದಲಿತರು ಬಳಸಿದ ಭಾಷೆ ಭಿನ್ನ ಭಿನ್ನವಾಗಿದೆ. ಆಗ ಇಂಥ ಭಾಷಾಂತರ ಕಷ್ಟ. ಮೂಲ ಲೇಖಕರನ್ನು ಸಂಪರ್ಕಿಸಿ ಅವರ ಮೂಲಾರ್ಥದ ಸಂದರ್ಭ ತಿಳಿದುಕೊಳ್ಳಬೇಕಾಗುತ್ತದೆ. ತಳ ಸಮುದಾಯದವರು ಹಲವು ಬಗೆಯ ಸಾಂಸ್ಕೃತಿಕ ಪದ್ಧತಿಯಲ್ಲಿ ಜೀವನ ಸಾಗಿಸುತ್ತಿರುತ್ತಾರೆ. ಅಂಥಲ್ಲಿ ಬಳಸುವ ಸಾಂಸ್ಕೃತಿಕ ಪದ ನುಡಿಗಟ್ಟು, ಪದಪುಂಜ ತೀರಾ ಭಿನ್ನ. ಇಂಥವುಗಳನ್ನು ಅನುವಾದಿಸುವುದು ಒಂದು ಸವಾಲೇ ಸರಿ. ಮರಾಠಿಯಲ್ಲಿ ಖಾನದೇಶ, ಮಾಣದೇಶ, ಕೊಂಕಣ, ಮರಾಠವಾಡ ಹೀಗೆ ಭಿನ್ನ ಭಿನ್ನ ಪ್ರದೇಶಗಳಿವೆ. ನನ್ನಂಥವನು ಗಡಿಪ್ರದೇಶದ




ಮರಾಠಿ ಬಲ್ಲವನಾಗಿದ್ದರೆ ಆಗ ಅವನಿಗೆ ಉಳಿದ ಪ್ರಾದೇಶಿಕ ಮರಾಠಿ ಗೊತ್ತಿರುವುದಿಲ್ಲ. ಇಂಥಲ್ಲಿ ಅನುವಾದಕ ಸೋಲುತ್ತಾನೆ. ಮೂಲಕೃತಿ ಯಾವ ಪ್ರದೇಶಕ್ಕೆ ಸಂಬಂಧಿಸಿದೆಯೋ ಅನುವಾದಕ ತನ್ನ ಭಾಷೆಯ ಅಂಥದ್ದೇ ಪ್ರದೇಶವನ್ನು, ಅಲ್ಲಿಯ ಪ್ರಾದೇಶಿಕ ಪರಿಸರವನ್ನು ಆಯ್ಕೆ ಮಾಡಿಕೊಳ್ಳ ಬೇಕೆಂದು ನನ್ನ ಭಾವನೆ. ಮೂಲ ಕೃತಿಯು ಕೊಂಕಣ ಪ್ರದೇಶದ್ದಾಗಿದ್ದರೆ ಕನ್ನಡದಲ್ಲಿ ಭಾಷಾಂತರಿಸುವಾಗ ಕರ್ನಾಟಕದ ಕರಾವಳಿಯ ಭಾಷೆಯನ್ನು ಬಳಸುವುದು ಸೂಕ್ತ. ಒಂದು ವೇಳೆ ನಾನು ಬಯಲು ಸೀಮೆಯ ಭಾಷೆಯನ್ನು ಬಳಸಿದರೆ ತಪ್ಪು ಎಂದೇ ನನ್ನ ಅನಿಸಿಕೆ. ಇದು ಆಯಾ ಜನಾಂಗಿಕ ಭಾಷೆ, ಅವರ ಆಚಾರ, ವಿಚಾರ ರೀತಿ ರಿವಾಜುಗಳಿಗೆ ಅನ್ವಯಿಸುವಂಥದ್ದು.

ಮಹಾರಾಷ್ಟ್ರದ ಕೊಂಕಣದಲ್ಲಿ ದೇವರೆದುರಿಗೆ ಸಾಮೂಹಿಕ ಪ್ರಾರ್ಥನೆ ಸಲ್ಲಿಸುವಾಗ ಅರ್ಚಕ ನಾದವನು ಅಥವಾ ಸಮುದಾಯದ ಮುಖಂಡ ದೇವರಲ್ಲಿ ಹೀಗೆ ಪ್ರಾರ್ಥಿಸುತ್ತಾನೆ. "ನಮಗೆ ಸುಖ ಸಮೃದ್ಧಿಯನ್ನು ಕೊಡು ಮಹಾರಾಜ." ಆಗ ಉಳಿದವರು "ಹೌದು ಮಹಾರಾಜ" ಎಂದು ಧ್ವನಿ ಗೂಡಿಸುತ್ತಾರೆ. ಇದು ಕನ್ನಡ ಪರಿಸರಕ್ಕೆ ಅಪರಿಚಿತ. ಇಂಥಲ್ಲಿ ಮೂಲದ ಸಾಂಸ್ಕೃತಿಕ ಸಂದರ್ಭ ಹಿನ್ನೆಲೆ ಅರಿಯದೆ ಹೋದರೆ ಅನುವಾದದಲ್ಲಿ ಪ್ರಮಾದ ವಾಗುವ ಸಾಧ್ಯತೆ ಇದೆ. ಉರ್ಮಿಳಾ ಪವಾರರ "ಆಯದಾನ" ಎಂಬ ಆತ್ಮಕಥೆಯಲ್ಲಿ ಪ್ರಾದೇಶಿಕ ಮಹಾರರ ಚಿತ್ರಣ ಇದೆ. ಅಲ್ಲಿ ಮಹಾರರು ಊರ ನಡುಮಧ್ಯೆ ವಾಸಿಸುತ್ತಾರೆ?! ಕರ್ನಾಟಕದಲ್ಲಿ ಹೊಲಗೇರಿ ಊರ ಹೊರಗೆ ಇದ್ದರೆ ರತ್ನಾಗಿರಿಯಲ್ಲಿ ಊರ ನಡು ಮಧ್ಯ ಇದೆ. ಇಂಥ ಪ್ರಸಂಗಗಳು ಅನುವಾದಕನನ್ನು ಪೇಚಿಗೆ ಸಿಲುಕಿಸುತ್ತಿವೆ.

ಡಾ॥ ವಿಶ್ವಾಸ ಪಾಟೀಲರ "ಝಾಡಾ ಝುಡತಿ" ಕಾದಂಬರಿಯ ಅನುವಾದವನ್ನೇನೋ ಮಾಡಿ ಮುಗಿಸಿದೆ. ಆದರೆ ಶೀರ್ಷಿಕೆ ಅನುವಾದಿಸಲು ಒದ್ದಾಡತೊಡಗಿದೆ. "ಝಾಡ" ಎಂದರೆ ಗಿಡ 'ಝುಡತಿ' ಎಂದರೆ ತೊಂದರೆ. ಮರಾಠಿಯಲ್ಲಿ ಅದು ಹೊರಡಿಸುವ ಧ್ವನಿ ಬೇರೆ. ಕನ್ನಡದಲ್ಲಿ ಅದಕ್ಕೆ ಪರ್ಯಾಯ ನುಡಿಗಟ್ಟು ಇಲ್ಲ. ಕೊನೆಗೆ "ನೆಲವೆದ್ದು ಬಡಿಯಿತು" ಎಂದು ಅನುವಾದಿಸಿದೆ. ಈ ಶೀರ್ಷಿಕೆಯನ್ನು ಮೆಚ್ಚಿ ಗುರುಲಿಂಗ ಕಾಪಸೆಯವರು ಕೇಂದ್ರ ಸಾಹಿತ್ಯ ಅಕಾಡೆಮಿಗೆ ಟಿಪ್ಪಣಿ ಬರೆದಿದ್ದರು.

ನಾಥಪಂಥ ಅನುವಾದಿಸುವಾಗ ಗೋರಖನಾಥರ ಕಾವ್ಯ "ಗೋರಖಬಾನಿ" ಎದುರಾಯಿತು. ವಾಣಿ ಇಲ್ಲಿ ಬಾನಿಯಾಗಿದೆ. ಅದರ ಪದಗಳ ಹರವು ಪ್ರಾಕೃತ, ಮರಾಠಿ, ಉರ್ದು ಭಾಷೆಗಳಿಗೆ ಹರಡಿ ಕೊಂಡಿತ್ತು. ಅವು ಮರಾಠಿಗೆ ಅನುವಾದಗೊಳ್ಳುವಾಗ ಪಲ್ಲಟಗೊಂಡಿದ್ದವು. ನಾನು ಚಂದ್ರಕಾಂತ ಕುಸನೂರರ ನೆರವಿನಿಂದ, ಉರ್ದು ಬಲ್ಲ ವಿದ್ವಾಂಸರ ಜೊತೆ ಚರ್ಚೆ ಮಾಡಿ ಸಮಸ್ಯೆ ಪರಿಹರಿಸಿಕೊಂಡೆ.

ಇಂಥ ಸವಾಲುಗಳು ಒಂದಲ್ಲ ಎರಡಲ್ಲ ನೂರಾರು. ಸಮರ್ಥ ಅನುವಾದಕ ತನ್ನದೇ ಮಾರ್ಗವನ್ನು ಕಂಡುಕೊಳ್ಳುತ್ತಾನೆ. ಕೆಲವರು ಯಶಸ್ವಿಯಾಗುತ್ತಾರೆ. ಕೆಲವರು ವಿಫಲರಾಗುತ್ತಾರೆ. ಸರಿಯೋ ತಪ್ಪೋ ಎಂಬುದನ್ನು ಓದುಗರೇ ನಿರ್ಧರಿಸಬೇಕು.

**ಹೊಸತು :** ಯಾವ ಬಗೆಯ ಕೃತಿಗಳನ್ನು ಅನುವಾದಕ್ಕೆ ಆಯ್ಕೆ ಮಾಡಿಕೊಳ್ಳುತ್ತೀರಿ? ಏಕೆ?

**ಪೋಕಳೆ :** ನಾನು ಮರಾಠಿ ಕೃತಿಗಳನ್ನು ಆಯ್ಕೆ ಮಾಡುವ ಮೊದಲು ಮರಾಠಿ ಸಾಹಿತ್ಯ–ಸಂಸ್ಕೃತಿಯ ಬಗೆಗೆ ಬಂದ ವಿಮರ್ಶೆಯನ್ನು ಗಮನಿಸಿ ಮಹತ್ವದ ಲೇಖಕರು, ಕ್ಲಾಸಿಕ್ ಕೃತಿಗಳನ್ನು, ಕನ್ನಡದಲ್ಲಿ ವಿರಳವಾಗಿರುವ ಕೃತಿಗಳನ್ನು ಆಯ್ಕೆ ಮಾಡುತ್ತೇನೆ. ಕೆಲವೊಮ್ಮೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಕೃತಿಗಳನ್ನು ಗಮನಿಸುತ್ತೇನೆ. ವಸ್ತು, ತಂತ್ರ, ಭಾಷೆ ಮುಂತಾದ ಸಂಗತಿಗಳಿಗೆ ಮಹತ್ವ ನೀಡಿ ವಿಶಿಷ್ಟ ಕೃತಿಗಳನ್ನು ಆಯ್ಕೆ ಮಾಡುತ್ತೇನೆ. ಒಮ್ಮೊಮ್ಮೆ ಪ್ರಕಾಶಕರು ಪುಸ್ತಕಗಳನ್ನು ಒದಗಿಸಿ ಭಾಷಾಂತರಿಸಿ ಕೊಡಲು ಕೇಳಿಕೊಳ್ಳುತ್ತಾರೆ. ಹೀಗೆ ಆಯ್ಕೆ ಮಾಡುವಾಗ ಆ ಕೃತಿ ಮರಾಠಿಯ ಸಾಹಿತ್ಯವನ್ನು, ಸಂಸ್ಕೃತಿಯನ್ನು ಪ್ರತಿನಿಧಿಸುವಂತಿರಬೇಕು. ಮರಾಠಿ ಪತ್ರಿಕೆಗಳಲ್ಲೂ ಮಹತ್ವದ ಕೃತಿಗಳ ಚರ್ಚೆ ನಡೆಯುವಾಗ ಗಮನಿಸುತ್ತೇನೆ. ಹೀಗಾಗಿ ಮರಾಠಿ ಆಧುನಿಕ ಕೃತಿಗಳನ್ನು ಹೆಚ್ಚಾಗಿ ಭಾಷಾಂತರಿಸಿದ್ದು ಪ್ರಾಚೀನ ಕಾವ್ಯ, ಗದ್ಯವನ್ನು ವಿರಳವಾಗಿ ಆಯ್ಕೆ ಮಾಡಿದ್ದೇನೆ. ಇದಕ್ಕೆ ಒಂದು ಕಾರಣವೇನೆಂದರೆ ಪ್ರಾಚೀನ ಸಾಹಿತ್ಯವನ್ನು ಅರ್ಥ ಮಾಡಿಕೊಳ್ಳುವುದು ಕಷ್ಟ. ಹೆಚ್ಚು ಶ್ರಮವನ್ನು ಬಯಸುತ್ತದೆ. ಆಗ ಮರಾಠಿ ವಿದ್ವಾಂಸರನ್ನು ಕಂಡು ಪಠ್ಯವನ್ನು ಅರ್ಥ ಮಾಡಿಕೊಳ್ಳಲು ಓಡಾಡಬೇಕಾಗುತ್ತದೆ, ಹೆಣಗಾಡ ಬೇಕಾಗುತ್ತದೆ. ತುಕಾರಾಮನ ಅಭಂಗ, ಸಂತರ ಅಭಂಗ, ಶ್ರೀ ವಿಠ್ಠಲ, ನಾಥಪಂಥ, ದತ್ತಪಂಥದ ಕೃತಿಗಳನ್ನು ಭಾಷಾಂತರಿಸುವಾಗ ತುಂಬ ಶ್ರಮ ಪಟ್ಟಿದ್ದೇನೆ. ಆದರೂ ತೃಪ್ತಿಕರ ಭಾಷಾಂತರ ಸಾಧ್ಯ ವಾಗುವುದಿಲ್ಲ. ಇದಕ್ಕೆ ನನ್ನ ಇತಿಮಿತಿಯೂ ಕಾರಣ.

**ಹೊಸತು :** ಅನುವಾದದ ತೊಡಕುಗಳೇನು?

**ಪೋಕಳೆ :** ಅನುವಾದಕನಾದವನು ಎದುರಿಸ ಬೇಕಾದ ತೊಡಕುಗಳು ಅನೇಕ. ಮೊದಲನೆಯದಾಗಿ ಎರಡೂ ಭಾಷೆಗಳನ್ನು ಬಲ್ಲವನಾಗಿರಬೇಕು. ಬರೇ ಭಾಷೆ ಗೊತ್ತಿದ್ದ ಮಾತ್ರಕ್ಕೆ ಅನುವಾದಿಸಲು ಹೋದರೆ ಹಲವಾರು ಸಮಸ್ಯೆಗಳನ್ನು ಎದುರಿಸ ಬೇಕಾಗುತ್ತದೆ. ಮೂಲ ಭಾಷೆಯ ಸಂಪೂರ್ಣ ಸಾಹಿತ್ಯ ಚರಿತ್ರೆ ಗೊತ್ತಿದ್ದರೆ ಉತ್ತಮ. ಇದರ ಜೊತೆಗೆ ಸಾಂಸ್ಕೃತಿಕ ಪರಿಚಯವಂತೂ ಇರಲೇಬೇಕು. ಭಾಷಿಕ ಸಮಸ್ಯೆಗಿಂತ ಸಾಂಸ್ಕೃತಿಕ ಸಮಸ್ಯೆ ತುಂಬ ಕಠಿಣವಾಗಿರುತ್ತದೆ. ಒಂದು ಭಾಷೆಯಲ್ಲಿ ಹಲವು ಜನ ಸಮುದಾಯಗಳಿರುತ್ತವೆ. ಅವರ ಜೀವನ ಪದ್ಧತಿ ರೀತಿ ರಿವಾಜು ಬೇರೆ ಬೇರೆಯಾಗಿರುತ್ತದೆ. ಅವುಗಳ ಅಧ್ಯಯನ ತುಂಬ ಮಹತ್ವದ್ದು.

ನಾನು ಮಾಧವಿ ದೇಸಾಯಿಯವರ "ಕುಣಿಯೇ ಘುಮಾ" ಎಂಬ ಆತ್ಮಕತೆಯನ್ನು ಭಾಷಾಂತರಿಸುವಾಗ ಪುಸ್ತಕದ ಶೀರ್ಷಿಕೆಯಿಂದಲೇ

ಸಮಸ್ಯೆ ಎದುರಾಯಿತು. ಈ ಹೆಸರಿನ ಹಿಂದೆ ಒಂದು ಸಾಂಸ್ಕೃತಿಕ ಪರಂಪರೆ ಇದೆ. ಮಹಾರಾಷ್ಟ್ರದಲ್ಲಿ ಹೊಸದಾಗಿ ಮದುವೆಯಾಗಿ ಪತಿಯ ಮನೆ ಸೇರಿದ ಸೊಸೆಯು ಅತ್ತೆಯ ಮನೆಯಲ್ಲಿ ಎಲ್ಲರೂ ಹೇಳಿದಂತೆ ಕುಣಿಯಬೇಕಾಗುತ್ತದೆ. ಇಲ್ಲಿ "ಘುಮಾ" ಎಂದರೆ ಸೊಸೆ ಎಂದರ್ಥ. ಅತ್ತೆ "ಕುಣಿಯೇ ಘುಮಾ" ಎಂದಾಗ ಸೊಸೆ "ನಾನು ಹೇಗೆ ಕುಣಿಯಲಿ" ಅಂತ ಪ್ರಶ್ನಿಸುತ್ತಾಳೆ. ಆಗ ಅತ್ತೆಯಾದವಳು ಹೀಗೆ ಹೀಗೆ ಕುಣಿ ಎನ್ನುತ್ತಾಳೆ. ಅತ್ತೆ ಮನೆಯವರು ಹಾಕಿದ ವರ್ತುಲದೊಳಗೆ ಅವರು ಹೇಳಿದಂತೆ ಕುಣಿಯಬೇಕು. ಹೀಗೆ ಅತ್ತೆ ಮನೆಯ ಮಾವ, ಪತಿ, ನಾದಿನಿ ಮುಂತಾದವರು ಹೇಳಿದಂತೆ ಸೊಸೆಯಾದವರು ವರ್ತುಲದೊಳಗೆ ಕುಣಿಯಬೇಕು. ಕುಣಿಯುವಾಗ ವರ್ತುಲ ದಾಟುವಂತಿಲ್ಲ, ಇದನ್ನೇ ರೂಪಕವಾಗಿ ಬಳಸಲಾಗಿದೆ. ಈ ಸಾಂಸ್ಕೃತಿಕ ಪರಿಪ್ರೇಕ್ಷ್ಯವನ್ನು ಅರ್ಥ ಮಾಡಿಕೊಳ್ಳದೇ ಹೋದರೆ ನೀವು ಪಾಠಾಂತರಿಸುವುದು ಕಷ್ಟವಾಗುತ್ತದೆ. ಇಂಥ ಎಷ್ಟೋ ಸಾಂಸ್ಕೃತಿಕ, ಧಾರ್ಮಿಕ, ರಾಜಕೀಯ, ಚಾರಿತ್ರಿಕ ತೊಡಕುಗಳು ಬರುತ್ತವೆ. ಇಂಥಲ್ಲಿ ಅಡಿ ಟಿಪ್ಪಣಿ, ಪರಿಶಿಷ್ಟ ನೀಡಿದರೆ ಓದುಗರಿಗೆ ಅನುಕೂಲವಾಗುತ್ತದೆ.




**ಹೊಸತು :** ಅನುವಾದಕ ಯಾವುದಕ್ಕೆ ನಿಷ್ಠನಾಗಿರಬೇಕು?

**ಪೋಕಳೆ :** ಅನುವಾದಕ ಮೂಲಕ್ಕೆ ನಿಷ್ಠನಾಗಿರಬೇಕು. ಇದರಲ್ಲಿ ಎರಡು ಮಾತಿಲ್ಲ. ಅನುವಾದದಲ್ಲಿ ಭಾಷಾಂತರ, ಭಾವಾನುವಾದ, ಛಾಯಾನುವಾದ, ರೂಪಾಂತರ ಮುಂತಾದ ಪ್ರಕಾರಗಳಿವೆ. ನೀವು ಯಾವ ಪ್ರಕಾರ ಆಯ್ಕೆ ಮಾಡಿಕೊಳ್ಳುತ್ತೀರೋ ಅದರ ಮೇಲೆ ಈ ನಿಷ್ಠೆ ಎನ್ನುವುದು ಅವಲಂಬಿಸಿರುತ್ತದೆ. ನಾನು ಮಾಡುವುದು ಭಾವಾನುವಾದ. ಒಮ್ಮೊಮ್ಮೆ ಸಂಗ್ರಹ ಅನುವಾದವನ್ನೂ ಮಾಡಿದ್ದೇನೆ. ಈ ಹಿನ್ನೆಲೆಯಲ್ಲಿ ನೀವು ಮೂಲಕ್ಕೆ ತೀರಾ ನಿಷ್ಠರಾಗಿರಬೇಕಿಲ್ಲ. ಸೃಜನಾತ್ಮಕವಾಗಿ ಅನುವಾದ ಮಾಡುವ ಸ್ವಾತಂತ್ರ್ಯ ಬಳಸಿಕೊಳ್ಳಬಹುದು. ಕನ್ನಡ ಓದುಗರಿಗೆ ನನ್ನ ಅನುವಾದ ಸುಲಭ, ಸರಳವಾಗಿ ಓದಿಸಿಕೊಂಡು ಹೋಗುವಂತೆ ನಾನು ಎಚ್ಚರ ವಹಿಸುತ್ತೇನೆ. ಇಂಥಲ್ಲಿ ಸ್ವಲ್ಪ ನಿಷ್ಠೆ ಸಡಿಲವಾಗುತ್ತದೆ. ಆದರೆ ಅನ್ಯಾಯ ಮಾತ್ರ ಖಂಡಿತ ಆಗದಂತೆ ಎಚ್ಚರ ವಹಿಸುತ್ತೇನೆ. ಬಹಳ ಹಿಂದೆ ಅನುವಾದ ಮಾಡಿದ ನನ್ನದೇ ಕೃತಿಯನ್ನು ಮತ್ತೆ ಓದಿದಾಗ ಓಹೋ ಇದು ಹೀಗಾಗಬಾರದಿತ್ತಲ್ಲ! ಹೀಗಾಗಿದ್ದರೆ ಚೆನ್ನಾಗಿರುತ್ತಿತ್ತು ಎಂದು ಅನ್ನಿಸುತ್ತದೆ. ಕಾಲಾಂತರದಲ್ಲಿ ನಮ್ಮ ತಪ್ಪು ನಮಗೇ ಗೋಚರಿಸುತ್ತದೆ. ಮುಂದಿನ ಅನುವಾದದಲ್ಲಿ ಹೀಗಾಗದಂತೆ ಜಾಗರೂಕತೆ ವಹಿಸುವುದು ಪ್ರಜ್ಞಾವಂತಿಕೆಯ ಲಕ್ಷಣ. ಅನುವಾದಿಸಿದ ಮೂಲ ಹಸ್ತಪ್ರತಿಯನ್ನು ಪರಿಣತರಿಂದ ಪರಿಶೀಲನೆ ಮಾಡಿಸುವುದು ಉತ್ತಮ. ಇತ್ತೀಚೆಗೆ ನನಗೆ ಪ್ರೊ॥ ಆರ್. ವಿ. ಕುಲಕರ್ಣಿ ಎಂಬ ಮಿತ್ರರು ದೊರಕಿದ್ದಾರೆ. ಅವರು ಹಸ್ತಪ್ರತಿಯನ್ನು ಓದಿ ತಿದ್ದುಪಡಿ ಇದ್ದಲ್ಲಿ ಚರ್ಚಿಸಿ ಸೂಚಿಸುತ್ತಾರೆ. ಅಂಥವರು ಸಿಗುವುದು ವಿರಳ.

**ಹೊಸತು :** ಅನುವಾದದ ವಸ್ತು – ವಿಷಯಗಳಿಗೆ ಸಂಬಂಧಿಸಿದಂತೆ ನಿಮ್ಮ ವೈಯಕ್ತಿಕ ನಿಲುವುಗಳೇನು?

**ಪೋಕಳೆ :** ಅನುವಾದದ ವಸ್ತು ವಿಷಯಗಳಿಗೆ ಸಂಬಂಧಿಸಿದಂತೆ ನಾನು ಯಾವುದೇ ಇದಮಿತ್ಥಂ ಎಂಬ ನಿಲುವು ಹೊಂದಿಲ್ಲ. ನಮ್ಮ ಯೋಚನೆಗಳನ್ನು ವಿಸ್ತರಿಸುವ, ಹೊಳವು ನೀಡುವ, ಹೊಸ ಗಾಳಿ ತರುವ ಯಾವುದೇ ವಸ್ತು ವಿಷಯಗಳನ್ನು ಅನುವಾದಿಸಲು ಆಸಕ್ತಿ ತೋರುತ್ತೇನೆ. ನನ್ನ ಇದುವರೆಗಿನ ಅನುವಾದಗಳನ್ನು ನೋಡಿದರೆ ವಿರುದ್ಧ ಧ್ರುವಗಳಂತಿರುವ ವಿಷಯ ವಸ್ತುಗಳ ಅನುವಾದದ ವೈವಿಧ್ಯ ನೋಡಬಹುದು. ಭಕ್ತಿಪಂಥ ಮತ್ತು ನಾಸ್ತಿಕವಾದದ ಕೃತಿಗಳನ್ನು ಒಂದೇ ಭಾವದಿಂದ ಅನುವಾದ ಮಾಡುತ್ತೇನೆ. ಯಾವುದೇ ಪೂರ್ವಾಗ್ರಹ ಇಟ್ಟುಕೊಳ್ಳುವುದಿಲ್ಲ. ನಾನು ಖಾಸಗಿಯಾಗಿ ಕೃಷಿ ಮತ್ತು ತ್ವಚೆಯ ವೈದ್ಯ ವಿಜ್ಞಾನದ ಕೃತಿಗಳನ್ನೂ ಭಾಷಾಂತರ ಮಾಡಿಕೊಟ್ಟಿದ್ದೇನೆ. ನನ್ನ ಅನುವಾದದ ಮೂಸೆಯಲ್ಲಿ ಮೂಲ ಕೃತಿಯು ಸರಿಯಾಗಿ ಎರಕಗೊಂಡು ರೂಪು ತಳೆಯುತ್ತದೋ ಇಲ್ಲವೋ ಎಂಬುದರ ಕಡೆ ಮಾತ್ರ ಗಮನ ಕೊಡುತ್ತೇನೆ. ಹಾಗೆಯೇ ಬುಡಕಟ್ಟು ಜನಾಂಗದ ಭಾಷಿಕ, ಸಾಂಸ್ಕೃತಿಕ ಸಮಸ್ಯೆಗಳ ಕುರಿತು ಗಂಭೀರವಾಗಿ ಯೋಚಿಸುವ, ವಿಶ್ವದ ಭಾಷೆಗಳ ಅಳಿವು ಉಳಿವಿನ ಬಗ್ಗೆ ಆಲೋಚಿಸುವ ಗಣೇಶ್ ದೇವಿಯವರ ಕೃತಿಗಳ ಅನುವಾದ ನನಗೆ ಇಷ್ಟ.

**ಹೊಸತು :** ಅನುವಾದದ ಇತರ ಅನುಭವಗಳು?

**ಪೋಕಳೆ :** "ಕುಣಿಯೇ ಘುಮಾ" ಕೃತಿಯನ್ನು ಓದಲೆಂದು ಕನ್ನಡ ಅಧ್ಯಾಪಕರೊಬ್ಬರಿಗೆ ಕೊಟ್ಟೆ. ಅವರು ಪುಸ್ತಕದ ಮೇಲೆ ಕಣ್ಣಾಡಿಸುತ್ತಿರುವಾಗ ಅವರ ಬಳಿಗೆ ಬಂದ ಒಬ್ಬರು "ಯಾವ ಪುಸ್ತಕ ಸರ್ ?" ಎಂದರು. ಆಗ ಅವರು "ಕುಣಿಯೇ ಘುಮಾ" ಎಂದರು. ಆಗ ಬಂದಿದ್ದವರು "ಹಾಗೆಂದರೇನು ಸರ್?" ಎಂದು ಪ್ರಶ್ನಿಸಿದಾಗ

ಇವರು "ಕುಣಿಯೇ ಗುಮ್ಮಾ ಎಂದರೆ ದೆವ್ವಕ್ಕೆ ಕುಣಿ ಎಂದು ಹೇಳುತ್ತಿದ್ದಾರೆ" ಎಂದು ವಿವರಿಸತೊಡಗಿದರು. ನನಗೆ ಪೇಚಾಟವಾಯಿತು.

ಒಮ್ಮೆ ಸ್ವಾಯತ್ತ ವಿಶ್ವವಿದ್ಯಾಲಯದ ಪಠ್ಯಪುಸ್ತಕ ಸಮಿತಿಯವರು ಪಠ್ಯಕ್ಕೆ ಪೂರಕವಾದ ನನ್ನ ಅನುವಾದಿತ ಕೃತಿಯೊಂದನ್ನು ಕಳುಹಿಸಲು ಕೇಳಿಕೊಂಡರು.



ನಾನು ಶ್ಯಾಮ ಮನೋಹರ ಅವರ 'ಶೀತಯುದ್ಧ ಸದಾನಂದ'ದ ಅನುವಾದ "ಲಿಮಿಟೆಡ್ ಮಾನವೀಯತೆ" ಕಳುಹಿಸಿಕೊಟ್ಟೆ. ಪಠ್ಯಪುಸ್ತಕ ಸಮಿತಿಯವರು "ಮಕ್ಕಳಿಗೆ ಮಾನವೀಯತೆಯನ್ನು ಲಿಮಿಟೆಡ್ ಆಗಿ ಕಲಿಸುವಂಥ ಪುಸ್ತಕವನ್ನೇಕೆ ಕಳುಹಿಸಿಕೊಟ್ಟಿದ್ದೀರಿ" ಎಂದು ಆಕ್ಷೇಪವೆತ್ತಿದರು. ನಾನು "ಆ ಪುಸ್ತಕದ ವಿಷಯ ಮಾನವೀಯತೆಯನ್ನು ಲಿಮಿಟೆಡ್ ಆಗಿ ಕಲಿಸುವಂಥದ್ದಲ್ಲ. ಮನುಷ್ಯನ ಸ್ವಭಾವ ಹೇಗೆ ಲೆಕ್ಕಾಚಾರ ಹಾಕಿ ಮಾನವೀಯತೆಯನ್ನು ಲಿಮಿಟೆಡ್ ಆಗಿ ಬೆಳೆಸಿಕೊಳ್ಳುತ್ತದೆ, ಬಳಸಿಕೊಳ್ಳುತ್ತಿದೆ ಎಂಬುದನ್ನು ಪುಸ್ತಕ ಪರಿಣಾಮಕಾರಿ ನಾಟಕೀಯ ಸನ್ನಿವೇಶಗಳ ಮೂಲಕ ತೆರೆದಿಡುತ್ತಾ ಹೋಗುತ್ತದೆ" ಎಂದು ವಿವರಿಸಿದೆ. "Don't judge a book by its cover" ಎಂಬುದು ಎಷ್ಟೋ ಸಲ ನನ್ನ ಪಾಲಿಗೆ "... by its title" ಎಂದಾಗಿದೆ. (ನಗು) ಲಿಮಿಟೆಡ್ ಮಾನವೀಯತೆ ಮರಾಠಿಯಲ್ಲಿ ಚಲನಚಿತ್ರ ಕೂಡ ಆಗಿದೆ.

ಮರಾಠಿಯ ದೊಡ್ಡ ಲೇಖಕ ವಿಶ್ರಾಮ ಬೇಡಕರ "ರಣಾಂಗಣ" ಎಂಬ ಜರ್ಮನಿಯ ಪ್ರವಾಸ ಕಥನವನ್ನು ಬರೆದರು. ಅದು ನಾಜಿ ಯಹೂದಿಗಳ ಸಂಘರ್ಷವನ್ನು ಸಶಕ್ತವಾಗಿ ಹಿಡಿದಿಟ್ಟಿದ್ದರಿಂದ ಬಹಳ ಪ್ರಸಿದ್ಧವಾಯಿತು. ನಾನು ಒಂದು ಪೋಸ್ಟ್ ಕಾರ್ಡಿನಲ್ಲಿ ಅವರಿಗೆ ಅನುಮತಿ ಕೇಳಿದೆ. ಅವರು ಕೂಡ ಎರಡು ವರ್ಷದೊಳಗೆ ಪ್ರಕಟಿಸಬೇಕೆಂದು ಷರತ್ತು ಹಾಕಿ ಪೋಸ್ಟ್ ಕಾರ್ಡಿನಲ್ಲಿಯೇ ಅನುಮತಿ ನೀಡಿದರು. ಅದನ್ನು 'ಸುಧಾ' ವಾರ ಪತ್ರಿಕೆಗೆ ಕಳುಹಿಸಿಕೊಟ್ಟೆ. ಆದರೆ ಅದು ಎರಡು ವರ್ಷದ ನಂತರ ಪ್ರಕಟವಾಯಿತು. ಅದನ್ನು ಖುಷಿಯಿಂದ ವಿಶ್ರಾಮ ಬೇಡಕರರವರಿಗೆ ತಿಳಿಸಿದೆ. ಮರು ಉತ್ತರದಲ್ಲಿ ಅವರು "ನೀವು ನನ್ನ ಅನುಮತಿ ತೆಗೆದುಕೊಂಡಿಲ್ಲ. ನಾನು ನ್ಯಾಯಾಲಯದಲ್ಲಿ ಇದರ ಕುರಿತು ದಾವೆ ಹಾಕುತ್ತೇನೆ. ನೀವು ಅಲ್ಲಿಯೇ ಉತ್ತರಿಸಿ" ಎಂದು ಪತ್ರ ಬರೆದರು. ನನಗೆ ಗಾಬರಿ ಯಾಯಿತು. ಏಕೆಂದರೆ ಅವರ ಅನುಮತಿಯ ಮೂಲ ಪತ್ರವನ್ನೇ ನನ್ನ ಅನುವಾದದೊಂದಿಗೆ ಪತ್ರಿಕೆಗೆ ಕಳುಹಿಸಿಕೊಟ್ಟಿದ್ದೆ. ಅದರ ಪ್ರತಿ ಕೂಡ ನನ್ನ ಹತ್ತಿರ ಇರಲಿಲ್ಲ. ಇದನ್ನು ಪತ್ರಿಕೆಯವರಿಗೆ ವಿವರಿಸಿ ಬರೆದೆ. ಅವರು ತಮ್ಮ ಹತ್ತಿರವಿದ್ದ ಮೂಲ ಅನುಮತಿ ಪತ್ರ ಒದಗಿಸಿದರು. ಕೂಡಲೇ ವಿಶ್ರಾಮ ಬೇಡಕರ ಮರು ಪತ್ರದಲ್ಲಿ "ದಯವಿಟ್ಟು ನನ್ನನ್ನು ಕ್ಷಮಿಸಿ, ನನ್ನ ವಯಸ್ಸಿನ ಮರೆವಿಯಿಂದಾಗಿ ಇಂಥ ಅಚಾತುರ್ಯ ನಡೆಯಿತು. ಮೂಲ ಲೇಖಕನಾಗಿ ನನಗೆ ಬರಬೇಕಾಗಿರುವ ರಾಯಲ್ಟಿ ಹಣವನ್ನು ಬಾಬಾ ಆಮ್ಟೆಯವರ ಆಶ್ರಮಕ್ಕೆ ನೀಡಿ. ನನಗೆ ಬೇಡ" ಎಂದು ಬರೆದರು. ಇದನ್ನು ಮರೆಯಲಾರೆ.

ಮರಾಠಿಯಲ್ಲಿ ಕೃತಿಯ ಸ್ವಾಮ್ಯ ಲೇಖಕರದ್ದಾಗಿದ್ದರೆ ಮುನ್ನುಡಿಯ ಸ್ವಾಮ್ಯ ಅದನ್ನು ಬರೆದ ಲೇಖಕನದಾಗಿರುತ್ತದೆ. ಇಲ್ಲಿ ನಾವು ಇಬ್ಬರದೂ ಅನುಮತಿಯನ್ನು ಪಡೆಯಬೇಕು. ಇಂಥದ್ದು ನಮ್ಮ ಕನ್ನಡದಲ್ಲಿ ಇಲ್ಲ. ಕೆಲವು ಲೇಖಕರು ಅನುಮತಿ ನೀಡುವ ಮುಂಚೆಯೇ ಗೌರವಧನ ಕೇಳುತ್ತಾರೆ. ಗೌರಿ ದೇಶಪಾಂಡೆ, ಖ್ಯಾತ ಅಂತರರಾಷ್ಟ್ರೀಯ ಭಾಷಾ ವಿಜ್ಞಾನಿ ಡಾ॥ ಗಣೇಶ ದೇವಿ ಅಂತಹ ಲೇಖಕರು ಒಂದು ರೂಪಾಯಿಯನ್ನೂ ಪಡೆಯದೇ ತಮ್ಮ ಹಕ್ಕುಗಳನ್ನು ನೀಡಿದ ಉದಾಹರಣೆಯೂ ಇದೆ. ಒಂದೊಂದು ಸಲ ನಾನು ನನ್ನ ಕೈಯಿಂದ ಮೂಲ ಲೇಖಕರಿಗೆ ಗೌರವ ಧನವನ್ನು ನೀಡಿದ್ದೂ ಇದೆ.

**ಹೊಸತು :** ಕನ್ನಡದ ಕುರಿತು ಮರಾಠಿ ಸಾಂಸ್ಕೃತಿಕ ಲೋಕದ ಅಭಿಪ್ರಾಯ ಹೇಗಿದೆ?

**ಪೋಕಳೆ :** ಮರಾಠಿ ಲೇಖಕರು ಅಥವಾ ಮರಾಠಿಯ ಸಾಂಸ್ಕೃತಿಕ ಲೋಕವೂ ಕನ್ನಡ ಭಾಷೆಯ ಸಂಸ್ಕೃತಿ ಪರಂಪರೆಯನ್ನು ಗೌರವಿಸುತ್ತದೆ. ಇಂದು ಕನ್ನಡದ ಶಿವರಾಮ ಕಾರಂತ, ಗಿರೀಶ ಕಾರ್ನಾಡ, ಭೈರಪ್ಪನವರಿಗೆ ಮಹಾರಾಷ್ಟ್ರದಲ್ಲಿ ತುಂಬ ಗೌರವ ಇದೆ. ಇವರನ್ನು ಅಲ್ಲಿಯ ಜನರು ಸಾಹಿತ್ಯ ಸಮ್ಮೇಳನಕ್ಕೆ ಆಮಂತ್ರಿಸಿ ಅವರ ಕೃತಿಗಳನ್ನು ಗೌರವಿಸುತ್ತಾರೆ. ಕಾರ್ನಾಡರ ನಾಟಕಗಳು ಯಶಸ್ವಿಯಾಗಿ ರಂಗ ಪ್ರಯೋಗವಾಗಿವೆ. ಭೈರಪ್ಪನವರ ಕಾದಂಬರಿಗಳಿಗೆ ಅಪಾರ ಬೇಡಿಕೆಯಿದೆ. ಅವರ ಕೃತಿಗಳು ಹೆಚ್ಚು ಮಾರಾಟವಾಗುತ್ತವೆ. ತೇಜಸ್ವಿ, ಅನಂತಮೂರ್ತಿ, ವೈದೇಹಿ, ಸುಧಾಮೂರ್ತಿ ಅಲ್ಲಿ ಜನಪ್ರಿಯರಾಗಿದ್ದಾರೆ. ಕಾರ್ನಾಡ, ಭೈರಪ್ಪನವರ ಸಮಗ್ರ ಕೃತಿಗಳು ಮರಾಠಿಗೆ ಭಾಷಾಂತರ ಗೊಂಡಿವೆ. ಹೀಗೆ ಒಬ್ಬ ಲೇಖಕನ ಸಮಗ್ರ ಕೃತಿ ಬೇರೆ ಭಾಷೆಗೆ ಅನುವಾದಗೊಂಡು ಜನಪ್ರೀತಿಯನ್ನು ಪಡೆದಿರುವುದು ವಿರಳ. ಅದೇ ರೀತಿ ಮರಾಠಿಯ ಯಾವದೇ ಲೇಖಕರ ಸಮಗ್ರ ಕೃತಿಗಳು ಕನ್ನಡಕ್ಕೆ ಬಂದಿಲ್ಲ. ಹಿಂದೆ ಗಳಗನಾಥರು ಇಂಥ ಪ್ರಯತ್ನ ಮಾಡಿದ್ದರು. ಹ. ನಾ. ಆಪ್ಟೆಯವರ ಬಹಳಷ್ಟು ಕೃತಿಗಳನ್ನು ಅವರು ಕನ್ನಡಕ್ಕೆ ತಂದಿದ್ದಾರೆ. ಈಗ ಉಮಾ ಕುಲಕರ್ಣಿಯವರು ಮರಾಠಿಯಲ್ಲಿ ಇಂಥ ಮಹತ್ವದ ಪ್ರಯತ್ನ ಮಾಡಿದ್ದು ಶ್ಲಾಘನೀಯ.

**ಹೊಸತು :** ಮುಂದಿನ ಯೋಜನೆ?

**ಪೋಕಳೆ :** ಮಹಾನುಭಾವ ಪಂಥದ ಪಠ್ಯ, ಮರಾಠಿ ಸಂತರ ಅಭಂಗಗಳು, ವೈಚಾರಿಕ ಸಾಹಿತ್ಯ, ಸಮಾಜ ಸುಧಾರಕರಾದ ಫುಲೆ, ಅಂಬೇಡ್ಕರರ ವಿಚಾರಗಳನ್ನು, ಲೇಖನಗಳನ್ನು ಕನ್ನಡಕ್ಕೆ ತರ ಬೇಕೆಂದಿದೆ. ಇದಕ್ಕೆ ಮರಾಠಿ ವಿದ್ವಾಂಸರ ಸಹಾಯಬೇಕು. ಅಂಥವರು ಈಗ ವಿರಳ. ವಚನ ಸಾಹಿತ್ಯ, ಕನಕ ಸಾಹಿತ್ಯ ಮರಾಠಿಗೆ ಭಾಷಾಂತರಗೊಂಡಿವೆ. ಹಾಗೆಯೇ ಮರಾಠಿಯ ಕ್ಲಾಸಿಕ್‌ಗಳು ಕನ್ನಡಕ್ಕೆ ಬರಬೇಕು. ಹಲವು ಅನುವಾದಕರು ಸೇರಿ ಮಾಡಬೇಕಾದ ಕಾರ್ಯವಿದು. ಇದು ಒಬ್ಬನೇ ಮಾಡಿ ಮುಗಿಸುವ ಯೋಜನೆಯಲ್ಲ. ಪ್ರಾತಿನಿಧಿಕವಾಗಿ ಆಗೀಗ ಪ್ರಯತ್ನಿಸುತ್ತಿದ್ದೇನೆ. ಅನುವಾದ ನನ್ನ ಪಾಲಿಗೆ ಒಂದು ಯಜ್ಞ. ನನ್ನ ಪಾಲಿನ ಹವಿಸ್ಸನ್ನು ಅರ್ಪಿಸುವ ಸಂಕಲ್ಪ ನನ್ನದು.

**ರಾಜಕುಮಾರ ಎಸ್. ಸಂಕಪಾಳ**
ಸರ್ಕಾರಿ ಪದವಿಪೂರ್ವ ಕಾಲೇಜು, ಮಜಲಟ್ಟಿ, ಕರೋಶಿ ಅಂಚೆ, ಚಿಕ್ಕೋಡಿ ತಾಲೂಕು
ಬೆಳಗಾವಿ – ೫೯೧ ೨೨೧
rajkumar.sankpal@gmail.com

## 'ಹೊಸತು' ಪ್ರಾಯೋಜಕರಿಗೆ ಹೃತ್ಪೂರ್ವಕ ಧನ್ಯವಾದಗಳು

ನಾವು ಓದುಗರಲ್ಲಿ ಮಾಡಿಕೊಂಡ ವಿಶೇಷ ಮನವಿಗೆ ಸ್ಪಂದಿಸಿ ಆರ್ಥಿಕ ಬೆಂಬಲ ನೀಡುವ ಮೂಲಕ ನೆರವಾದ ಕೆಳಕಂಡ ಆತ್ಮೀಯ ಬಂಧುಗಳಿಗೆ 'ಹೊಸತು' ಬಳಗದ ಕೃತಜ್ಞತೆಗಳು.

1. **ಶ್ರೀಮತಿ ಶಾರದಾ ಕೃಷ್ಣರಾವ್,** ಬೆಂಗಳೂರು **ರೂ. 10,000/–**
2. **ಶ್ರೀ ಕಂನಾಡಿಗಾ ನಾರಾಯಣ,** ಬೆಂಗಳೂರು **ರೂ. 5,000/–**
3. **ಶ್ರೀ ರಮೇಶ್ ಟಿ. ಎಂ.,** ಬೆಂಗಳೂರು **ರೂ. 5,000/–**
4. **ಶ್ರೀ ಟಿ. ಆರ್. ರೇವಣ್ಣ,** ತುಮಕೂರು **ರೂ. 5,000/–**
5. **ಶ್ರೀ ಕೆ. ಚಂದ್ರಹಾಸ,** ಬೆಂಗಳೂರು **ರೂ. 5,000/–**
6. **ಶ್ರೀಮತಿ ಪ್ರತಿಭಾ ಸಿ. ಕೆ. ಮತ್ತು ಗೋಪಿವಲ್ಲಭ ಎಸ್. ರಾವ್** ಯು.ಎಸ್.ಎ. **ಯು.ಎಸ್. ಡಾಲರ್ 200/–**

'ಹೊಸತು' ಓದುಗರು, ಹಿತೈಷಿಗಳು ಮುಂದೆಯೂ ಇದೇ ರೀತಿ ಸಹಕರಿಸಿ ಪತ್ರಿಕೆಯು ಆರ್ಥಿಕವಾಗಿ ಸದೃಢಗೊಳ್ಳಲು ನೆರವಾಗಬೇಕೆಂದು ವಿನಮ್ರವಾಗಿ ಕೋರುತ್ತೇವೆ. **– ಪ್ರಕಾಶಕ**

**ಬಣ್ಣ** (ಮಕ್ಕಳಿಗಾಗಿ ಕಥೆಗಳು) ಗಣೇಶ ಪಿ. ನಾಡೋರ

**ಪುಟ : ೬೪** **ಬೆಲೆ : ರೂ. ೫೦/–**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
ನಂ. ೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಬೆಂಗಳೂರು – ೫೬೦ ೦೦೧

*ಮಕ್ಕಳನ್ನು ಬಣ್ಣ ಬಣ್ಣದ ಹೂವುಗಳಿಗೆ ಹೋಲಿಸಿ ನೋಡಿ! ಎಲ್ಲವೂ ವಿಧವಿಧವಾದ ಚೆಲುವನ್ನು ಸೂಸುತ್ತವೆ. ಹಾಗೆಯೇ ಇಲ್ಲಿನ ಕಥೆಗಳೂ ಕೂಡ. ಇಲ್ಲಿನ ಮಕ್ಕಳ ಪ್ರಪಂಚವೆಂದರೆ ಅನೇಕ ಬಣ್ಣಗಳ ರಮ್ಯಲೋಕ. ಮಕ್ಕಳ ಆಸೆಗಳೆಲ್ಲಾ ಚಿಕ್ಕ ಪುಟ್ಟವಾದರೂ ಹಿರಿಯರ ದೃಷ್ಟಿಯಲ್ಲಿ ಅವು ನಗಣ್ಯ. ಮಗುವಿನ ಪುಟ್ಟ ಆಸೆಯೊಂದನ್ನು ನೆರವೇರಿಸಿದಾಗ ಅದರ ಮುಖವರಳುವುದನ್ನು ನೋಡಿ! ಇಲ್ಲಿನ ಕಥೆಗಳೆಲ್ಲ ಮಕ್ಕಳು ಬಯಸಿದಾಗ ಸುಲಭವಾಗಿ ಸಿಗದಿರುವಂಥ ಕುಟುಂಬದ ಬಡತನದ ಕಥೆಗಳಾದರೂ ಮಕ್ಕಳ ಜಾಣತನಕ್ಕೇನೂ ಇಲ್ಲಿ ಬಡತನವಿಲ್ಲ. ವಿವೇಚನಾರಹಿತ ಹಿರಿಯರ ನಿರ್ಧಾರಗಳಿಗೆ, ಜಿಪುಣತನಕ್ಕೆ, ಆರ್ಥಿಕ ಸವಾಲುಗಳಿಗೆ ಕೆಲವೊಮ್ಮೆ ಮಕ್ಕಳೇ ದಾರಿ ತೋರಿಸಿರುವುದೂ ಇದೆ. ಕೃತಿಯಲ್ಲಿನ 'ಕಪ್ಪೆಮರಿಯ ಸ್ನೇಹ' ಕಥೆಯ ಸಂದೇಶವೊಂದು ಹಂಚಿ ತಿನ್ನುವುದನ್ನೂ, ಸದ್ವರ್ತನೆಯನ್ನು, ಸ್ನೇಹಭಾವವನ್ನು ತಿಳಿಸಿಕೊಡಬಲ್ಲುದು. ಅಂತೂ ಮಕ್ಕಳಿಗೂ, ಹಿರಿಯರಿಗೂ ಉತ್ತಮ ಆದರ್ಶಗಳನ್ನು ಕಲಿಸಬಲ್ಲ ಘರ್ಷಣೆಯಿಲ್ಲದೆ ಬದುಕಬಹುದಾದ ನೀತಿಪಾಠವನ್ನು ಹೇಳಬಲ್ಲ ಹಲವು ವಿಷಯಗಳಿಲ್ಲಿವೆ.*



**ಮಹಿಳಾ ಪೊಲೀಸರು**

ಎಂ. ಮಂಜುನಾಥ ಬಮ್ಮನಕಟ್ಟಿ

**ಪುಟ : xiv+೧೬೬**
**ಬೆಲೆ : ರೂ. ೧೦೦/–**

**ಕರ್ನಾಟಕ ಸಾಹಿತ್ಯ ಅಕಾಡೆಮಿ**
ಕನ್ನಡ ಭವನ, ಜೆ.ಸಿ. ರಸ್ತೆ
ಬೆಂಗಳೂರು – ೫೬೦ ೦೦೨

*ಇದು ನಮ್ಮ ರಾಜ್ಯದ ಮಹಿಳಾ ಪೊಲೀಸರ ಕುರಿತು ಪ್ರಕಟವಾದ ಮೊದಲ ಕೃತಿಯೆಂಬ ಗೌರವಕ್ಕೆ ಪಾತ್ರವಾದ ಕೃತಿ. ಪೊಲೀಸ್ ಇಲಾಖೆಗೆ ಮಹಿಳೆಯರ ನೇಮಕಾತಿ ಪ್ರಾರಂಭವಾದಾಗಲೇ ಅನೇಕರಿಂದ ಪ್ರಶಂಸೆಗಳೂ, ಇವರ ಕೈಲಾಗುವುದೇನು? ಎಂಬ ಟೀಕೆಗಳೂ ಸಹಜವಾಗೇ ಬಂದಿದ್ದವು. ಮಹಿಳೆಯರೂ ಇದನ್ನೊಂದು ಸವಾಲೆಂಬಂತೆ ಸ್ವೀಕರಿಸಿದ್ದರು. ಪಾಶ್ಚಾತ್ಯ ದೇಶಗಳಲ್ಲಿ ಮಿಲಿಟರಿ ರಂಗದಲ್ಲೇ ಮಹಿಳೆಯರಿರುವಾಗ ಪೊಲೀಸ್ ಇಲಾಖೆಯಲ್ಲಿ ಮಹಿಳೆಯರ ನಿರ್ವಹಣೆ ಯಾಕಾಗ ಬಾರದೆಂದು ಪ್ರಶ್ನಿಸಿ ಅವರನ್ನು ಸೇರ್ಪಡೆಗೊಳಿಸಲಾಯಿತು. ಈ ಕೃತಿ ಕರ್ನಾಟಕ ಪೊಲೀಸ್ ಇಲಾಖೆಯಲ್ಲಿ ತಡವಾಗಿಯಾದರೂ ನೇಮಕಗೊಂಡ ಮಹಿಳೆಯರ ಕುರಿತು ನಡೆಸಿದ ಕ್ಷೇತ್ರಾಧ್ಯಯನದಿಂದ ಎಲ್ಲವನ್ನೂ ವೈಯಕ್ತಿಕವಾಗಿಯೇ ಆಸಕ್ತಿವಹಿಸಿ ಸಂಗ್ರಹಮಾಡಿಕೊಂಡ ಪರಿಣಾಮವಾಗಿ ಅಪರೂಪವಾದ ಕೃತಿಯೊಂದು ಪ್ರಕಟವಾಗಿದೆ. ಎಲ್ಲ ಕ್ಷೇತ್ರಗಳಲ್ಲಿ ಇರುವಂತೆ ಪೊಲೀಸ್ ಇಲಾಖೆಯಲ್ಲೂ ಅನೇಕ ಸಮಸ್ಯೆಗಳು ಮಹಿಳಾ ಪೊಲೀಸರನ್ನು ಕಾಡುತ್ತವೆ. ಆ ಬಗ್ಗೆಯೂ ಇಲ್ಲಿ ವಿವರವಾದ ಮಾಹಿತಿಯಿದೆ. ವಿಪರೀತ ಶಿಸ್ತಿನ ಇಲಾಖೆ ಇದಾದುದರಿಂದ ಆ ಬಗ್ಗೆ ಯಾವುದೇ ದೂರನ್ನು ಯಾರೂ ದಾಖಲಿಸುವ ಧೈರ್ಯ ಮಾಡುತ್ತಿಲ್ಲ. ಮಹಿಳಾ ಪೊಲೀಸ್ ಆಯೋಗ ರಚನೆ ಆಗಬೇಕೆಂಬ ಬೇಡಿಕೆ ಕೂಡ ಕೇಳಿಬರುತ್ತಿದೆ. ಮುಸುಕಿನೊಳಗೆ ಗುದ್ದು ಬಿದ್ದರೂ ಅದು ಹೊರ ಜಗತ್ತಿಗೆ ಕೇಳಿಸುತ್ತಿಲ್ಲ; ಕೇಳಿಸಲೆಂಬ ಆಶಯವಿದೆ.*

**ನೂರು ಸಿಂಹಾಸನಗಳು** (ಕಾದಂಬರಿ)
ಮೂಲ : ಜಯಮೋಹನ್, ಅನು : ಕೆ. ಪ್ರಭಾಕರನ್

**ಪುಟ : ೬೪** **ಬೆಲೆ : ರೂ. ೭೦/–**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
ನಂ. ೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಬೆಂಗಳೂರು – ೫೬೦ ೦೦೧

*ಚಾತುರ್ವರ್ಣ್ಯವೆಂಬ ಮಹಾ ಅನಿಷ್ಟ ಪದ್ಧತಿಯಲ್ಲಿನ ಮೇಲು ಕೀಳೆಂಬ ಜಾತಿ ತಾರತಮ್ಯ ಕೆಳವರ್ಗದ ಪ್ರತಿಭಾವಂತರನ್ನು ಮೂಲೆಗೊತ್ತಿಬಿಡುತ್ತದೆ. ಸಮಾಜದ ತೀರ ಹಿಂದುಳಿದ ಜಾತಿಯ ಓರ್ವ ಪ್ರತಿಭಾವಂತ ಸಮಾಜ ಸುಧಾರಕರ ಆಶ್ರಯದಲ್ಲಿ ವಿದ್ಯೆ ಕಲಿತು, ಐಎಎಸ್ ಅಧಿಕಾರಿಯಾಗಿ ನೇಮಕಗೊಂಡರೂ ಕೂಡ ಕಛೇರಿಯಲ್ಲಿ ಕೇವಲ 'ಸಾಹೇಬ' ಮಾತ್ರವಾಗಿ, ನೆಪಮಾತ್ರಕ್ಕೆ ಅಧಿಕಾರಿಯಾಗಿರಬೇಕಾದ ದುರ್ಗತಿ ನಮ್ಮ ದೇಶದಲ್ಲಿದೆ. ಪ್ರತಿಭೆಯಿದ್ದರೂ ಜಾತಿ – ಅಂತಸ್ತುಗಳ ಹೊಡೆತಗಳು ನಮ್ಮ ಸಮಾಜದಲ್ಲಿ ಬಲವಾಗಿ ಬೀಳುತ್ತವೆ. ಅಧಿಕಾರವಿದ್ದರೂ ಚಲಾಯಿಸಲಾಗದಂಥ ಅಸಹಾಯಕತೆ, ಕೀಳರಿಮೆ ಆತನಿಗೆ ಉಂಟಾಗುತ್ತದೆ. ಒಬ್ಬ ಐಎಎಸ್ ಅಧಿಕಾರಿ ತನ್ನ ಅನುಭವವನ್ನು ಇಲ್ಲಿ ಕಥನವನ್ನಾಗಿಸಿದ್ದಾರೆ. ಇಂದು ತಾನು ಏರಿದ ಅಂತಸ್ತಿನಿಂದ ಕೆಳಗಿಳಿಯಲೂ ಸಾಧ್ಯವಿಲ್ಲದೆ, ಕಳೆದ ತನ್ನ ಬಾಲ್ಯವನ್ನು, ತನ್ನ ತಾಯಿಯೊಂದಿಗೆ ಆಹಾರಕ್ಕಾಗಿ ಅಲೆದಾಡುತ್ತಿದ್ದ ದಾರುಣ ಸ್ಥಿತಿಯನ್ನು ನೆನೆದು, ಇಂದಿನ ಐಷಾರಾಮಿ ಜೀವನಕ್ಕೆ ಹೋಲಿಸಿಕೊಂಡು ಮರುಗುತ್ತಾರೆ. "ನಮಗೆ ಈ ಸಾಹೇಬತನ, ಅಧಿಕಾರದ ದರ್ಪ ಬೇಡ ಮಗನೇ" ಎನ್ನುವ ತಾಯಿ ಒಂದು ಕಡೆ – ಅಂತಸ್ತಿಗೆ ತಕ್ಕಂತೆ ಬದುಕಬೇಕೆನ್ನುವ ಕುಟುಂಬ – ಇವುಗಳ ಮಧ್ಯೆ ಡೋಲಾಯಮಾನ ಸ್ಥಿತಿ ತಲುಪಿದ ಕಥೆ ಇಲ್ಲಿ ಹೇಳಲ್ಪಟ್ಟಿದೆ. ಇಂಥ ವ್ಯವಸ್ಥೆ ಬದಲಿಸಲು ಒಂದು ಕುರ್ಚಿ ಮಾತ್ರ ಸಾಲದು, ನೂರು ಸಿಂಹಾಸನಗಳೇ ಬೇಕೆಂದು ಸಾರುವ ಕೃತಿ.*

**ಒಂದು ಹೆಣದ ಸುತ್ತ ಮುತ್ತ** (ಸಣ್ಣ ಕತೆಗಳು) ವೀರಭದ್ರ ಕೌದಿ

**ಪುಟ : xiv+೧೦೮** **ಬೆಲೆ : ರೂ. ೧೨೦/–**

**ಅಜೇಯ ಪ್ರಕಾಶನ**
ಮಹಾತ್ಮಾ ಗಾಂಧಿ ಹೌಸಿಂಗ ಕಾಲೋನಿ, ಬೈಲಹೊಂಗಲ, ಜಿ॥ ಬೆಳಗಾವಿ

*ಇಲ್ಲಿನ ಕಥೆಗಳು ಸಂಪೂರ್ಣ ಗ್ರಾಮೀಣ ಬದುಕಿನ ಸೌಂದರ್ಯ – ಸೊಗಡುಗಳನ್ನು ಕಟ್ಟಿಕೊಡುವಂಥವು. ಹಾಗೆಂದಾಕ್ಷಣ ಅಲ್ಲಿ ಎಲ್ಲವೂ ಸರಿಯಾಗಿಯೇ ಇರುತ್ತದೆಂದೇನೂ ಅಲ್ಲ. ಊರಿದ್ದಲ್ಲಿ ಹೊಲೆ ಇದ್ದೇ ಇರುತ್ತದೆ. ಆದರೂ ಇಂದಿನ ಆಧುನಿಕ ನಗರೀಕೃತ ಬದಲಾವಣೆಗಳಿಗೆ ಹೋಲಿಸಿದಾಗ ಹಳ್ಳಿಯ–ನಗರಗಳ ಮಧ್ಯದ ವ್ಯತ್ಯಾಸ ಎದ್ದು ಕಾಣದೆ ಇರದು. ಶೋಷಣೆ ಎನ್ನುವುದು ಇರುವವರ – ಇಲ್ಲದಿರುವವರ ಮಧ್ಯೆ ನಡೆಯಲೇ ಬೇಕಾದುದೇನೋ ಎಂಬಷ್ಟರ ಮಟ್ಟಿಗೆ ಇರುತ್ತದೆ. ಆದರೂ ಇಂದಿಗೂ ಗ್ರಾಮೀಣ ಪ್ರದೇಶಗಳಲ್ಲಿನ ಮುಗ್ಧತೆ, ನಿಷ್ಕಲ್ಮಶ ನಡತೆಗಳು ಮುಂದುವರಿದೇ ಇವೆ. ಅಲ್ಲಿಯೂ ಕ್ರೌರ್ಯ ಇಲ್ಲದೇ ಇಲ್ಲ. ಅಲ್ಲಿ ಜಮೀನ್ದಾರ, ಒಡೆಯ, ಒಕ್ಕಲಿಗ, ಜೀತಗಾರ ಇದ್ದಂತೆಯೇ ನಗರಗಳಲ್ಲೂ ಶೋಷಕರಾಗಿ ಮಾಲಿಕರು, ಹಲವಾರು ಕಂಪೆನಿಗಳು, ಫ್ಯಾಕ್ಟರಿಗಳು ಇವೆ. ಇಲ್ಲಿಯೂ ಶೋಷಿತರಾಗಿ ಅಸಂಘಟಿತ ವಲಯ ಕಾರ್ಮಿಕ ವರ್ಗವೇ ಇದೆ. ಅಂತೂ ಶೋಷಕರ ಕಪಿಮುಷ್ಠಿಗೆ ಸಿಲುಕಿ ಶೋಷಿತ ಕಂಗಾಲಾಗುವುದಂತೂ ಸಾರ್ವತ್ರಿಕವಾಗಿದೆ. ಒಂದರ್ಥದಲ್ಲಿ ಸರಾಗವಾಗಿ ನಡೆದು ಹೋಗುತ್ತಿರುವ ಘಟನೆಗಳಿಗೆ ಜೀವ ಬರಿಸಿ ಕಥೆಗಳನ್ನಾಗಿಸಿದ್ದಾರೆ. ಅಲ್ಲಿ ಕೌತುಕವಿದೆ. ವಿಸ್ಮಯವಿದೆ, ದಾರುಣ ಸನ್ನಿವೇಶಗಳೂ ಸಂತೋಷವೂ ದುಃಖವೂ ಹಾಸು ಹೊಕ್ಕಾಗಿದೆ. ಎಲ್ಲಿಯೂ ಕೃತಕತೆಯಿಲ್ಲ; ನೈಜ ಸ್ಪಂದನೆ – ವಾಸ್ತವ ತುಂಬಿಕೊಂಡಿದೆ.*

– **ಇಂದಿರಾ ಕುಮಾರಿ,** *ಬೆಂಗಳೂರು*

ವಿಜಯಕಾಂತ ಪಾಟೀಲ

# ನನ್ನೊಳಗೆ ನೂರು ಬಣ್ಣ...!

**ಯಾ**ರಿಗೇನು ಅನಿಸುತ್ತದೆಯೋ ಗೊತ್ತಿಲ್ಲ. ಕೌದಿಯೇ ರಾಷ್ಟ್ರಧ್ವಜವಾಗಬೇಕೆಂದು ನನಗೆ ಬಾಲ್ಯಕಾಲದಿಂದಲೂ ಹಠ ಇದ್ದೇ ಇದೆ. ಅದೆಷ್ಟು ಹಠವೆಂದರೆ 'ಹೌದು ನಾನು ಕೌದಿ' ಎನ್ನುವಷ್ಟರ ಮಟ್ಟಿಗಷ್ಟೇ ಅಲ್ಲ; ಅಂಥದೇ ಹೆಸರಿನ ಪದ್ಯವನ್ನೂ ಬರೆದು 'ನನ್ನ ಪ್ರೀತಿಯ ಈ ಕೌದಿ ರಾಷ್ಟ್ರಧ್ವಜವಾಗಿ ಬಾನಿನಗಲ ಪಟ ಪಟ ಹಾರಾಡಲಿ, ಏರಲಿ ಇಳಿಯಲಿ ಈ ಇಳೆಯನೇ ಒಂದು ಮಾಡಲಿ....!' ಎನ್ನುವಲ್ಲಿಯ ತನಕವೂ...! ಈ ಥಂಡಿಕಾಲ (ಮಳೆಗಾಲ-ಚಳಿಗಾಲ) ನನಗೆ ಹೇಗೆ ಪ್ರಿಯವೋ ಕೌದಿಯೂ ಹಾಗೆಯೇ. ಒಡೆಯುವ ತುಟಿ ಕೆನ್ನೆ ಕೈ ಮೈಗಳ ಬಿರುಸ ವರಸೆಯನ್ನೂ, ಕೊರೆಯುವ ಚಳಿಯನ್ನೂ ನೂಕಿ ನಾ ಸಂಭ್ರಮಿಸುವ ಏಕೈಕ ಕಾಲ ಈ ಥಂಡಿಕಾಲ ಎಂದರೂ ಸರಿಯೇ. ನನ್ನ ಮೌನಕ್ಕೆ ಧ್ಯಾನಕ್ಕೆ ಕನಸಿಗೆ ಅಣಿಯಾಗಿ ಏಣಿಯಾಗಿ ನಿಲ್ಲುವ ಸುಸೂತ್ರ ಸಂಬಂಧಾನುಕೂಲ ಈ ಕಾಲ ಮತ್ತು ಕೌದಿಯೂ. ಈಗ ಚಳಿಗಾಲ ಹೋಗುವ ಹಂತದಲ್ಲಿದೆ. ಆದರೆ ಈ ಕೌದಿಯ ಹಳವಂಡವಂತೂ ನನ್ನ ಸಂಗಡ ಸರ್ವಕಾಲಸಖಿ. ಬೇಸಿಗೆಯಲ್ಲಿ ಏಸೀಯಾಗಿ, ಮಳೆಗಾಲದಲ್ಲಿ ಜೀಂ ಜೀಂ.. ನಾದಕ್ಕೆ ಸಾಥಿಯಾಗಿ ಅದು ಒಡನಾಡುವ ರೀತಿ ಒಂದು ನೀತಿಯೇ ಆಗಿದ್ದೂ ಸುಳ್ಳಲ್ಲ. ತಾತ್ವಿಕ ಸ್ಪರ್ಶವನ್ನೂ ನನಗೆ ಊಡುವ ಈ ಕೌದಿಯೆಂಬ ಬಾಂಧವ್ಯಕ್ಕೇ ಮೊಟ್ಟ ಮೊದಲಿಗೆ ನನ್ನ ಶರಣು ಶರಣಾರ್ಥಿಗಳು.

ಪುರಾತನ ತಲೆಮಾರಿನ ಸಕಲ ಜೀವ ಭಾವಗಳ ನೆನಪು-ಒನಪಿಗೆ ಪುಷ್ಟಿ ಒದಗಿಸುವ, ನಮ್ಮೊಳಗೆಲ್ಲೋ ಕಸುವ ಪೂಸುವ ಚಳಿಗಾಲ ನನಗೆ ಕೊರೆದದ್ದಾಗಲೀ ಕೆರೆದದ್ದಾಗಲೀ ಹಿಂಸಿಸಿದ್ದಾಗಲೀ ಬಹಳ ಕಮ್ಮಿ. 'ಕೌದಿಯೊಂದಿರೆ ಎಲ್ಲ ಕಾಲ, ಜಂಜಡಗಳನೂ ಅಟ್ಟಿಬಿಡಬಲ್ಲೆ..!' ಹೌದು, ಕೌದಿಯ ಸಾಂಗತ್ಯಕ್ಕೆ ಅಂಥ ಶಕ್ತಿಯುಂಟು. ಚಳಿ ಎಷ್ಟೇ ಕಾಟ ಕೊಟ್ಟಾಗಲೂ ನಾ ಸಹಿಸಿಕೊಂಡಿದ್ದೇನೆ. ಪುಳಕಿತಗೊಂಡೂ ಹೊಸದನ್ನು ಕಂಡುಕೊಂಡಿದ್ದೇನೆ. ಬೆರಗಾಗಿದ್ದೇನೆ. ಅದು ಒಂದು ಬೆಡಗೆಂದೇ ಪರಿಭಾವಿಸಿದ್ದೇನೆ. ಯಾಕೆಂದರೆ, ಕೌದಿ ಎಂಬ ಸಮಾಧಾನ-ನೆಮ್ಮದಿ-ರಕ್ಷಾಕವಚ-ಬಿಸಿಯಪ್ಪುಗೆ-ತಂಪಕಿಸಿಪಿಸಿ.. ಸದಾ ನಮ್ಮ ಜೊತೆಗೇ ಅಲ್ಲವೆ?

ಕೌದಿ-ಕಂಬಳಿಯ ಜಾಗೆಯನ್ನು ರಗ್ಗು-ಬ್ಲಾಂಕೇಟ್‌ಗಳು ಆಕ್ರಮಿಸಿದರೂ ಅದೇ ಕೌದಿಯ ಧ್ಯಾನ; ಬಿಳಿನೂಲ ಸವಾರಿಯೊಂದಿಗೆ ನೂರಾರು ಬಣ್ಣದ ಅರಿವೆ ಚೂರುಗಳ ಒಂದೇ ಪಟ್ಟಿಗೆ ಮೈಮೇಲಿರಿಸಿಕೊಂಡು ಅಖಂಡತೆಯ ಕನಸು ಕಾಣುವ ಸುಯೋಗ ಸಂಪನ್ನತೆಯ ಹೊತ್ತು ಅದೆಷ್ಟೊಂದು ಪರಮಾಪ್ತ...? ಸುಪ್ತ ಭಾವಗಳ ಬಡಿದೆಬ್ಬಿಸುವ ಸಶಕ್ತ ಸನ್ನಿಧಾನವೇ ಈ ಕೌದಿ ಎಂಬ ಮಹಾಮನೆ. ಕಣ್ಣೀರನ್ನು ಹೀರಿಕೊಂಡು ಯಾವಾಗಲೂ ನಗುವ ನಗಿಸುವ ನಿಜದ ಮಂದಿರ-ಮಸೀದಿ-ಇಗರ್ಜಿ...ಎಲ್ಲವೂ ಇದೇ! ಎಲ್ಲ ಕಾಲಗಳಿಗೂ ಸಮಾನ ನ್ಯಾಯ ಒದಗಿಸುವ ಕೌದಿ ಸರ್ವಋತು ಸಖ್ಯಧಾರಿ. ಹೊದಿಕೆಯೇ ಬೇಡ ಎಂಬಂತಿರುವ ಬೇಸಗೆಯಲ್ಲಿಯೂ ಈ ಕೌದಿ ಮೈಮೇಲಿದ್ದರೆ ಅದೆಂಥದೋ ತನನನ; ಅಮ್ಮತನದ ಸಾಂತ್ವನ.. ಎಂದೂ ಕಿರಿಕಿರಿ ಮಾಡದ ಅಹಿಂಸಾವಾದಿ ಈ ಕೌದಿ. ಬೇಸಿಗೆ ಕಾಲದ ಝಳದಲ್ಲಿ ಅದೇ ರಗ್ಗು ಚದ್ದರ ಬ್ಲಾಂಕೇಟ್‌ಗಳ ಹೊದ್ದರೆ ಮೈಯಿಯೇ ಅವುಗಳನ್ನು ಒದ್ದೋಡಿಸುತ್ತದೆ. ಯಾಕೆ..? ಏನಿದರ ಮಹತ್ವ..? ಅಂಥದ್ದೇನಿದೆ ಇದರಲ್ಲಿ? – ಎಂಬಿತ್ಯಾದಿ ಪ್ರಶ್ನೆ ಅನುಮಾನಗಳಿಗೆ ಉತ್ತರಕ್ಕಾಗಿ ಪಕ್ಕಾ ಹತ್ತಿ ಬಟ್ಟೆಯ ಖುದ್ದು ಅಜ್ಜಿಯಂದಿರೇ ಹೊಲೆದ ಕೌದಿ ಹೊದ್ದು ನೋಡಿ.. ಮಜಾ ಮಾಡಿ..!

ಹಲವಾರು ಬಣ್ಣ, ನೂರಾರು ಭಾವ, ಸಾವಿರಾರು ಕನಸು, ಲಕ್ಷಾಂತರ ನೆನಪುಗಳು, ಕೋಟ್ಯಾನುಕೋಟಿ ನಕ್ಷತ್ರಗಳು, ಚಂದಮಾಮ ಚಕ್ಕುಲಿಮಾಮ ರವಿಮಾಮ... ಎಲ್ಲರೂ ಎಲ್ಲವೂ ಈ ಕೌದಿಯೆಂಬ ಸೆಕ್ಯೂರಿಟಿ ಗಾರ್ಡೊಳಗೇ ಲಭ್ಯ. ಮಿಗಿಲಾಗಿ... ಅಜ್ಜನ ಒಳಂಗಿ ಅಜ್ಜಿಯ ಕುಪ್ಪಸ, ಅಮ್ಮನ ಸೀರೆ, ಅಪ್ಪನ ಜುಬ್ಬಾ, ದೊಡ್ಡಪ್ಪನ ಪಂಜಿ, ಕಾಕಾನ ಲುಂಗಿ, ಅಕ್ಕನ ದಾವಣಿ, ತಂಗಿಯ ಜಂಪರ್, ತಮ್ಮನ ಚಡ್ಡಿ... ಪರಪರ ಹರಿದ ಹಳೆಬಟ್ಟೆಗಳ ಕಟ್ ಪೀಸುಗಳೇ ಕೌದಿಯ ಜೀವಾಳ. ದಪ್ಪಸೂಜಿಯ ಕಣ್ಣೊಳು ನುಸುಳಿ ನಡೆವ ಪಕ್ಕಾಬಿಳಿ ದಾರಕ್ಕೆ ಅದರದ್ದೇ ಆದ ದಾರಿಯಿದೆ. ಬೆಳಕ ಬೀರುವ ಶಕುತಿಯಿದೆ. ಆದರಿದು ಹೆದ್ದಾರಿಯಲ್ಲ; ಒಳದಾರಿ. ಮೈಮನಕೆ ಹತ್ತಿರದ ದಾರಿ. ಆರೋಗ್ಯಭಾಗ್ಯವ ದಯ ಪಾಲಿಸುವ ದಾರಿ. ಸಕಲ ಜೀವಭಾವಗಳ ನೆನಪನದಿಯ ಜುಳು ಜುಳು ನಿನಾದ ಹೊಮ್ಮಿಸುವ ಜೀವಂತ ದಾರಿ.

– ಅಂತೆಲ್ಲ ಎಷ್ಟು ಹೇಳಿದರೂ ಮುಗಿಯದ ನಮ್ಮಗಳ ಕಥೆಯೇ ಆಗಿರುವ ಈ ಕೌದಿಯನ್ನು ಹೊದ್ದುಕೊಂಡು ಮಲಗಲು ಬಾಲ್ಯಕಾಲದಲ್ಲಿ ನಮ್ಮ ಅವಿಭಕ್ತ ಮನೆಯ ಸಕಲ ಅಕ್ಕ ತಂಗಿ ತಮ್ಮಂದಿರೊಳಗೆಲ್ಲ ಒಮ್ಮೊಮ್ಮೆ ಸ್ಪರ್ಧೆಯೂ ನಡೆದು ಜಟಾಪಟಿಗಳೂ ಆದದ್ದುಂಟು. ಮನೆಯಲ್ಲಿ ಸಾಕಷ್ಟು ಕೌದಿಗಳಿದ್ದಾಗ್ಯೂ ಈ ಜಗಳಗಳೇಕೆ ಅಂದರೆ... 'ಅವನದು ಹೊಸದು, ನನಗ್ಯಾಕೆ ಹಳೆಯದು?' ಎಂಬ ಬಲವಾದ ಕಾರಣದಿಂದ ಹಿಡಕೊಂಡು, ವಾಷ್ ಮಾಡಿ ಒಣಗಿಸಿದಾಗ ಅವು ಮಳೆಗಾಲದಲ್ಲಿ ಬೇಗ ಆರಿಕೊಳ್ಳದಿದ್ದುದು, ಕೌದಿ ಬದಲು ಚದ್ದರಗಳನ್ನೇ ಬಳಸಬೇಕಾಗಿ ಬಂದು 'ಅದು ಬೇಡ..' ಎಂಬಲ್ಲಿಗೂ ಈ ರಗಳೆ ಹಠ ಮಾರಾಮಾರಿಗಳು ಜರುಗುತ್ತಿದ್ದವು. ಹಲವರಿಗೆ ಅಸಹ್ಯ, ವಾಕರಿಕೆಯಾಗುವ ಸಂಭವನೀಯತೆಯ ಸಂಗತಿಯೂ ಈ ಕೌದಿ ರಾಜ್ಯದಲ್ಲಿ ಇದ್ದೇ ಇರುತ್ತಿತ್ತು. ಬಾಲ್ಯಕಾಲದಲ್ಲಿ ನನ್ನನ್ನೂ ಒಳಗೊಂಡು ನಾವೆಲ್ಲ ಹತ್ತು ಹನ್ನೆರಡು ವಯೋಮಾನದವರೆಗೂ

ರಾತ್ರಿ ಮಲಗಿದಾಗ ('ಆ ಅವಸ್ಥೆಯಲ್ಲಿ ಯೋಗ್ಯಸ್ಥಳದಲ್ಲಿಯೇ ಮಾಡುತ್ತಿದ್ದೇವೆ ಅಂದುಕೊಂಡು...') ಒಂದಾ ಮಾಡಿಕೊಂಡದ್ದು ಒಂದೆರಡು ಬಾರಿಯಲ್ಲ. ಇದು ಭಾಳಷ್ಟು ಮಂದಿಯ ಪಾಲಿಗೂ ಸತ್ಯವೇ. ಆ ವಿಚಿತ್ರ ವಾಸನಾವೇದನೆಯನ್ನು ತಾಳಲಾರದೆ ಎಚ್ಚರಾಗಿ ಉಳಿದ ಬಳಿದ ನಿದ್ದೆಯನ್ನೂ ಹಾಳು ಮಾಡಿಕೊಳ್ಳುತ್ತಿದ್ದೆವು. ಹೀಗೆಲ್ಲ ಆದಾಗ ಅಮ್ಮ-ಅಜ್ಜಿಯರು ಪ್ರತಿ ಸಲವೂ ಆ ಕೌದಿಯನ್ನು ನೀರಿನಲ್ಲಿ ತೊಳೆದು ಒಣಗಿಸಲಾದೀತೇ? ಆಗುತ್ತಿರಲಿಲ್ಲವಾಗಿ, ಅಂಥ ಕೆಟಗರಿಗೆ ಸಂಬಂಧಪಟ್ಟ ಕೌದಿ-ಚದ್ದರಗಳನ್ನು ಬಿಸಿಲೇ ಶುಚಿಗೊಳಿಸಬೇಕಿತ್ತು. ಪಾಪ, ಸೂರ್ಯನಾದರೂ ಎಷ್ಟೆಂದು ಅವನ್ನೆಲ್ಲ ವಾಸನಾರಹಿತ ಮಾಡಲು ಸಾಧ್ಯ, ಅಲ್ಲವೇ? ಹೀಗಾಗಿ, ಆ ಹಾಸಿಗೆ-ಹೊದಿಕೆಯ ಸಾಮಗ್ರಿಗಳು ಸಂಜೆವರೆಗೂ ಒಣಗಿ ಬಿಸಿಬಿಸಿಯಿದ್ದಾಗಲೇ ನಾವು ನಿದ್ದೆಗೆ ಹೋಗುವ ಸನ್ನಾಹದಲ್ಲಿರುತ್ತಿದ್ದೆವು. ಆ ಒಂದಾ ಮಾಡಿದ ವಾಸನೆ ಸೂರ್ಯನ ಕೈಯಲ್ಲಿ ಸಿಕ್ಕು 'ಏನೋ ಒಂಥರಾ' ಹೊಸ ಅನ್ವೇಷಣೆಯ ಸುಗಂಧದ್ರವ್ಯದ ಕಂಪನ್ನು ಬೀರುತ್ತಾ ಬೆಚ್ಚಗಿನ ಸುಖವನ್ನೂ ಬೀರಿ, ನಮ್ಮ ನಿದ್ರಾಯಾನವನ್ನು ಸುಖಕರವಾಗಿಸುತ್ತಿದ್ದವು. ಏನೇ ಹೇಳಿ, ಈ ಕೌದಿ ಕೊಟ್ಟದ್ದನ್ನು ಖರೆ ಖರೆ ಯಾವ ಬ್ಲಾಂಕೆಟ್ಟು-ರಗ್ಗು ಕೊಡಲಿಲ್ಲ ಅನ್ನುವುದು ಈಗಿನ ನನ್ನ ಕೊರಗಂತೂ ಹೌದು.. ಆ ಕೊರಗು ನಿಮಗೇನಾದರೂ...?!

✶ ✶ ✶

ಇಷ್ಟೆಲ್ಲ ಹೇಳಿದ ಮೇಲೆಯೂ ಜಾತಿ ಕುಲ ಭೇದ ಇಲ್ಲದ, ಇಂಥದ್ದನ್ನೆಲ್ಲ ಮಾಡದ ಕೌದಿಯ ಬಗೆಗೆ ನಾ ಬರೆದ 'ಹೌದು, ನಾನು ಕೌದಿ...!' ಪದ್ಯವನ್ನು ನಿಮಗೆ ಈಗ ಓದಿ ಹೇಳಲಾರೆನಾದರೆ ಕೌದಿ ಸಿಟ್ಟಿಗೆದ್ದು ತನ್ನ ಮೈ-ಕೈನೆಲ್ಲ ತಾನೇ ಹರಿದುಕೊಂಡು ತೂರಾಡಿ ಬಿಡುವ ಘನಘೋರ ಸಾಧ್ಯತೆಯೂ; ತಿರುಗುತ್ತಲೇ ಇರುವ ಫ್ಯಾನಿಗೆ ಸಿಕ್ಕು ಕೋಣೆಯೊಳೆಲ್ಲ ಚಿಂದಿಚಿತ್ರಾನ್ನವಾಗಿ ಹರಡಿ ಹಾರಾಡಿಕೊಂಡು ನಮಗೆಲ್ಲ ಡಸ್ಟ್ ಅಲರ್ಜಿ ಉಂಟುಮಾಡಿ ತಾನೂ ಖಿನ್ನತೆಗೊಳಗಾಗಿ ಇಚ್ಛಾಮರಣಿಯಾಗಿ ಬಿಡುವ ಗುಮಾನಿಯೂ ಇರುವುದರಿಂದ.. ಮೇಲಾಗಿ ಅನಂತದೊಳ್ ತಾನನಂತ ವಾಗಿರುವ ನಮ್ಮಜ್ಜಿಗೂ ಫಿರ್ಯಾದಿ ಹೇಳಿ ಅವರ ಕಣ್ಣೀರಿಗೆ ಕಾರಣವಾಗಿ ನಮ್ಮಜನ್ಮ ದುದ್ದಕ್ಕೂ ಕಾಡಿ ಖಾಯಂ ನೋವಾಗಿ ಉಳಕೊಂಡುಬಿಡುವ ಸಂಭವನೀಯತೆಯೂ ಹೇರಳವಾಗಿರುವುದರಿಂದ ನಾನೀಗ ಆ ಪದ್ಯವನ್ನು ಕನ್ನಡ ಮತ್ತು ಇಂಗ್ಲಿಷ್ ಎರಡೆರಡು ಭಾಷೆಯಲ್ಲೂ ಇಲ್ಲಿ ಕಾಣಿಸಿಬಿಡುತ್ತೇನೆ. ಎಂದರೆ, ಓದಿಯೇ ಬಿಡಿ...!

ಹೌದು, ನಾನು ಕೌದಿ...!

ನೂರಾರು ಬಣ್ಣದ ಹರಕರಿವೆ ಚೂರು;
ಎದ್ದು ಹೊಡೆವ ಬಿಳಿನೂಲಸಾಲು
ಸಾವಿರಾರು ಬಾರಿ ಸೂಜಿಮೊನೆಗೆ ಬಾಗಿ
ಒಡಲಗೆಲ್ಲ ಚುಚ್ಚಿಸಿಕೊಂಡರೂ ಕಾರದ ನೆತ್ತರು!

ಹೌದು, ನಾನು ಕೌದಿ;
ಈ ನೆಲದ ಪಾರಂಪರಿಕ ಹಾದಿ!

ಭೇದವೆಣಿಸದೇ ಹೊದಿಕೆಯಾದೆ
ಎದೆಗೆ ಎದೆಯಾದೆ, ಎದೆಗುದಿಯ ಕೊನೆಗಾಣಿಸಿದೆ;
ಬೆದೆಗೆ ಬದಿಯಾದೆ, ಒಲವಿಗೆ ನೆಲೆಯಾದೆ;
ಕಣ್ಣೀರ ಹೀರಿದೆ, ಒದ್ದೆಯಾಗಿಯೂ ನಗಾಡಿದೆ, ಕಾವಲಾದೆ ಕಾದೆ;
ಜನಗಣಮನವಾದೆ ಭರತಖಂಡವಾದೆ
ಕಂಡಕಂಡವರನ್ನೆಲ್ಲ ಅಪ್ಪಿದೆ ಒಪ್ಪಿದೆ ಸವೆದೆ ಏನೆಲ್ಲ ಆದೆ,
ಇಂಡಿಯಾದ ಅಘೋಷಿತ ಧ್ವಜವಾದೆ...!

ಈಗ ನಾ ಮಾಯವಾಗಿದ್ದೇನೆ;
ನಮ್ಮ ಸಂಸ್ಕೃತಿಯಂತೆ ಪರಂಪರೆಯಂತೆ!
ತಲೆಮಾರಿನ ಹಳೆಯ ಸಂದೂಕದ ಒಳಗೆ ಭದ್ರವಾಗಿದ್ದೇನೆ;
ಮುರಿಯಲಾರದ ಬಹುದೊಡ್ಡ ಬೀಗ ಝಡಿಸಿಕೊಂಡು,
ಗೆದ್ದಲಗು ಸಿಗದೇ ಸೀದುಹೋಗಿದ್ದೇನೆ..!
ನಾ ಕಂಡರೆ ಅವಮಾನ ನಾಗರಿಕತೆಗೆ!
ಎಂದು ಅವಿತು ಕುಂತಿದ್ದೇನೆ, ಅಳುತ್ತಿದ್ದೇನೆ;
ಇದ್ದೇನೆ ನಾನೂ ಜೀವಂತ, ಪದಗಳಲ್ಲಿ ಪದ್ಯವಾಗಿ ಭೂತವಾಗಿ...!

✶ ✶ ✶

ಈ ಕವಿತೆಯಿರುವ ಸಂಕಲನದ ಹೆಸರೂ 'ಹೌದು ನಾನು ಕೌದಿ' ಎಂದೇ ಇದೆ. ಇದನ್ನು ಧಾರವಾಡದಲ್ಲಿ ಲೋಕಾರ್ಪಣೆ ಮಾಡುವ ಮುನ್ನವೇ ನನಗೆ ಸುಂದರವಾದ ಹಳೆಯ ಕೌದಿಯೊಳಗಿಂದಲೇ ಈ ಕೃತಿ ಬಿಡುಗಡೆಗೊಳ್ಳಬೇಕು ಎಂಬ ಅದಮ್ಯ ಆಸೆಯಿತ್ತು. ಕೌದಿಗಳೆಲ್ಲ ಬಹುತೇಕ ಮಾಯವಾದ ಈ ಹೊತ್ತು ನನ್ನ ಈ ಆಸೆಯನ್ನು ನಮ್ಮ ಹೈಸ್ಕೂಲು ಗುರುಗಳಾದ ಶಿವರಾಯ ಶ್ರೀನಂದಿ ಅವರ ಹತ್ತಿರ ಹೇಳಿಕೊಂಡೆ. ಅವರು ಬಳಸುತ್ತಿದ್ದ ಚೆಂದನೆಯ ಕೌದಿಯೊಂದನ್ನು ಕಾಣಿಕೆಯಾಗಿ ನನಗಿತ್ತರು ಮತ್ತೂ ಬಿಡುಗಡೆಯ ಸಮಾರಂಭಕ್ಕೂ ಬಂದು ಮೆರಗು ಹೆಚ್ಚಿಸಿದರು. ಆಗ ಆ ಕೌದಿಯನ್ನು ಮನಸಾರೆ ಮೆಚ್ಚಿಕೊಂಡ ಈ ಪುಸ್ತಕದ ಪ್ರಕಾಶಕ ಪಲ್ಲವ ವೆಂಕಟೇಶ್ 'ನನಗಿದು ಬೇಕೇಬೇಕು...!' ಎಂದು ಹಠ ಹಿಡಿದ; ಹೊತ್ತುಕೊಂಡೂ ಹೋದ...! ಇರಲಿ.

✶ ✶ ✶

"ರಾಷ್ಟ್ರಧ್ವಜಕ್ಕೆ ಮೂರೇ ಬಣ್ಣ; ನನ್ನೊಳಗೆ ನೂರು ಬಣ್ಣ...!
ನೂರು ಬಣ್ಣದ ಕಣ್ಣಿನ ನವಿಲು ರಾಷ್ಟ್ರಪಕ್ಷಿಯಾಗಿರುವಾಗ ನಾನೇಕೆ ರಾಷ್ಟ್ರಧ್ವಜವಾಗಬಾರದು...?
ನಮ್ಮ ಇಂಡಿಯಾದ ಸಂಸ್ಕೃತಿ ಪರಂಪರೆಗೆ ನಾನೇ ಲಾಯಕ್ಕಾದ ಪ್ರತೀಕ;
ಜಾತಿ-ಧರ್ಮ-ಭಾಷೆ-ಪ್ರದೇಶ ಎಲ್ಲದನ್ನೂ ಒಂದಾಗಿಸಿಕೊಂಡ ಏಕೈಕ ಸಂಕೇತ...!
ಸಮಗ್ರತೆ-ಏಕತೆಯ ಪಡಿಯಚ್ಚು ಉರ್ಫ್ ಪ್ರತಿಪಾದಕ...!"
– ಎಂದು ಕೌದಿ ನನ್ನೊಂದಿಗೆ ನಿತ್ಯ ರಗಳೆ ಶುರುವಿಟ್ಟುಕೊಂಡಿದೆ. ನಾನೋ ಈಗಾಗಲೇ ಕೌದಿಯನ್ನೇ ನಾ ನಡೆದಾಡುವ ನುಡಿದಾಡುವ ಹಾದಿಗೆ ತೂಗು ಹಾಕಿಕೊಂಡು ಹೆಜ್ಜೆಯಿರಿಸುತ್ತ ಸಾಗುತ್ತಿದ್ದೇನೆ; ಎಡವಿಯೂ ಸಾವರಿಸಿಕೊಂಡು..!

✶ ✶ ✶

ಈ ಕೌದಿ ಮತ್ತು ನವಿಲು, ಅವುಗಳ ಬಹುವರ್ಣಗಳು ನನ್ನ ಬರಹ ಮತ್ತು ಮಾತು-ಕ(ವಿ)ತೆಗಳಲ್ಲಿ ಹಗಲಿ ಮುಗಲಿ ಸುಳಿದಾಡುತ್ತ ನನ್ನ ಹಾದಿಯ ತುಂಬ ಯಾವಾಗಲೂ ನಿಂತುಕೊಂಡೇ ಇರುವುದು ನನಗಂತೂ ಈ ಇಡೀ ಜಗತ್ತನ್ನು ನನ್ನದೆಂದುಕೊಳ್ಳಲು ಅನುಕೂಲ ಮಾಡಿಕೊಟ್ಟಿದೆ; ಅಪಾರ ಹೆಮ್ಮೆ ಮತ್ತು ಸೊಕ್ಕನ್ನೂ ನನಗೆ ದಯಪಾಲಿಸಿದೆ. ನನ್ನದೊಂದು 'ನೂರು ಬಣ್ಣದ ಕಣ್ಣು' ಕವನ ಸಂಕಲನವೂ ಇದೆ; ಹಾಗೇ ಕಳೆದ ವರ್ಷ ಬಿಡುಗಡೆಯಾದ 'ಬೆವರ ಬಣ್ಣ' ಕವನ ಸಂಕಲನವೂ..! ಕಾಣುವ ಕಣ್ಣು ನೆಟ್ಟಗಿದ್ದರೆ ಎಲ್ಲೆಲ್ಲೂ ಬಣ್ಣವೇ; ವಾಸನೆ ಮಾತ್ರ ಬೇರೆ ಬೇರೆ, ಒಳಗುಗಳೂ ಭಿನ್ನ ಭಿನ್ನವೇ!

ಅಂದ ಹಾಗೆ, 'ನೂರು ಬಣ್ಣದ ಕಣ್ಣು' ಪದ್ಯದ ಕೊನೆಯ ಸಾಲುಗಳನ್ನೂ ಹೇಳಿಬಿಡುತ್ತೇನೆ :

ಆ ಬಣ್ಣ ಈ ಬಣ್ಣ, ತಲೆಗೊಂದು ಬಣ್ಣ;
ಬಣಬಣದ ಬಣ್ಣದೆಡೆ ನನ ಕಣ್ಣು ಸಣ್ಣ;
ನೂರು ಬಣ್ಣದ ಕಣ್ಣ ನವಿಲ ಬಣ್ಣವೇ ಚೆನ್ನ...!

ನಾ ಸಣ್ಣ ಇದ್ದಾಗಿನಿಂದಲೂ ಈ ಬಣ್ಣಗಳ ಹುಚ್ಚು ವಿಪರೀತ ಅನ್ನುವಷ್ಟು ಹೆಚ್ಚು ಮೆಚ್ಚು ನನಗೆ..! ಈ ಹೊತ್ತಿಗೂ 'ನಿನಗ್ಯಾವ ಬಣ್ಣ ಹೆಚ್ಚು ಇಷ್ಟ?' ಅಂದರೆ ನನ್ನ ಉತ್ತರವಿಷ್ಟೇ : 'ಎಲ್ಲ ಬಣ್ಣಗಳೂ... ಅದಕ್ಕೇ ಇವೆಲ್ಲವನ್ನೂ ಹೊತ್ತ ಕೌದಿ ಮತ್ತು ನವಿಲು ನನಗೆ ಪ್ರಿಯ...!' ಇದ್ಯಾಕೆಂದರೆ, ಒಂದೊಂದು ಬಣ್ಣವೂ ಒಂದು ಜಾತಿ-ಪಕ್ಷ-ಪಂಗಡಗಳ ಪಾಲಾಗಿ ಅವುಗಳ ರಂಗೇ ಮಂಕಾಗಿರುವುದು...

**ವಿಜಯಕಾಂತ ಪಾಟೀಲ**
ನ್ಯಾಯವಾದಿ / ಕೃಷಿಕ / ಲೇಖಕ, ಕ್ಯಾಸನೂರು, ಚಿಕ್ಕಾಂಶಿ-ಹೊಸೂರು ಅಂಚೆ
ಹಾನಗಲ್ಲ ತಾಲೂಕು, ಹಾವೇರಿ ಜಿಲ್ಲೆ
vkkyasanur69@gmail.com



# ಗುರು ಗ್ರಹದ ಆಚ್ಛಾದನೆ

ಇದೀಗ ಶುಭ್ರ ಆಕಾಶ ಹೊಸ ಹೊಸ ನೋಟಗಳನ್ನು ನಿಮಗಾಗಿ ತೆರೆದಿಡಲಿದೆ. ಮುಂದಿನ ತಿಂಗಳು ಸೂರ್ಯಗ್ರಹಣ ವಿಶೇಷ ಆಕರ್ಷಣೆಯಾಗಲಿದೆ. ಇದಕ್ಕೆ ಪೂರ್ವಭಾವಿಯಾಗಿ ಈ ತಿಂಗಳು ಒಂದು 'ಮಿನಿ' ಗ್ರಹಣ ನಡೆಯಲಿದೆ. ಚಂದ್ರ ಗುರುಗ್ರಹವನ್ನು ಮುಚ್ಚುವ ಈ ಘಟನೆಗೆ ಆಚ್ಛಾದನೆ ಎಂಬ ಹೆಸರಿದೆ. ಇದು ಕಳೆದ ತಿಂಗಳು ನಡೆದಿತ್ತು; ಮುಂದಿನ ತಿಂಗಳೂ ನಡೆಯಲಿದೆ. ಹಾಗೆಯೇ ಶನಿಗ್ರಹದ ಆಚ್ಛಾದನೆಯೂ ನಡೆಯುತ್ತಿದೆ. ಆದರೆ ಈ ತಿಂಗಳ ವಿಶೇಷವೆಂದರೆ ಅದು ನಮಗೆ ಕಾಣಲಿದೆ. ಉಳಿದವು ಬೇರೆ ಬೇರೆ ದೇಶಗಳವರಿಗೆ ಕಂಡಿತ್ತು. ಸಂಜೆಯೇ ಕಾಣುವುದರಿಂದ ಎಲ್ಲರೂ ನಿರಾಯಾಸವಾಗಿ ನೋಡಬಹುದು.

೨೮ರ ಸಂಜೆ ಸುಮಾರು ೫:೩೦ರ ಹೊತ್ತಿಗೆ ಆಕಾಶದಲ್ಲಿ ಸಂಜೆಗತ್ತಲು ಕವಿಯಲು ಆರಂಭವಾಗಿರುತ್ತದೆ. ಪಶ್ಚಿಮದ ಅಂಚಿನಲ್ಲಿ ಶುಕ್ರ ಫಳಗುಟ್ಟುತ್ತಿರುತ್ತದೆ. ರೇಖಾ ಚಂದ್ರ ಕೂಡ ಅದೇ ದಿಕ್ಕಿನಲ್ಲಿ ಕಾಣುತ್ತದೆ. ಸೂಕ್ಷ್ಮವಾಗಿ ಗಮನಿಸಿದಾಗ ರೇಖಾ ಚಂದ್ರನ ಅಂಚಿನಲ್ಲಿ ಅದಕ್ಕೆ ತಾಗಿಕೊಂಡೇ ಇನ್ನೊಂದು ಪ್ರಕಾಶಮಾನ ಚುಕ್ಕೆ ಕಾಣುತ್ತದೆ, ಅದೇ ಗುರುಗ್ರಹ. ಇನ್ನೂ ಮುಂಚೆಯೇ ಚಂದ್ರನನ್ನು ಪತ್ತೆ ಮಾಡಿದಲ್ಲಿ ೧೩ ನಿಮಿಷಗಳ ಕಾಲ ಗುರುಗ್ರಹ ಮರೆಯಾಗುವುದನ್ನೂ ನೋಡಬಹುದು. ೫:೪೫ರಿಂದ ೫:೫೮ರವರೆಗೆ ಗುರು ಮರೆಯಾಗುತ್ತದೆ. ಸುಮಾರು ೬:೦೦ ಗಂಟೆಗೆ ಕತ್ತಲು ಗಾಢವಾದಂತೆ ಈ ಚುಕ್ಕೆ ಚಂದ್ರನ ಅಂಚಿನಲ್ಲಿ ಸ್ಫುಟವಾಗಿ ಗೋಚರಿಸುತ್ತದೆ. ದೂರದರ್ಶಕ ಅಥವಾ ದುರ್ಬೀನಿನಿಂದ ನೋಡಿದರೆ ಗುರುಗ್ರಹದ ನಾಲ್ಕು ಗೆಲಿಲಿಯನ್ ಉಪಗ್ರಹಗಳನ್ನು ಕಾಣಬಹುದು. ಅವು ಒಂದೊಂದಾಗಿ ಚಂದ್ರನ ಹಿಂದಿನಿಂದ ಹೊರಬರುವುದನ್ನು ಕಾಣಬಹುದು. ಇದನ್ನು ಕ್ಯಾಮೆರಾದಲ್ಲಿ ಸೆರೆ ಹಿಡಿಯಲು ಪ್ರಯತ್ನಿಸಿ. ಚಂದ್ರ ಬಹಳ ಪ್ರಕಾಶಮಾನವಾದದ್ದು. ಅದು ಚೆನ್ನಾಗಿ ಮೂಡಿದಲ್ಲಿ ಗುರು ಅಸ್ಪಷ್ಟವಾಗಿರುತ್ತದೆ. ಗುರು ಸ್ಪಷ್ಟವಾಗಬೇಕೆಂದು ಹೆಚ್ಚು ಎಕ್ಸಪೋಷರ್ ಕೊಟ್ಟರೆ ಚಂದ್ರ ಬೆಳಕಿನ ಮುದ್ದೆಯಾಗಿ ಅದಕ್ಕೊಂದು ಘೋಸ್ಟ್ (ಅಸ್ಪಷ್ಟ ಪ್ರತಿಬಿಂಬ) ಕೂಡ ಮೂಡಬಹುದು. ಈ ಬಗೆಯ ಪ್ರಯತ್ನಗಳು ಮುಂದಿನ ತಿಂಗಳ ಸೂರ್ಯಗ್ರಹಣದ ಛಾಯಾಗ್ರಹಣಕ್ಕೆ ಪ್ರಥಮ ಪ್ರಾಯೋಗಿಕ ಪರೀಕ್ಷೆಯಾಗಬಹುದು.



ನವೆಂಬರ್ ೨೮ರ ಸಂಜೆ ಗುರು ಗ್ರಹಕ್ಕೆ ತಾಗಿದಂತಿರುವ ಚಂದ್ರ ; ಸ್ವಲ್ಪವೇ ಅಂತರದಲ್ಲಿರುವ ಶುಕ್ರ ಗ್ರಹ

ತಿಂಗಳ ಆರಂಭದಿಂದಲೇ ಶುಕ್ರ ಮತ್ತು ಗುರುಗ್ರಹಗಳನ್ನು ಗುರುತಿಟ್ಟುಕೊಳ್ಳುವ ಪ್ರಯತ್ನ ಮಾಡಲು ಅವಕಾಶ ಇದೆ. ಆರಂಭದಲ್ಲಿ ಶುಕ್ರ ದಿಗಂತಕ್ಕೆ ಸಮೀಪ; ಗುರು ಎತ್ತರದಲ್ಲಿ ಇರುತ್ತವೆ. ಪರಸ್ಪರ ಸಮೀಪಿಸುವ ಇವು ೨೪-೨೫ರ ಅವಧಿಯಲ್ಲಿ ಸಮೀಪ ಹಾದುಹೋಗುತ್ತವೆ. ಆಮೇಲೆ ಶುಕ್ರ ಮೇಲೆ ಗುರು ಕೆಳಗೆ. ಈ ಚಲನೆಯನ್ನು ಗಮನಿಸಲು ಇದು ಸೂಕ್ತ ಅವಕಾಶ.

ಮುಂದುವರೆಯುವ ಚಂದ್ರ ಶನಿಗ್ರಹವನ್ನೂ ೨೯ರಂದು ಆಚ್ಛಾದನೆ ಮಾಡುತ್ತದೆಯಾದರೂ ಅದು ನಮ್ಮ ಹಗಲಿನಲ್ಲಿ ನಡೆಯುವುದರಿಂದ ಗೋಚರವಾಗುವುದಿಲ್ಲ. ೩೦ರಂದು ಅದು ಶನಿಗ್ರಹವನ್ನು ದಾಟಿ





ಡಿಸೆಂಬರ್ ೨೬ರಂದು ಕಂಕಣ ಗ್ರಹಣ ಸಂಭವಿಸಲಿದೆ. ಅಪರೂಪದ ಈ ವಿದ್ಯಮಾನವನ್ನು ಭಾರತದಿಂದ ಸುಮಾರು ೧೦ ವರ್ಷಗಳ ಕೆಳಗೆ ನೋಡಲು ಸಾಧ್ಯವಾಗಿತ್ತು. ಆಗ ಕನ್ಯಾಕುಮಾರಿ, ರಾಮೇಶ್ವರಗಳ ಮೂಲಕ ಹಾದುಹೋಗಿತ್ತು. ಈ ಬಾರಿ ಚಂದ್ರನ ನೆರಳು ಮಂಗಳೂರು, ಕಾಸರಗೋಡು, ನಂಜನಗೂಡು, ಉದಕಮಂಡಲ – ಈ ಊರುಗಳ ಮೂಲಕ ಹಾದು ಹೋಗುವುದು. ಆದ್ದರಿಂದ ನಾಗರಹೊಳೆ, ಕಬಿನಿ, ಬಂಡೀಪುರ ಮುಂತಾದ ಅರಣ್ಯ ಪ್ರದೇಶಗಳಿಂದ ಗ್ರಹಣ ನೋಡಬಹುದು. ನಿಮ್ಮ ಪ್ರಯಾಣಕ್ಕೆ ಈಗಲೇ ಸಿದ್ಧತೆ ಮಾಡಿಕೊಳ್ಳಿ. ಸುರಕ್ಷತೆಯ ಕನ್ನಡಕಗಳನ್ನು ಮರೆಯದೇ ತೆಗೆದುಕೊಂಡು ಹೋಗಿ.

ಮುಂದೆ ಹೋಗಿರುವುದನ್ನು ನೋಡುವಿರಿ.

ಹೀಗೆ ಶುಕ್ರ, ಶನಿ ಮತ್ತು ಗುರು ಸಂಜೆಯ ಆಕಾಶದಲ್ಲಿವೆ ಎಂದು ತಿಳಿಯಿತು. ಉಳಿದ ಬುಧ ಮತ್ತು ಮಂಗಳಗಳ ಚಲನೆಯನ್ನು ತಿಳಿಯೋಣ. ಮಂಗಳ ಕನ್ಯಾ ರಾಶಿಯ ಚಿತ್ರಾ ನಕ್ಷತ್ರದ ಆಸುಪಾಸಿನಲ್ಲಿ ಕಾಣಸಿಗುತ್ತದೆ. ೨೪ರ ಮುಂಜಾವಿನಲ್ಲಿ ಮಂಗಳ ಮತ್ತು ಚಂದ್ರ ಅಕ್ಕಪಕ್ಕದಲ್ಲಿಯೇ ಇರುತ್ತವೆ. ಬುಧ ಸೂರ್ಯನಿಗೂ ಭೂಮಿಗೂ ಮಧ್ಯೆ ೧೧ರಂದು ಹಾದು ಹೋಗುವುದು. ಈ ವಿದ್ಯಮಾನಕ್ಕೆ ನೀಚ ಯುತಿ ಎಂಬ ಹೆಸರಿದೆ. ಸೋಹೋ ಎಂಬ ಉಪಗ್ರಹ ಕಳಿಸುವ ಸೂರ್ಯನ ಚಿತ್ರಗಳಲ್ಲಿ ಈ ದೃಶ್ಯವನ್ನು ನೋಡಬಹುದು. ೨೮ರಂದು ಗರಿಷ್ಠಕೋನದಲ್ಲಿ ಕಾಣುವುದರಿಂದ ಅದನ್ನು ಗುರುತಿಸುವ ಪ್ರಯತ್ನ ಮಾಡಬಹುದು.

ನವೆಂಬರ್‌ನಲ್ಲಿ ಲಿಯೋನಿಡ್ಸ್ ಉಲ್ಕಾವೃಷ್ಟಿ ಕ್ರಿಯಾಶೀಲವಾಗಿರುತ್ತದೆ. ೧೭, ೧೮ ಮತ್ತು ೧೯ ರ ಮುಂಜಾವಿನಲ್ಲಿ ಗಂಟೆಗೆ ೧೦ರಿಂದ ೧೫ ಉಲ್ಕೆಗಳು ಬೀಳುವುವು. ಆದರೆ ಚಂದ್ರನ ಬೆಳಕೂ ಹೆಚ್ಚಾಗಿಯೇ ಇರುವುದರಿಂದ ಕ್ಷೀಣವಾದ ಉಲ್ಕೆಗಳನ್ನು ನೋಡುವ ಸಾಧ್ಯತೆ ಕಡಿಮೆ.

**ಖಗೋಳ ದಿನಚರಿ**

೨ ಶನಿ – ಚಂದ್ರ ಜೋಡಿ*
೪ ಚಾಂದ್ರಮಾಸದ ಮೊದಲ ಪಾದ
೭ ಭೂಮಿ – ಚಂದ್ರ ನಡುವೆ ಗರಿಷ್ಠ ದೂರ
೯ ಶುಕ್ರ – ಜ್ಯೇಷ್ಠಾ ಜೋಡಿ*
೧೦ ಮಂಗಳ – ಚಿತ್ರಾ ಜೋಡಿ*
೧೧ ಬುಧ ಗ್ರಹದ ನೀಚ ಯುತಿ
೧೨ ಹುಣ್ಣಿಮೆ
೧೪ ರೋಹಿಣಿ ಚಂದ್ರ ಜೋಡಿ
೧೭–೧೮ ಲಿಯೋನಿಡ್ಸ್ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ*
೧೯ ಚಾಂದ್ರಮಾಸದ ಕೊನೆಯ ಪಾದ
೨೦ ಮಘ – ಚಂದ್ರ ಜೋಡಿ
೨೦ ಬುಧ ಗ್ರಹದ ಹಿನ್ನಡೆ ಆರಂಭ
೨೩ ಭೂಮಿ – ಚಂದ್ರ ನಡುವೆ ಕನಿಷ್ಠ ದೂರ
೨೪ ಗುರು – ಶುಕ್ರ ನಡುವೆ ಕನಿಷ್ಠ ಅಂತರ*
೨೫ ಬುಧ – ಚಂದ್ರ ಜೋಡಿ
೨೬ ಅಮಾವಾಸ್ಯೆ
೨೮ ಗುರು ಚಂದ್ರ ಜೋಡಿ ಆಚ್ಛಾದನೆ ಸಂಜೆ ೫:೪೫ ರಿಂದ ೫:೫೮ರವರೆಗೆ*
೨೯ ಶುಕ್ರ – ಚಂದ್ರ ಜೋಡಿ*
೨೮ ಬುಧ ಗ್ರಹದ ಗರಿಷ್ಠ ಕೋನೋನ್ನತಿ*
೨೯ ಶನಿ– ಚಂದ್ರ ಜೋಡಿ*

**ಡಾ॥ ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ
ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧

## ಸಾದರ ಸ್ವೀಕಾರ

**ಆಕಾಶದಲ್ಲಿ ಏನಿದೆ? ಏಕಿದೆ?** ಡಾ॥ ಬಿ. ಎಸ್. ಶೈಲಜಾ
**ಪುಟ :** *೧೯೨* **ಬೆಲೆ :** *ರೂ. ೨೨೫*

**ಮನದೊಳಗಿನ ಮಾತು** (ಆಪ್ತ ಸಮಾಲೋಚನೆಗೆ ಒಂದು ಪ್ರವೇಶಿಕೆ) *ಗಣೇಶ್‌ರಾವ್ ನಾಡಿಗೇರ್*
**ಪುಟ :** *೧೪೪* **ಬೆಲೆ :** *ರೂ. ೧೧೦*

**ರಸ್ಕಿನ್ ಬಾಂಡ್ ಕತೆಗಳು**
*ಕನ್ನಡಕ್ಕೆ : ಡಿ. ಜಿ. ಮಲ್ಲಿಕಾರ್ಜುನ*
**ಪುಟ :** *೧೯೨* **ಬೆಲೆ :** *ರೂ. ೧೯೦*

**ಕಾಳಿ ಗಂಗಾ** (ಕಾದಂಬರಿ)
*ಕೊಂಕಣಿ ಮೂಲ : ಮಹಾಬಳೇಶ್ವರ ಸೈಲ್*
*ಕನ್ನಡಕ್ಕೆ : ಗೀತಾ ಶೆಣೈ*
**ಪುಟ :** *೨೮೦* **ಬೆಲೆ :** *ರೂ. ೨೭೫*

**ಮಕ್ಕಳ ಪಾಲನೆ – ಆರೋಗ್ಯ**
*ಡಾ॥ ಎಂ. ಡಿ. ಸೂರ್ಯಕಾಂತ*
**ಪುಟ :** *೧೨೦* **ಬೆಲೆ :** *ರೂ. ೧೨೫*

**ಭಾರತ ಸ್ವಾತಂತ್ರ್ಯ ಹುತಾತ್ಮ ಕವಿ ಅಶ್ಫಾಖ್ ಉಲ್ಲಾಖಾನ್** *ಮೂಲ : ಎಂ. ಐ. ರಾಜಸ್ವಿ*
*ಕನ್ನಡಕ್ಕೆ : ಜೆ. ಕಲೀಂ ಬಾಷ*
**ಪುಟ :** *೧೬೦* **ಬೆಲೆ :** *ರೂ. ೧೬೦*

**ಕೃಷಿ ಬಿಕ್ಕಟ್ಟು ಮತ್ತು ಅದರ ಪರಿಹಾರ**
*ಎಸ್. ಪಿ. ಶುಕ್ಲಾ, ಜಯಾ ಮೆಹ್ತಾ, ವಿನೀತ್ ತಿವಾರಿ, ಡಾ॥ ಸಿದ್ದನಗೌಡ ಪಾಟೀಲ*
**ಪುಟ :** *೪೦* **ಬೆಲೆ :** *ರೂ. ೩೦*

**ಹಿಂದೂ ಅಸ್ಮಿತೆಗಾಗಿ ಹುಡುಕಾಟ**
*ಮೂಲ : ಡಿ. ಎನ್. ಝಾ*
*ಕನ್ನಡಕ್ಕೆ : ಪ್ರದೀಪ ಕುಮಾರ ಶೆಟ್ಟಿ ಕೆ.*
**ಪುಟ :** *೭೨* **ಬೆಲೆ :** *ರೂ. ೮೦*

**ಬಹುಮುಖ ಪ್ರತಿಭೆಯ ಕುಮಾರ ವೆಂಕಣ್ಣ**
*ಪರಂಜ್ಯೋತಿ*
**ಪುಟ :** *೧೭೨* **ಬೆಲೆ :** *ರೂ. ೧೭೫*

**ವಿಜ್ಞಾನದಲ್ಲಿ ಮೋಜು** *ಮೂಲ : ಅರವಿಂದ ಗುಪ್ತ,*
*ಕನ್ನಡಕ್ಕೆ : ವಿ. ಎಸ್. ಎಸ್. ಶಾಸ್ತ್ರಿ,*
**ಪುಟ :** *೬೦* **ಬೆಲೆ :** *ರೂ. ೬೫*

**ಕಸದಿಂದ ಅದ್ಭುತ ಆಟಿಕೆಗಳು ಮತ್ತು ಪ್ರಯೋಗಗಳು**
*ಮೂಲ : ಅರವಿಂದ ಗುಪ್ತ,*
*ಕನ್ನಡಕ್ಕೆ : ವಿ. ಎಸ್. ಎಸ್. ಶಾಸ್ತ್ರಿ,*
**ಪುಟ :** *೫೬* **ಬೆಲೆ :** *ರೂ. ೬೫*

**ಗಾಂಧಿ ಒಂದು ಬೆಳಕು** ಎಸ್. ಮಾಲತಿ
**ಪುಟ :** *೭೨* **ಬೆಲೆ :** *ರೂ. ೬೫*

**ಯಾವ ಜನ್ಮದ ಮೈತ್ರಿ?** (ರಾವೀಯಿಂದ ಕಾವೇರಿಯವರೆಗಿನ ಯಾನ) *ಚಿರಂಜೀವಿ ಸಿಂಘ್*
**ಪುಟ :** *೨೬೪* **ಬೆಲೆ :** *ರೂ. ೨೭೫*

**ಸ್ವಾತಂತ್ರ್ಯೋತ್ತರ ಭಾರತ** *ಪ್ರೊ॥ ಬಿಪಿನ್ ಚಂದ್ರ, ಪ್ರೊ॥ ಮೃದುಲಾ ಮುಖರ್ಜಿ, ಪ್ರೊ॥ ಆದಿತ್ಯ ಮುಖರ್ಜಿ*
*ಕನ್ನಡಕ್ಕೆ : ಡಾ॥ ಸಿ. ಬಿ. ಕಮತಿ*
**ಪುಟ :** *೬೫೬* **ಬೆಲೆ :** *ರೂ. ೮೭೫*

*Creating Choices (A Guide to Success for the Young and Students)* *V. K. Talithaya*
**ಪುಟ :** *೧೪೪* **ಬೆಲೆ :** *ರೂ. ೨೦೦*

ಮೇಲಿನ ಹದಿನಾರು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

**ಎಂ. ಎನ್. ಕಾಮತ** *ಡಾ॥ ಮಹಾಬಲೇಶ್ವರ ರಾವ್*
**ಪುಟ :** *ix+vii+೧೦೦ = ೧೧೬* **ಬೆಲೆ :** *ರೂ. ೯೦*
ಪ್ರಕಾಶಕರು
**ಸಿವಿಜಿ ಪಬ್ಲಿಕೇಷನ್ಸ್,** ನಂ. ೨೭೭, ೫ನೇ ಕ್ರಾಸ್, ವಿಧಾನಸೌಧ ಎಕ್ಸ್‌ಟೆನ್ಷನ್, ಲಗ್ಗೆರೆ, ಬೆಂಗಳೂರು – ೫೮

**ಸಾಹಿತ್ಯ ಸಂಚಯ** (ವಿಮರ್ಶಾ ಲೇಖನಗಳು)
*ಡಾ॥ ಮಮತಾ ರಾವ್*
**ಪುಟ :** *೧೩೪* **ಬೆಲೆ :** *ರೂ. ೧೪೦*

**ಸಾಹಿತ್ಯ ಸಮುದಿತ** *ಡಾ॥ ಮಮತಾ ರಾವ್*
**ಪುಟ :** *೧೪೮* **ಬೆಲೆ :** *ರೂ. ೧೫೦*
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಆದಿತ್ಯ ಪಬ್ಲಿಕೇಷನ್ಸ್,** ಎಲ್.ಐ.ಜಿ. ೪೯, ಮಹಾಂತೇಶ ನಗರ, ಬೆಳಗಾವಿ

**ಆರದ ಕೆಂಡಗಳು** (ಕವನ ಸಂಕಲನ)
ಎಚ್. ಆರ್. ಚಲವಾದಿ
**ಪುಟ :** *೮೦* **ಬೆಲೆ :** *ರೂ. ೮೦*
ಪ್ರಕಾಶಕರು
**ಅಭಿಜಿತ್ ಪ್ರಕಾಶನ,** ಮುಂಬೈ

**ನನ್ನೆದೆಯ ಹಾಡು** (ಕವನ ಸಂಕಲನ) *ಮೇಟಿ ಕೊಟ್ರಪ್ಪ*
**ಪುಟ :** *xii+೯೨=೧೦೪* **ಬೆಲೆ :** *ರೂ. ೯೦*
ಪ್ರಕಾಶಕರು
**ಆಹ್ವಾನ ಪ್ರಕಾಶನ,** ಬಸರಕೋಡು – ೫೮೩೨೨೪

**ಜಾತ್ರೆ** *ಡಾ॥ ಬಸವಪ್ರಭು ಪಾಟೀಲ ಬೆಟ್ಟದೂರು*
**ಪುಟ :** *viii+೧೧೬=೧೨೪* **ಬೆಲೆ :** *ರೂ. ೧೦೦*
ಪ್ರಕಾಶಕರು
**ಕವಿತಾ ಪ್ರಕಾಶನ,** ಕೆ.ಎಚ್.ಬಿ.ಕಾಲನಿ, ಮಾನ್ವಿ–೫೮೪೧೨೩

**ಆಲ್ಬರ್ಟ್ ಐನ್‌ಸ್ಟೀನ್ : ಆಯ್ದ ಬರಹಗಳು** (ತೃತೀಯ ಭಾಷಾಂತರ) *ಸಂಪಾದಕರು : ಜಿಮ್ ಗ್ರೀನ್*
ಭಾಷಾಂತರಕಾರರು : ವಿಜಯ ನಾಗ್ ಜಿ.
**ಪುಟ :** *೧೦೦* **ಬೆಲೆ :** *ರೂ. ೮೦*
ಪ್ರಕಾಶಕರು
**ಸಂವಹನ,** ೧೨/೧ಎ, ಈವನಿಂಗ್ ಬಜಾರ್ ಹಿಂಭಾಗ, ಶಿವರಾಂಪೇಟೆ, ಮೈಸೂರು – ೫೭೦೦೦೧

**ಜಗದ್ವಂದ್ಯ ಸೌಹಾರ್ದ ಗುರು** (ಪೂಜ್ಯ ಡಾ. ತೋಂಟದ ಸಿದ್ಧಲಿಂಗ ಶ್ರೀಗಳ ಕುರಿತು ನಾಡಿನ ಶ್ರೇಷ್ಠ ಚಿಂತಕರ ಲೇಖನಗಳು) ಸಂ. ಸಣ್ಣವೀರಣ್ಣ ದೊಡ್ಡಮನಿ
**ಪುಟ :** *೧೩೪* **ಬೆಲೆ :** *ರೂ. ೧೪೦*
ಪ್ರಕಾಶಕರು
**ಗಂಗಬಸವ ಪ್ರಕಾಶನ ಕೊಕ್ಕರಗುಂದಿ,** 'ಶುಭಾ–ಸಂಪು' ಎಂ.ಪಿ.ಎಸ್. ಶಾಲೆ ಹಿಂಭಾಗ, ಭಂಡಾರಿ ಕಾಲೇಜ ಹತ್ತಿರ, ಗುಳೇದಗುಡ್ಡ – ೫೮೭ ೨೦೩

# ಕನ್ಹಯ್ಯ ಎಂಬ ಯುವ ಜನರ ಸಂಕೇತ

**ಡಾ॥ ಕನ್ಹಯ್ಯ ಕುಮಾರ ಇತ್ತೀಚೆಗೆ ಕಲಬುರ್ಗಿ ವಿಶ್ವವಿದ್ಯಾಲಯದಲ್ಲಿ ಭಾಷಣ ಮಾಡುವ ಕಾರ್ಯಕ್ರಮ ಏರ್ಪಾಟಾಗಿತ್ತು. ಆದರೆ ಬಿ.ಜೆ.ಪಿ., ಎ.ಬಿ.ವಿ.ಪಿ, ಶ್ರೀರಾಮ ಸೇನೆಯ ಕಾರ್ಯಕರ್ತರು ಅಡ್ಡಿಪಡಿಸಿದರು. ಶಿಕ್ಷಣ ಇಲಾಖೆ ರಾಜ್ಯಪಾಲರ ಮೂಲಕ ಒತ್ತಡ ತಂದು ಕನ್ಹಯ್ಯನ ಕಾರ್ಯಕ್ರಮ ರದ್ದುಗೊಳಿಸಿದರು. ವಿಶ್ವವಿದ್ಯಾಲಯದ ಸ್ವಾಯತ್ತತೆಯನ್ನು ಬಿ.ಜೆ.ಪಿ. ಸರಕಾರ ಕಿತ್ತಿಕೊಂಡಿತು. ಇದು ಪ್ರಜಾಸತ್ತೆಯ ಅಣಕ. ಫ್ಯಾಸಿಸಂನ ಮಾದರಿ. ಈ ಬೆಳವಣಿಗೆಗಳಿಂದ ರೋಸಿ, ಕನ್ಹಯ್ಯನ ಚಿಂತನೆಗಳಿಗೆ ಕಿವಿಗೊಟ್ಟು ಕಲಬುರ್ಗಿಯ ಯುವಕನೊಬ್ಬ ಬರೆದ ಲೇಖನವಿದು.**

**–ಸಂ**

**ಗುರು ಹಡಪದ್ ಖಣದಾಳ**

**ಡಾ॥** ಕನ್ಹಯ್ಯ ಕುಮಾರ್ ಅಕ್ಟೋಬರ್ ೧೫ರಂದು ಕಲಬುರಗಿಗೆ ಬರುತ್ತಾರೆಂಬ ಸುದ್ದಿ ಸಾಮಾಜಿಕ ಜಾಲತಾಣಗಳಲ್ಲಿ ಹರಿದಾಡಲು ಪ್ರಾರಂಭವಾದಾಗ ನನ್ನನ್ನೂ ಸೇರಿ ಅದೆಷ್ಟೋ ಯುವ ಮನಸ್ಸುಗಳು ಕನ್ಹಯ್ಯರ ಭಾಷಣ ಕೇಳಲು ಕಾತುರದಿಂದ ಕಾದು ಕುಳಿತಿದ್ದವು, ಕನ್ಹಯ್ಯ ಬರುವಿಕೆಗೆ ಸ್ವಾಗತ ಸಮಿತಿ ಸಹ ಅಷ್ಟೇ ಜೋರಾಗಿ ತಯಾರಿ ಮಾಡಿಕೊಂಡಿತ್ತು.

ನಿಗದಿಯಾಗಿದ್ದಂತೆ ಕನ್ಹಯ್ಯ ಕುಮಾರ್ ಅಂದು ಕಲಬುರಗಿ ವಿಶ್ವವಿದ್ಯಾಲಯದ ಡಾ॥ ಬಿ. ಆರ್. ಅಂಬೇಡ್ಕರ್ ಆಡಿಟೋರಿಯಂನಲ್ಲಿ "ಸಂವಿಧಾನ ರಕ್ಷಣೆಯಲ್ಲಿ ಯುವ ಜನತೆಯ ಹೊಣೆ" ಎಂಬ ವಿಷಯದ ಮೇಲೆ ಕಾರ್ಯಕ್ರಮ ನಡೆಸಬೇಕಾಗಿತ್ತು ಮತ್ತು ಸಾಯಂಕಾಲ ೪ ಗಂಟೆಗೆ ನಗರದ ಡಾ॥ ಬಿ. ಆರ್. ಅಂಬೇಡ್ಕರ್ ಪದವಿ ಮಹಾವಿದ್ಯಾಲಯದ ಮೈದಾನದಲ್ಲಿ ಜಿಲ್ಲೆಯ ಸಾವಿರಾರು ಜನರನ್ನು ಉದ್ದೇಶಿಸಿ ಬಹಿರಂಗ ಸಭೆಯಲ್ಲಿ ಮಾತನಾಡುವವರಿದ್ದರು.

ಈ ಸುದ್ದಿ ಬೇರೆ ಬೇರೆ ಮಾಧ್ಯಮದ ಮೂಲಕ ಸಂಚಲನದ ರೀತಿಯಲ್ಲಿ ನಿರೀಕ್ಷೆಗೂ ಮೀರಿ ಪಸರಿಸಿತು, ಈ ಸುದ್ದಿಯಿಂದ ಧೃತಿಗೆಟ್ಟ ಕೋಮುವಾದಿಗಳು ಶ್ರೀರಾಮ ಸೇನೆಯ ಮೂಲಕ ಕನ್ಹಯ್ಯ ಭಾಷಣಕ್ಕೆ ಅಡ್ಡಿಪಡಿಸುವ ಎಲ್ಲಾ ಪ್ರಯತ್ನಕ್ಕೆ ಮುಂದಾದರು. ಮತ್ತು ಸರಕಾರದ ಮೇಲೆ ಒತ್ತಡ ಹಾಕಿ ಈ ಭಾಗದ ಭಾ.ಜ.ಪ. ಜನಪ್ರತಿನಿಧಿಗಳು ವಿಶ್ವವಿದ್ಯಾಲಯದಲ್ಲಿನ ಕಾರ್ಯಕ್ರಮ ರದ್ದು ಮಾಡಲು ಮುಂದಾದರು. ನಿರೀಕ್ಷೆಯಂತೆ ಅದರಲ್ಲಿ ಅವರು ಯಶಸ್ವಿಯೂ ಆದರು. ಇದರಲ್ಲಿ ರಾಜ್ಯಪಾಲರು ನೇರವಾಗಿ ಹಸ್ತಕ್ಷೇಪ ಮಾಡಿದ್ದರಿಂದ, ಕುಲಪತಿಗಳು ಅವರ ಒತ್ತಡಕ್ಕೆ ಮಣಿದು ರಾತ್ರೋ ರಾತ್ರಿ ಕಾರ್ಯಕ್ರಮವನ್ನು ರದ್ದುಗೊಳಿಸಿದರು. ಈ ಬಗ್ಗೆ ಆಯೋಜಕರಿಗೆ ಪೊಲೀಸರ ಮೂಲಕ ಸುದ್ದಿ ತಿಳಿಸಿದರು. ಮುಂಚಿತವಾಗಿ ಸಿಂಡಿಕೇಟ್ ಸಭೆಯಲ್ಲಿಯೇ ಪರವಾನಿಗೆ ಪಡೆದಿದ್ದರೂ ಕಾರ್ಯಕ್ರಮಕ್ಕೆ ಅವಕಾಶ ಮಾಡಿಕೊಡದಿರುವದು ಇಲ್ಲಿಯ ಪ್ರಗತಿಪರ




ಜನಸಮುದಾಯವನ್ನು ಮತ್ತು ವಿದ್ಯಾರ್ಥಿಗಳನ್ನು ರೊಚ್ಚಿಗೇಳುವಂತೆ ಮಾಡಿತು. ಕುಪಿತಗೊಂಡ ವಿದ್ಯಾರ್ಥಿಗಳು ಪ್ರತಿಭಟನೆಗೆ ಇಳಿದರು ಮತ್ತು ಕೊನೆಯ ಘಳಿಗೆಯಲ್ಲಿ ಕಾರ್ಯಕ್ರಮವನ್ನು ನಗರದ ವಿಶ್ವೇಶ್ವರಯ್ಯ ಸಭಾ ಭವನಕ್ಕೆ ಸ್ಥಳಾಂತರಿಸಲಾಯಿತು, ಅಲ್ಲಿಯೂ ಜನ ಕಿಕ್ಕಿರಿದು ತುಂಬಿದ್ದನ್ನು ಕಂಡ ಪೊಲೀಸ ಇಲಾಖೆಯೂ ಕೋಮು ಶಕ್ತಿಗಳ ಒತ್ತಡಕ್ಕೆ ಮಣಿದು ಭದ್ರತೆಯ ನೆಪವೊಡ್ಡಿ ಆ ಕಾರ್ಯಕ್ರಮಕ್ಕೂ ಅವಕಾಶ ಕೊಡಲಿಲ್ಲ.

ಈ ಬೆಳವಣಿಗೆಗಳಿಂದ ಕಾರ್ಯಕ್ರಮವನ್ನು ವಿರೋಧಿಸುತ್ತಿದ್ದ ಮನಸ್ಸುಗಳು ಸಂಭ್ರಮಿಸಿದವು. ನಾವು ಯಶಸ್ವಿಯಾದೆವು ಎಂದು ವಿಜಯೋತ್ಸವಕ್ಕೆ ಅಣಿಯಾಗುತ್ತಿರುವಾಗಲೆ ಅವರ ಕಿವಿಗೆ ಅಲೆಗಳಂತೆ ಅಪ್ಪಳಿಸಿದ್ದು ಒಂದು ದೊಡ್ಡ ಸುದ್ದಿ. ಅದೆಂದರೆ ಸಂಜೆ ೪ ಗಂಟೆಗೆ ನಡೆಯುವ ಕಾರ್ಯಕ್ರಮಕ್ಕೆ ಜನ ಸಾಗರೋಪಾದಿಯಲ್ಲಿ ಮೈದಾನದೆಡೆಗೆ ಧಾವಿಸುತ್ತಿದ್ದಾರೆ ಎನ್ನುವದು.

ಇಡೀ ದಿನದ ಬೆಳವಣಿಗೆಯಿಂದ ಜನಕ್ಕೆ ಇನ್ನೂ ಕುತೂಹಲ ಹೆಚ್ಚಾಯಿತು, ಬಹುತೇಕರು ಕನ್ಹಯ್ಯರ ಭಾಷಣ ಕೇಳಲು ಮೈದಾನದೆಡೆಗೆ ಬಂದರೆ, ಇನ್ನೂ ಕೆಲವರು ಯಾರು ಈ ಕನ್ಹಯ್ಯ ಕುಮಾರ, ಈ ಮೂವತ್ತರ ಪ್ರಾಯದ ಯುವಕನ ಹೆಸರು ಕೇಳಿದರೆ ಆಳುವ ಸರಕಾರಕ್ಕೆ ಯಾಕೆ ಈ ಪರಿಯ ನಡುಕ ಎಂಬ ಕುತೂಹಲದಿಂದ ಕಾರ್ಯಕ್ರಮದ ಕಡೆಗೆ ಧಾವಿಸಿ ಬಂದಿದ್ದರು.

ರಾಜಕಾರಣಿಗಳು ತಮ್ಮ ಸಭೆಗಳಿಗೆ ಶಕ್ತಿ ಪ್ರದರ್ಶನಕ್ಕೆ ಎಂದು ಬಾಡಿಗೆ ಜನರನ್ನು ಕರೆತರುತ್ತಾರೆ, ಆದರೆ ಈ ಕಾರ್ಯಕ್ರಮದಲ್ಲಿ ಸ್ವಯಂ ಪ್ರೇರಿತರಾಗಿ ಸೇರಿದ್ದ ಜನಸಮೂಹವನ್ನು ಕನ್ಹಯ್ಯ ಅಯಸ್ಕಾಂತದಂತೆ ಸೆಳೆದಿದ್ದರು, ದೂರದೂರುಗಳಿಂದ, ಜಿಲ್ಲೆಗಳಿಂದ ಜನ ಈ ಕಾರ್ಯಕ್ರಮಕ್ಕೆ ತಮ್ಮ ಸ್ವಂತ ಖರ್ಚಿನಲ್ಲಿ ಬಂದು ಇಡೀ ಮೈದಾನದಲ್ಲಿ ಕಿಕ್ಕಿರಿದು ತುಂಬಿದ್ದು ವಿಶೇಷವಾಗಿತ್ತು, ಮತ್ತು ಇದು ಸರಕಾರಕ್ಕೆ ಮತ್ತು ಕೋಮು ಶಕ್ತಿಗಳಿಗೆ "ನೀವು ಅದುಮಿದಷ್ಟು ನಾವು ಪುಟಿದೇಳುತ್ತೇವೆ" ಎಂಬ ಸಂದೇಶವನ್ನು ಈ ಮೂಲಕ ಸಾರಿ ಹೇಳಿದಂತಿತ್ತು.

ನೆರೆದಿದ್ದ ಜನಸ್ತೋಮವನ್ನುದ್ದೇಶಿಸಿ ಮಾತನಾಡಿದ ಡಾ॥ ಕನ್ಹಯ್ಯ ಕುಮಾರ್ ತಮ್ಮ ಎಂದಿನ ಶೈಲಿಯಲ್ಲಿ ಆಳುವ ಸರಕಾರಕ್ಕೆ ತಮ್ಮ ಮೊನಚಾದ ಮಾತಿನ ಮೂಲಕ ತಿವಿದರು. ಅವರ ಒಂದೊಂದು ಮಾತೂ ಬಂದೂಕಿನ ನಳಿಕೆಯಿಂದ ಹೊರಟ ಗೋಲಿಯಂತೆ ಭಾಸವಾಗುತ್ತಿತ್ತು, ಸೇರಿದ ಜನಸಮೂಹಕ್ಕೆ 'ಎಲ್ಲರಿಗೂ ನಮಸ್ಕಾರ' ಎಂದು ಕನ್ನಡದಲ್ಲಿ ಹೇಳಿ ತಮ್ಮ ಮಾತು ಆರಂಭಿಸಿದ ಕನ್ಹಯ್ಯ ಆರ್.ಎಸ್.ಎಸ್. ಮತ್ತು ಅದರ ಅಂಗವೇ ಆದ ಆಡಳಿತಾರೂಢ ಭಾ.ಜ.ಪ.ದ ಮತ್ತು ನೇರವಾಗಿ ಪ್ರಧಾನ ಮಂತ್ರಿ ಹಾಗೂ ಗೃಹ ಸಚಿವರ ಒಳ ಸಂಚುಗಳನ್ನು ಎಳೆ ಎಳೆಯಾಗಿ ಬಿಚ್ಚಿಟ್ಟರು.

ನಮಗೆ ಯಾವುದೇ ಧರ್ಮದ ಬಗ್ಗೆ ತಕರಾರುಗಳಿಲ್ಲ ಆದರೆ ಒಂದು ಧರ್ಮವನ್ನು ಮುಂದಿಟ್ಟುಕೊಂಡು ದೇಶದಲ್ಲಿ ವಿಷ ಬೀಜವನ್ನು ಬಿತ್ತಲಾಗುತ್ತಿದೆ. ಬಡತನ, ಬೆಲೆ ಏರಿಕೆ ನಿರುದ್ಯೋಗದ ವಿರುದ್ಧ ಧ್ವನಿ ಎತ್ತದಂತೆ, ಜನರನ್ನು ಧರ್ಮದ ಅಮಲಿನಲ್ಲಿ ತೇಲುವಂತೆ ನೋಡಿಕೊಳ್ಳಲಾಗುತ್ತಿದೆ, ಹರಿಯಾಣ, ಮಹಾರಾಷ್ಟ್ರದ ಚುನಾವಣೆಗಳಲ್ಲಿ ಅಭಿವೃದ್ಧಿಯ ಮಾತುಗಳನ್ನಾಡದೆ ಕೇವಲ ಕಾಶ್ಮೀರದ ವಿಷಯ ಮುಂದಿಟ್ಟು ಮತ ಕೇಳುತ್ತಿದ್ದಾರೆ. ಇದಕ್ಕೆ ಅವರ ಆಡಳಿತದ ವೈಫಲ್ಯವೇ ಮುಖ್ಯ ಕಾರಣ. ಅವರಲ್ಲಿ ರೈತರ ಆತ್ಮಹತ್ಯೆ, ನಿರುದ್ಯೋಗಗಳ ಕುರಿತು ಎತ್ತಲಾಗುವ

ಪ್ರಶ್ನೆಗಳಿಗೆ ಉತ್ತರಗಳಿಲ್ಲ. ಆದ್ದರಿಂದ ನಮ್ಮ ನಡುವೆಯೇ ಜಗಳವನ್ನು ತಂದಿಟ್ಟು ಒಡೆದು ಆಳುವ ನೀತಿ ಅವರದ್ದು.

ಪ್ರಧಾನಿ ತಮ್ಮ ಹಳೆಯ ಭಾಷಣಗಳಲ್ಲಿ ಒಬ್ಬ ಸಶಕ್ತ ಪ್ರಧಾನಿ ಇದ್ದಿದ್ದರೆ ಡಾಲರ್‌ನ ಎದುರು ರೂಪಾಯಿ ಕುಸಿಯುತ್ತಿರಲಿಲ್ಲ ಎಂದಿದ್ದರು. ಆದರೆ ಈಗ ಅವರೇ ಪ್ರಧಾನಿ ಆಗಿದ್ದಾರೆ, ರೂಪಾಯಿ ಎಂದೂ ಇಲ್ಲದಷ್ಟು ಕುಸಿದು ಬಿದ್ದಿದೆ, ದಿನೇ ದಿನೇ ದೇಶದ ಆರ್ಥಿಕ ಪರಿಸ್ಥಿತಿ ಹದಗೆಡುತ್ತಿದೆ. ನಾನು ಸತ್ತರೂ ಆಧಾರ್ ಯೋಜನೆಗೆ ಅವಕಾಶ ಕೊಡುವುದಿಲ್ಲ ಎಂದಿದ್ದರು ಪ್ರಧಾನಿ. ಆದರೆ ಇಂದು ಎಲ್ಲದಕ್ಕೂ ಆಧಾರ್ ಅನ್ನು ಜೋಡಿಸಲಾಗುತ್ತಿದೆ. ಮತ್ತು ಪ್ರಧಾನಿ ಇನ್ನೂ ಬದುಕಿಯೇ ಇದ್ದಾರೆ. ಆದ್ದರಿಂದ ಅವರ ಸುಳ್ಳು ಮಾತುಗಳಿಗೆ ಮರುಳಾಗಬೇಡಿ, ಅವರು ಆಡಿದ ಮಾತಿಗೆ ಸ್ವತಃ ಅವರೇ ಬದ್ಧರಾಗಿರುವದಿಲ್ಲ ಎಂದು ಡಾ॥ ಕನ್ಹಯ್ಯ ತಮ್ಮ ಮೊನಚಾದ ಮಾತುಗಳ ಮೂಲಕ ಪ್ರಧಾನಿಯನ್ನು ತಿವಿದರು.

ಇನ್ನೊಂದೆಡೆ ಇಂದು ದೇಶದ್ರೋಹಿಗಳಿಗೆ ಭಾರತರತ್ನ ಕೊಡುವ ಮಾತು ಕೇಳಿಬರುತ್ತಿದೆ. ಕೊಟ್ಟುಕೊಳ್ಳಿ ನಿಮ್ಮದೇ ಸರಕಾರವಿದೆ ಯಾರಿಗೆ ಬೇಕಾದರೂ ಕೊಡಿ. ಆದರೆ ಇತಿಹಾಸ ಮುಂದೊಮ್ಮೆ ನಿಮ್ಮನ್ನು ಪದೇ ಪದೇ ಪ್ರಶ್ನಿಸುತ್ತದೆ, 'ಭಗತ್‌ಸಿಂಗ್ ಈ ದೇಶಕ್ಕಾಗಿ ನಗು ನಗುತ್ತ ನೇಣಿಗೆ ಕೊರಳೊಡ್ಡುತ್ತಿದ್ದಾಗ, ನಿಮ್ಮವರು ಬ್ರಿಟಿಷರ ಎದುರು ಏಕೆ ನಡುಬಗ್ಗಿಸಿ ಕ್ಷಮೆ ಕೇಳುತ್ತಿದ್ದರು' ಎಂದು. ನಿಮ್ಮ ಯೋಗ್ಯತೆ ಇಷ್ಟೇ, ನೀವು ಜನರ ಕಣ್ಣಿಗೆ ಮಣ್ಣೆರಚಲು ಹೊರಟಿದ್ದೀರಿ. ಇತಿಹಾಸದಲ್ಲಿ ಇಂತಹ ಪ್ರಯತ್ನ ಮಾಡಿದ್ದವರ ಗತಿ ಕೊನೆಗೆ ಏನಾಯಿತು ಎಂದು ನಿಮಗೂ ಗೊತ್ತಿದೆ.

ನಮ್ಮ ಪ್ರಧಾನಿ ಬಡವರಾಗಿದ್ದರು ಎಂದು ಪ್ರಚಾರ ಮಾಡಲು ಇಂದು ಕೋಟಿಗಟ್ಟಲೆ ಖರ್ಚು ಮಾಡಲಾಗುತ್ತಿದೆ. ಆದರೆ ಪ್ರಧಾನಿ ಅಂದು ಬಡವರಾಗಿದ್ದರು ಅಷ್ಟೇ! ಆದರೆ ನೀವು– ಜನಸಾಮಾನ್ಯರು ಇನ್ನೂ ಬಡವರಾಗಿಯೇ ಉಳಿದಿದ್ದೀರಿ, ನಿಮಗಾಗಿ ಅವರು ಏನನ್ನೂ ಮಾಡುತ್ತಿಲ್ಲ. ಬದಲಾಗಿ ಬಂಡವಾಳಶಾಹಿಗಳ ಜೇಬು ತುಂಬುವ ಕೆಲಸ ಮಾಡುತ್ತಿದ್ದಾರೆ ಎಂದು ಪ್ರಧಾನಿ ವಿರುದ್ಧ ಹರಿಹಾಯ್ದರು.

ಇತ್ತೀಚೆಗೆ ಪ್ರಧಾನಿಯವರು ಬುದ್ಧನನ್ನು ಜಪಿಸುತ್ತಿದ್ದಾರೆ. ಹೊರದೇಶಗಳಲ್ಲಿ ಜನರನ್ನು ಉದ್ದೇಶಿಸಿ ಇಡೀ ಜಗತ್ತಿಗೆ ನಾವು ಬುದ್ಧನನ್ನು ಕೊಟ್ಟಿದ್ದೇವೆ ಎಂದು ಹೇಳುತ್ತಾರೆ, ಆದರೆ ಇವರಿಗೂ ಬುದ್ಧನಿಗೂ ಎಲ್ಲಿಂದ ಎಲ್ಲಿಯ ಸಂಬಂಧ? ಮನೆಗಳಿಗೆ ನುಗ್ಗಿ ಹೊಡೆಯುತ್ತೇವೆ, ಕತ್ತರಿಸಿ ಹಾಕುತ್ತೇವೆ ಎನ್ನುವ ಇಂದಿನ ನಾಯಕರೆಲ್ಲಿ? ಅಹಿಂಸೆಯನ್ನು ಬೋಧಿಸಿ ಬದುಕಿದ್ದ ಬುದ್ಧನೆಲ್ಲಿ? ಕೇವಲ ಮಾತನಾಡುವುದೇ ಸತ್ಯವಲ್ಲ, ನೀವೇನು ಮಾಡುತ್ತೀರೋ, ಹೇಗೆ ನಡೆದುಕೊಳ್ಳುತ್ತೀರೋ ಅದೇ ಸತ್ಯ ಎಂಬುದು ಬುದ್ಧನ ಬೋಧನೆ ಆಗಿತ್ತು. ಆದರೆ ಪ್ರಧಾನಿಯವರು ವಿದೇಶದಲ್ಲಿ ಬುದ್ಧ ಎನ್ನುತ್ತಾರೆ. ಇಲ್ಲಿ ಬಂದು ಯುದ್ಧ ಎನ್ನುತ್ತಾರೆ. ಒಟ್ಟಾರೆ ಸತ್ಯವನ್ನು ಮರೆಮಾಚಲು ಸುಳ್ಳಿನ ಜಾಲ ಹೆಣೆಯಲಾಗುತ್ತಿದೆ.

೨೦೧೯ರ ಚುನಾವಣೆಯಲ್ಲಿ ಅವರ ಹಿಂದಿನ ಆಶ್ವಾಸನೆಗಳು ಯಾವುದೂ ಚರ್ಚೆ ಆಗಲಿಲ್ಲ. ಎರಡು ಕೋಟಿ ಉದ್ಯೋಗ ಸೃಷ್ಟಿ ಆಗಲಿಲ್ಲ, ರೈತರ ಆದಾಯ ಹೆಚ್ಚಳ ಆಗಲಿಲ್ಲ, ಯಾರ ಬ್ಯಾಂಕ್ ಖಾತೆಗೂ ಹದಿನೈದು ಲಕ್ಷ ರೂಪಾಯಿ ಜಮೆ ಆಗಲಿಲ್ಲ, ಯಾವ ಸಮಸ್ಯೆಯೂ ಬಗೆಹರಿಯಲಿಲ್ಲ! ಇದನ್ನು ಪ್ರಶ್ನಿಸಿದರೆ ಭಾಜಪ ಕಾರ್ಯಕರ್ತರು ಮೋದಿ ಬಿಟ್ಟರೆ ಮತ್ಯಾರು ಎಂಬ ಪ್ರಶ್ನೆಯನ್ನು ಮುಂದಿಡುತ್ತಾರೆ.



***ಡಾ॥ ಕನ್ಹಯ್ಯ ಕುಮಾರ್ ಅವರ ಭಾಷಣ ಕೇಳಲು ಕಲಬುರ್ಗಿಯಲ್ಲಿ ಸೇರಿದ ಜನಸಮೂಹ***

ಆದರೆ ಮೇಲಿನ ಯಾವ ಪ್ರಶ್ನೆಗೂ ಅವರಲ್ಲಿ ಉತ್ತರಗಳಿಲ್ಲ. ವ್ಯವಸ್ಥಿತ ಕುತಂತ್ರದ ಜಾಲದಲ್ಲಿ ನಮ್ಮನ್ನು ಸಿಲುಕಿಸಿ ಆಳಲಾಗುತ್ತಿದೆ. – ಹೀಗೆಂದು ಕನ್ಹಯ್ಯ ನೆರೆದ ಜನಸ್ತೋಮವನ್ನುದ್ದೇಶಿಸಿ ಮಾತನಾಡಿದಾಗ ಈ ಮನುಷ್ಯನ ಮಾತಿನಲ್ಲಿ ಅದೆಷ್ಟು ನಿಜಾಂಶಗಳಿವೆಯಲ್ಲ ಎಂದೆನಿಸದೆ ಇರದು. ಕನ್ಹಯ್ಯರ ಭಾಷಣದ ಉದ್ದಕ್ಕೂ ಆಳುವ ಸರಕಾರದ ವಿರುದ್ಧ ಆತ ತರ್ಕಬದ್ಧವಾಗಿ ವಾದಿಸಿದ ರೀತಿ, ಎತ್ತುತ್ತಿದ್ದ ನೈಜ ಪ್ರಶ್ನೆಗಳು ನಮ್ಮನ್ನು ವಿಚಾರಕ್ಕೆ ಹಚ್ಚುವಂತಿದ್ದವು.

ಆತನ ವಾಕ್‌ಚಾತುರ್ಯ ಕಂಡು ಕಲಬುರಗಿಯ ಜನ ಬೆಕ್ಕಸ ಬೆರಗಾದರು. ಆದ್ದರಿಂದ ಆತನ ಮಾತಿನುದ್ದಕ್ಕೂ ಜನರಿಂದ ವ್ಯಕ್ತವಾದ ಚಪ್ಪಾಳೆ, ಶಿಳ್ಳೆಗಳು ನಮಗೆ ಬಹುಕೋಟಿ ವೆಚ್ಚದ ಬ್ಲಾಕ್ ಬ್ಲಾಸ್ಟರ್ ಸಿನಿಮಾದ ಅನುಭವ ನೀಡುತ್ತಿತ್ತು. ಅಂದಿನ ಕಾರ್ಯಕ್ರಮದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ವಿದ್ಯಾರ್ಥಿ ಯುವಜನರು, ಮಹಿಳೆಯರು ಭಾಗವಹಿಸಿದ್ದುದು ಇನ್ನೂ ಒಂದು ವಿಶೇಷವಾಗಿತ್ತು.

ಒಟ್ಟಾರೆ ಕನ್ಹಯ್ಯ ಎಂಬ ಈ ಯುವಕ ಭವಿಷ್ಯ ಭಾರತದ ಹೊಸ ಆಶಾಕಿರಣ ಎಂಬಂತೆ ಗೋಚರವಾಗುತ್ತಿದ್ದರು, ಸಭೆಯ ನಂತರ ಮೊಳಗಿದ ಆಜಾದಿ ಘೋಷಣೆ, ಜೈ ಭೀಮ್ ಘೋಷಣೆಗಳು ಬಾನೆತ್ತರದಲ್ಲಿ ಪ್ರತಿಧ್ವನಿಸುವಂತೆ ಕೇಳುತ್ತಿದ್ದವು. ಜೆಎನ್‌ಯು ವಿದ್ಯಾರ್ಥಿ ಸಂಘದ ವಿಜಯ, ಹೈದ್ರಾಬಾದ್ ವಿಶ್ವವಿದ್ಯಾಲಯದಲ್ಲೂ ಬಂದ ವಿಜಯ, ಜಾಧವ್‌ಪುರ್ ವಿಶ್ವವಿದ್ಯಾಲಯದಲ್ಲಿ ಕೋಮುಶಕ್ತಿಗಳಿಗೆ ಆದ ಮುಖಭಂಗ ಇವು ಪ್ರಾಯಶಃ ಒಂದು ಚೇತೋಹಾರಿ ಪ್ರತಿಪ್ರವಾಹದ ಪ್ರತೀಕವೆನಿಸುತ್ತಿದೆ. ದುರ್ಭರವಾದ ಆರ್ಥಿಕ ಬಿಕ್ಕಟ್ಟಿನ ಹಿನ್ನೆಲೆಯಲ್ಲಿ ನಮ್ಮ ತರುಣರು ಅಮಲೇರಿಸುವ ವಿಚಾರಗಳಿಗೆ ಬದಲಾಗಿ ನಿಜವಾದ ಸವಾಲುಗಳಿಗೆ ತೆರೆದುಕೊಳ್ಳುತ್ತಿದ್ದಾರೆ. ಕನ್ಹಯ್ಯ ಕುಮಾರರ ಕಲಬುರಗಿ ಕಾರ್ಯಕ್ರಮದ ಯಶಸ್ಸು ಇದನ್ನು ಸಾರಿ ಹೇಳುತ್ತಿದೆ.

**ಗುರು ಹಡಪದ್ ಖಣದಾಳ**
ನಂ. ೩/೯–೯೭, ಸುಲ್ತಾನ್‌ಪುರ ರೋಡ್
ಏಕಲವ್ಯ ಸ್ಕೂಲ್ ಹತ್ತಿರ, ಶಿವಶಕ್ತಿ ನಗರ, ಕಲಬುರ್ಗಿ – ೫೮೫೧೦೪

## ಹೊಸತು – ೨೦೨೦ ಜನವರಿ ಸಂಚಿಕೆ : ಓದುಗರ ವೇದಿಕೆ

ಆತ್ಮೀಯ ಹೊಸತು ಓದುಗ ಬಂಧುಗಳೇ,

ಜನವರಿ ೨೦೨೦ಕ್ಕೆ ನಿಮ್ಮ **'ಹೊಸತು'** ಪತ್ರಿಕೆಯ ವಿಶೇಷ ಸಂಚಿಕೆ ತಯಾರಿ ನಡೆದಿದೆ. ಈ ಸಂಚಿಕೆಯಲ್ಲಿ ಪ್ರತಿವರ್ಷದಂತೆ ಈ ವರ್ಷವೂ ಓದುಗರ ವೇದಿಕೆ ಇರಲಿದೆ. ಈ ಸಲದ ಓದುಗರ ವೇದಿಕೆಯ ವಿಷಯ : **'ಅಭಿವೃದ್ಧಿ' (ಅಭಿವೃದ್ಧಿಯ ಮಾನದಂಡಗಳೇನು? ಪ್ರಸ್ತುತ ಭಾರತ ಅಭಿವೃದ್ಧಿಯ ಪಥದಲ್ಲಿದೆಯೇ?)**

ಈ ಕುರಿತು ೧೫೦ ಪದಗಳೊಳಗೆ ಇರುವ ನಿಮ್ಮ ಬರಹ ೩೦ ನವೆಂಬರ್ ೨೦೧೯ರೊಳಗೆ **'ಹೊಸತು'** ಕಾರ್ಯಾಲಯಕ್ಕೆ ಕಳಿಸಬೇಕಾಗಿ ವಿನಂತಿ.

*– ಸಂ.*

# ಕ್ರಾಂತಿಕಾರಿ ಕವಿ ವಿಶ್ವಮಾನ್ಯ
# ಪಾಬ್ಲೊ ನೆರೂಡ



**ಹುಟ್ಟಿದ ಕೆಲವೇ ದಿನಗಳಲ್ಲಿ ತಾಯಿಯನ್ನು ಕಳೆದುಕೊಂಡ ಪಾಬ್ಲೊ ನೆರೂಡನಿಗೆ ಪುಟ್ಟ ಬಾಲಕನಾಗಿದ್ದಾಗಲೇ ತನ್ನ ದಿನನಿತ್ಯದ ಅನುಭವಗಳನ್ನು ಇತರರೊಡನೆ ಕವನಗಳ ಮೂಲಕ ಹಂಚಿಕೊಳ್ಳುವ ಗೀಳು. ಮಡದಿಯನ್ನು ಕಂಡು ಮರುಗುತ್ತಲೇ ಇದ್ದ ನೆರೂಡನ ತಂದೆಗೆ ತನ್ನ ಮಗ ಕವಿತೆ – ಕವನ ಎಂದೆಲ್ಲಾ ಬಡಬಡಿಸುತ್ತಿದ್ದುದರ ಬಗ್ಗೆ ಸಿಟ್ಟು, ಅಸಮಾಧಾನ. ಮುಂದೊಂದು ದಿನ ಅವನು ಚೆನ್ನಾಗಿ ಓದಿ ಉತ್ತಮ ನೌಕರಿಗೆ ಸೇರಬೇಕೆಂಬ ಮಹದಾಶಯವನ್ನಿಟ್ಟುಕೊಂಡಿದ್ದ ಆತನಿಗೆ ನೆರೂಡನ ಆ ಗೀಳು ಹೇಗೆ ತಾನೆ ಹಿಡಿಸೀತು!**

**- ಇದು ನೆರೂಡನ ಬಾಲ್ಯದ ಬಗ್ಗೆ ಒಂದು ಕಿರುಪರಿಚಯ**

'ಜಗದ್ವಿಖ್ಯಾತ ಕವಿ ಪಾಬ್ಲೊ ನೆರೂಡನ ಹೆಸರು ಈಗ ಶಾಲೆಗಳಲ್ಲಿ, ಸಮುದ್ರದ ಚಿಪ್ಪುಗಳಲ್ಲಿ ಕೆತ್ತಲ್ಪಟ್ಟಿದೆ' ಎಂಬ ಮಾತಿದೆ. ಅವನ ಕವನಗಳನ್ನು ಓದದವರೂ ಅವನ ಹೆಸರನ್ನಂತೂ ಕೇಳಿಯೇ ಇರುತ್ತಾರೆ. ಅವನ ರಾಜಕೀಯ ನಿಲುವುಗಳನ್ನು ಒಪ್ಪದವರೂ ಹಾಗೂ ಅವನ ಶೈಲಿಯನ್ನು ಅಷ್ಟಾಗಿ ಇಷ್ಟಪಡದವರೂ ಅವನಂತಹ ಕವಿಗಳು ಬಹಳ ವಿರಳ ಎಂಬ ವಾಸ್ತವಾಂಶವನ್ನು ಅಲ್ಲಗಳೆಯಲಾರರು. ಲೂಯಿ ಬೋರ್ಜಸ್ ಎಂಬ ಸಂಪ್ರದಾಯಸ್ಥ ಸಾಹಿತಿಯೊಬ್ಬ ನೆರೂಡನನ್ನು ಅವನೊಬ್ಬ ಮಹಾನ್ ಕವಿ ಎಂದು ಶ್ಲಾಘಿಸಿದ್ದಾನೆ. ಖ್ಯಾತ ಚಿತ್ರಕಾರ ಪಾಬ್ಲೊ ಪಿಕಾಸೊ, 'ನೆರೂಡ ತನ್ನ ರಾಷ್ಟ್ರ ಚಿಲಿಯ ಅತ್ಯಂತ ಶ್ರೇಷ್ಠ ಕವಿಯಷ್ಟೇ ಅಲ್ಲ, ಆತ ಸ್ಪ್ಯಾನಿಷ್ ಭಾಷೆಯ ಅಪರೂಪದ ಕವಿ ಮತ್ತು ಜಗತ್ತಿನ ಖ್ಯಾತ ಕವಿಗಳಲ್ಲಿ ಅವನಿಗೆ ಉನ್ನತ ಸ್ಥಾನವಿದೆ' ಎಂದಿದ್ದಾನೆ.

ನೆರೂಡ 'ರೋಮಿಯೊ ಮತ್ತು ಜೂಲಿಯೆಟ್' ನಾಟಕವನ್ನು ಸ್ಪ್ಯಾನಿಷ್ ಭಾಷೆಗೆ ಅನುವಾದ ಮಾಡಿದ್ದಾನೆ. ಚಿಲಿಯ ವಿದೇಶಾಂಗ ಸಚಿವಾಲಯದಲ್ಲಿ ಕೆಲಸಮಯ ಸೇವೆ ಸಲ್ಲಿಸಿದ್ದಾನೆ. ತನ್ನ ದೇಶದ ಕಮ್ಯುನಿಸ್ಟ್ ಪಕ್ಷದ ಕ್ರಿಯಾಶೀಲ ಸದಸ್ಯನಾಗಿದ್ದ ಆತ ಸೋವಿಯತ್ ಒಕ್ಕೂಟ ನೀಡುತ್ತಿದ್ದ ಸ್ಟಾಲಿನ್ ಶಾಂತಿ ಪ್ರಶಸ್ತಿಗೆ ಪಾತ್ರನಾದ. ಅನಂತರ ಲೆನಿನ್ ಶಾಂತಿ ಪ್ರಶಸ್ತಿ ಸಮಿತಿಯಲ್ಲೂ ಸೇವೆ ಸಲ್ಲಿಸಿದ. ಸಾಮ್ರಾಜ್ಯಶಾಹಿಯ ಕೀಳುತನ ಮತ್ತು ಎಲ್ಲ ಮಾನವ ವಿರೋಧಿ ನಿಲುವುಗಳ ವಿರುದ್ಧ ತನ್ನ ಕಡೆಯ ದಿನಗಳವರೆಗೂ ಹೋರಾಡುತ್ತಲೇ ಇದ್ದ. ೧೯೭೧ರಲ್ಲಿ ಸಾಹಿತ್ಯಕ್ಕಾಗಿ ನೀಡುವ ನೊಬೆಲ್ ಪ್ರಶಸ್ತಿಯನ್ನು ಸ್ವೀಕರಿಸಿದ ಸಂದರ್ಭದಲ್ಲಿ ಸ್ವೀಡಿಷ್ ಅಕಾಡೆಮಿಯ ಸದಸ್ಯ ಕಾರ್ಲ್ ರ್‍ಯಾಗ್ನೆರ್ ಆತನನ್ನು ಪರಿಚಯಿಸುತ್ತ, "ನೆರೂಡ ಅವರ ವ್ಯಕ್ತಿತ್ವ ಮತ್ತು ಕೊಡುಗೆಯನ್ನು ಬಣ್ಣಿಸಲು ಪ್ರಯತ್ನಿಸುವುದು ಚಿಟ್ಟೆಯನ್ನು ಹಿಡಿಯಲು ಬಳಸುವ ಬಲೆಯಿಂದ ರಣಹದ್ದನ್ನು ಹಿಡಿಯಲು ಹೊರಟಂತೆ" ಎಂದನಂತೆ.

**ಎಸ್. ಸುರೇಂದ್ರ**

ನೆರೂಡನ ಕವನಗಳು ಒಂದು ಶೈಲಿಯಿಂದ ಮತ್ತೊಂದು ಶೈಲಿಗೆ, ಒಂದು ಭಾವಸ್ಥಿತಿಯಿಂದ ಮತ್ತೊಂದು ಭಾವಸ್ಥಿತಿಗೆ ಮಿಂಚಿನಂತೆ ಜಿಗಿಯುತ್ತವೆ. ಆತನನ್ನು ಪ್ರೇಮಕವಿತೆಗಳಲ್ಲಿ ನಿಸರ್ಗ ಕುರಿತು ರಚಿಸಿದ ಗೀತೆಗಳಲ್ಲಿ, ವಿಶಾಲವಾದ ಐತಿಹಾಸಿಕ ವ್ಯಾಪ್ತಿಯಲ್ಲಿ, ತನ್ನ ವೃತ್ತಿಯ ಬಗ್ಗೆ ಅಥವಾ ತನ್ನ ದೇಶದ ಬಗ್ಗೆ ಅಗಾಧ ಸಿಟ್ಟಿನಿಂದ ರಚಿಸಿದ ರಾಜಕೀಯ ಕವನಗಳಲ್ಲಿ ಅಷ್ಟೇಕೆ ಜನಸಾಮಾನ್ಯರ ಹೋರಾಟಗಳು ಮುಂತಾದವುಗಳಲ್ಲಿ ಹತ್ತಾರು ನೆರೂಡರು ಕಂಡುಬರುತ್ತಾರೆ.

ಒಟ್ಟಾರೆಯಾಗಿ ಅವನ ಸಮಗ್ರ ಕಾವ್ಯರಚನೆಯಲ್ಲಿ ನಮ್ಮೀ ಜಗತ್ತಿನ ಬಗ್ಗೆ ಆತನಿಗಿದ್ದ ಅಗಾಧ ಪ್ರೀತಿ, ಸಣ್ಣಪುಟ್ಟ ವಸ್ತುಗಳ ಬಗ್ಗೆಯೂ ಇದ್ದ ಸೂಕ್ಷ್ಮ ಮನೋಭಾವ, ಸ್ಪೇನ್‌ನಲ್ಲಿ ಜರುಗಿದ ಅಂತರ್ಯುದ್ಧದಂತಹ ಗಮನಾರ್ಹ ಐತಿಹಾಸಿಕ ಆಗುಹೋಗುಗಳು ಎಲ್ಲವೂ ಕಂಡುಬರುತ್ತವೆ.

೧೯೭೨ರ ಸೆಪ್ಟೆಂಬರ್‌ನಲ್ಲಿ ನೆರೂಡ ಚಿಲಿಯ ಲಾ ಜೋಟಾದಲ್ಲಿದ್ದ ಯುವ ಕಮ್ಯುನಿಸ್ಟ್ ತಂಡವೊಂದನ್ನು ಉದ್ದೇಶಿಸಿ ಮಾತನಾಡುತ್ತ, "ಯುವಕರು ಯುವಕರಾಗಿರುವುದನ್ನು ಕಲಿಯಬೇಕು. ಅದು ಸುಲಭದ ಕೆಲಸವಲ್ಲ. ನಾನು ಹುಡುಗನಾಗಿದ್ದಾಗ ಬಹಳ ದಿನಗಳ ಕಾಲ ಶೋಕದಲ್ಲೇ ಮುಳುಗಿರುತ್ತಿದ್ದೆ. ದಕ್ಷಿಣ ಭಾಗದ ಜನರ ವಿಷಣ್ಣತೆ (ನೆರೂಡ ವಾಸವಿದ್ದದ್ದು ಅಲ್ಲಿಯೇ) ಮಳೆಯ ಅಬ್ಬರ, ಒಂದೇ ಸಮನೆ ಕಾಡುತ್ತಿದ್ದ ಏಕಾಂತತೆ, ಎಲ್ಲವೂ ನನ್ನ ಮೇಲೆ ಅಗಾಧವಾದ ಪರಿಣಾಮವನ್ನು ಬೀರಿದವು. ಆನಂತರ ಒಂದರ ಮೇಲೆ ಒಂದರಂತೆ ಸಮಸ್ಯೆಗಳು ಎದುರಾದಷ್ಟೂ, ನಾವು ಅದರಿಂದ ಹೊರಬರುವುದು ಕಠಿಣವಾಗುತ್ತಲೇ ಇರುತ್ತದೆ, ಸಾಮಾಜಿಕ ನ್ಯಾಯದ ಬಗ್ಗೆ ನಮಗಿರುವ ತಿಳುವಳಿಕೆ ಮತ್ತಷ್ಟು ಗಂಭೀರವಾಗುತ್ತದೆ. ಆಗ ನಮಗಿರುವ ಜವಾಬ್ದಾರಿಯನ್ನು ಸಮರ್ಥವಾಗಿ ನಿರ್ವಹಿಸುವುದರ ಬಗ್ಗೆ, ಹೆಚ್ಚು ಶಕ್ತರಾಗುವುದರ ಬಗ್ಗೆ ಚಿಂತಿಸಬೇಕು. ಆ ರೀತಿ ನಾವು ಸಂತೋಷವನ್ನನುಭವಿಸಲು ಕಲಿಯಬೇಕು. ನಾವು ಪಡುವ ಸಂತೋಷವನ್ನು ಇತರರೊಡನೆ ಹಂಚಿಕೊಳ್ಳಬೇಕು ಮತ್ತು ಜಗತ್ತು ಅಂತಹ ಸಂತೋಷವನ್ನು ಅನುಭವಿಸುವುದರ ಬಗ್ಗೆ ಚಿಂತಿಸಬೇಕು" ಎಂಬ ಅರ್ಥಪೂರ್ಣವಾದ ಮಾತುಗಳನ್ನಾಡುತ್ತಾನೆ.

ನೆರೂಡ ಸೃಷ್ಟಿಸಿದ ಕಾವ್ಯದ ಹರವು ವಿಮರ್ಶಕರನ್ನು ದಿಗ್ಭ್ರಮೆಗೊಳಿಸಿದೆ. ತನ್ನ ಆತ್ಮೀಯ ಸ್ನೇಹಿತ ಪಾಬ್ಲೊ ಪಿಕಾಸೊ ಕಲಾವಿಮರ್ಶಕರ ಮೇಲೆ ಹೇಗೆ ಪ್ರಭಾವ ಬೀರಿದನೋ ಹಾಗೆ ನೆರೂಡ ಸಹ ಕಾವ್ಯವಿಮರ್ಶಕರ ಮೇಲೆ ಅಂತಹುದೇ ಪ್ರಭಾವ ಬೀರಿದ್ದಾನೆ. ತಮ್ಮ ಅಂದಂದಿನ ತವಕಗಳು ಮತ್ತು ಕಾಣ್ಕೆಗಳನ್ನು ರೂಪಿಸಿಕೊಳ್ಳಲು ಇವರಿಬ್ಬರೂ ನಿರ್ದಿಷ್ಟ ನುಡಿಗಟ್ಟನ್ನು ಕಂಡುಕೊಳ್ಳಲು ಒಂದು ಮಜಲಿನಿಂದ ಇನ್ನೊಂದು ಮಜಲಿನೆಡೆಗೆ, ಒಂದು ಪದಪುಂಜದಿಂದ ಇನ್ನೊಂದು ಪದಪುಂಜದೆಡೆಗೆ ಚಲಿಸುತ್ತಾರೆ. ಕಾದಂಬರಿಕಾರ ಸ್ಯಾಂಡ್ರಾ ಸಿಸ್ನೆರೋಸ್, ಉತ್ತರ ಅಮೆರಿಕಾದ ಕಾದಂಬರಿಕಾರ

ಪಾಬ್ಲೊ ನೆರೂಡ ಎಂದು ಗುರುತಿಸುವ ಮಾರ್ಟಿನ್ ಎಸ್ಪಾಡ್, "ಪ್ರತಿಯೊಬ್ಬರಲ್ಲೂ ನೆರೂಡನಿದ್ದಾನೆ. ನೆರೂಡ ಪ್ರೇಮಕವನಗಳನ್ನು ರಚಿಸಿದ ಕವಿ. ಅವನ ಕೆಲವು ಕವನಗಳು ಅತಿವಾಸ್ತವವಾದಿ ಅಂಶಗಳಿಂದ ಕಂಗೊಳಿಸುತ್ತವೆ. ಅವನಿಗೆ ಅಂದಂದಿನ ಆಗುಹೋಗುಗಳಿಗೆ ತನ್ನ ಕವನಗಳ ಮೂಲಕ ಸ್ಪಂದಿಸುತ್ತಲೇ ಇರುತ್ತಾನೆ. ಇತರರಿಗೆ ಸಾಮಾನ್ಯ ಎಂದೆನಿಸುವ ವಸ್ತುಗಳೂ ಅವನಿಗೆ ಕವನಗಳನ್ನು ರಚಿಸಲು ಪ್ರೇರೇಪಿಸುತ್ತವೆ. ಅವನ ಮಹಾಕಾವ್ಯವೊಂದರಲ್ಲಿ ಇಂತಹ ಅನೇಕ ಅಂಶಗಳು ಓದುಗರನ್ನು ತೀವ್ರವಾಗಿ ಪ್ರಭಾವಿಸುತ್ತವೆ" ಎನ್ನುತ್ತಾನೆ. ವಿಮರ್ಶಕ ರಾಬರ್ಟೋ ಗಾನ್ಜ಼ಾಲೆಜ಼್ ನೆರೂಡನ 'ಕ್ಯಾಂಟೋ ಜನರಲ್' (೧೯೫೧) ಎಂಬ ಕವನದ ಬಗ್ಗೆ "ಇದೊಂದು ಸಮೃದ್ಧಿ ಸೂಚಕ ಕವನ. ಜಗತ್ತಿನಲ್ಲಿ ಎಲ್ಲವೂ ಸದಾ ಬದಲಾವಣೆ ಹೊಂದುತ್ತಲೇ ಇರುತ್ತವೆ. ಬೇರೆಯದೇ ಆದ ರೂಪ ಪಡೆಯುತ್ತಲೇ ಇರುತ್ತವೆ. 'ಕ್ಯಾಂಟೊ' ಕವನದಲ್ಲಿ ಅದರದೇ ಆದ ತಾಳಬದ್ಧ ನಿಯಮವಿದೆ" ಎನ್ನುತ್ತಾನೆ.

ಅವನ ಇತರ ಮಹಾಕಾವ್ಯಗಳಿಗೂ ಮೇಲಿನ ಮಾತುಗಳು ಅನ್ವಯಿಸುತ್ತವೆ. ಅವನ ಭಾವಗೀತೆಗಳಲ್ಲಿ ಸಣ್ಣಪುಟ್ಟ ಕವನಗಳಲ್ಲಿ ಲೌಕಿಕ ಹಾಗೂ ಆಧ್ಯಾತ್ಮಿಕ ವಿಚಾರಗಳು ಓದುಗರನ್ನು ಚರ್ಚೆಗೆ ಆಹ್ವಾನಿಸುತ್ತವೆ. ದುಂಬಿಗಳು, ನಿಘಂಟು, ವಾಲ್ಟ್ ವ್ಹಿಟ್‌ಮನ್, ಪರಮಾಣು, ಆಲಸ್ಯ ಮುಂತಾದ ವಿಷಯಗಳು ಅಥವಾ ವ್ಯಕ್ತಿಗಳ ಕುರಿತು ರಚಿಸಿರುವ ಕವನಗಳು ಹೃದಯಸ್ಪರ್ಶಿಯಾಗಿವೆ. ೨೦೦೩ರಲ್ಲಿ ವಿಮರ್ಶಕ ಸ್ಟಾವನ್ಸ್ ನೆರೂಡನ ಅತ್ಯುತ್ತಮ ಕವನಗಳನ್ನೊಳಗೊಂಡ ೬೦೦ ಪುಟಗಳ ಸಂಕಲನದಲ್ಲಿ "ಈ ಮಹಾನ್ ಕವಿ ನೆರೂಡ ತೀರಾ ಐಹಿಕ ಮತ್ತು ಅಸಾಮಾನ್ಯ ವಸ್ತುಗಳ ಬಗ್ಗೆಯೂ ಬೌದ್ಧ ಶೈಲಿಯಲ್ಲಿ ಭಾವಗೀತೆಗಳನ್ನು ರಚಿಸುತ್ತಾನೆ" ಎಂದು ಶ್ಲಾಘಿಸುತ್ತಾನೆ.

ಕ್ರಿಯಾಶೀಲ ಕಲಾವಿದರು, ಸಾಹಿತಿಗಳು ಉದಾತ್ತ ವಿಚಾರಗಳ ಕುರಿತಷ್ಟೇ ಕೃತಿಗಳನ್ನು ರಚಿಸಬೇಕು ಎನ್ನುತ್ತಿದ್ದ ವಿಮರ್ಶಕರನ್ನು ಕಟುವಾಗಿ ಟೀಕಿಸುತ್ತಾನೆ ನೆರೂಡ. ಈ ತಥಾಕಥಿತ ಸದಭಿರುಚಿಯಿರುವ ಟೀಕಾಕಾರರನ್ನು ಲೇವಡಿ ಮಾಡುತ್ತಾ, "ನಾವು ಈ ಜನರು ಯಾವುದನ್ನು ತಿರಸ್ಕಾರ ಮನೋಭಾವದಿಂದ ನೋಡುತ್ತಾರೋ ಅಂತಹ ವಸ್ತುಗಳು ಮತ್ತು ವಿಚಾರಗಳನ್ನು ಕುರಿತೇ ಕಾವ್ಯಗಳನ್ನು ರಚಿಸುತ್ತೇವೆ" ಎಂದು ಸವಾಲೆಸೆಯುತ್ತಾನೆ. ತಾಳಬದ್ಧತೆ ಮತ್ತು ಭಾಷಾ ಕೌಶಲ ಅವನ ಕವನಗಳ ವೈಶಿಷ್ಟ್ಯ ಎಂದರೆ ತಪ್ಪಾಗಲಾರದು.

ರಂಗೂನ್ ಮತ್ತು ಕೊಲಂಬೊದಲ್ಲಿ ಚಿಲಿಯ ವಿದೇಶಾಂಗ ಸಚಿವಾಲಯದ ಪ್ರತಿನಿಧಿಯಾಗಿ ನೆರೂಡ ೧೯೩೪ರಲ್ಲಿ ಸ್ಪೇನ್‌ನತ್ತ ಪ್ರವಾಸ ಕೈಗೊಳ್ಳುತ್ತಾನೆ. ಅದು ಸ್ಪ್ಯಾನಿಷ್ ಪ್ರಜಾತಂತ್ರ ವ್ಯವಸ್ಥೆ ಪ್ರಕ್ಷುಬ್ಧ ಪರಿಸ್ಥಿತಿಯನ್ನೆದುರಿಸುತ್ತಿದ್ದ ಸಂದರ್ಭ. ಅಲ್ಲದೆ, ಅದು ೧೯೩೧ರಲ್ಲಿ ಚುನಾವಣೆಯ ಮೂಲಕ ಬಹುಮತ ಗಳಿಸಿ ಪ್ರಗತಿಪರ ಶಕ್ತಿಗಳು ಉಗ್ರ ಬಲಪಂಥೀಯರ ಪ್ರತಿಭಟನೆಯನ್ನು ಎದುರಿಸಬೇಕಾಗಿದ್ದ ಸಂದರ್ಭವೂ ಹೌದು. ನೆರೂಡ ಆಗಿನ್ನೂ ಒಂದು ಬಗೆಯ ಅರಾಜಕವಾದಿ ರಾಜಕೀಯ ದೃಷ್ಟಿಕೋನವನ್ನು ಹೊಂದಿದ್ದ. ಇಂತಹ ಮನೋವೃತ್ತಿ ಹೊಂದಿದ್ದ ನೆರೂಡ ಜನರಲ್ ಫ್ರಾಂಕೊ ಸರ್ಕಾರವನ್ನುರುಳಿಸಿ ಅಧಿಕಾರದ ಗದ್ದುಗೆಯನ್ನೇರಿದ್ದನ್ನು ಕಣ್ಣಾರೆ ಕಂಡು ಕಮ್ಯುನಿಸ್ಟನಾಗಿ ರೂಪುಗೊಳ್ಳುತ್ತಾನೆ. ಖ್ಯಾತ ಕವಿ ಮತ್ತು ನಾಟಕಕಾರ ಗಾರ್ಸಿಯ ಲೋರ್ಕ ಮತ್ತು ಸ್ಪೇನ್‌ನ ಸಮಾಜವಾದಿ ಕಲಾವಿದರೊಡನೆ ಆತ್ಮೀಯ ಸಂಬಂಧವನ್ನಿರಿಸಿಕೊಂಡಿದ್ದ ನೆರೂಡ ಅವರೊಡನೆ ತಾನು ಕಳೆದ ದಿನಗಳನ್ನು ಮುಂದೆಂದೂ ಮರೆಯಲಿಲ್ಲ. ಫ್ಯಾಸಿಸ್ಟರು ಲೋರ್ಕನನ್ನು ಕೊಂದ ದುರ್ಘಟನೆ ಮುಂದೆ ಈ ಮಹಾನ್ ಕವಿ 'ಎಸಾನಾ ಎನ್ ಎಲ್ ಕೋರಾಜ಼ಾನ' ಮತ್ತು 'ಸ್ಪೇನ್ ಇನ್ ಮೈ ಹಾರ್ಟ್' ಎಂಬ ರಾಜಕೀಯ ವಿಚಾರಗಳನ್ನುಳ್ಳ ತನ್ನ ಮೊದಲ ಕವನ ಸಂಕಲನವನ್ನು ರಚಿಸಲು ಪ್ರೇರೇಪಿಸುತ್ತದೆ.

೧೯೪೫ರಲ್ಲಿ, ಎಂದರೆ ಕಮ್ಯುನಿಸ್ಟ್ ಪಾರ್ಟಿಯ ಸದಸ್ಯನಾಗುವ ಒಂದು ವರ್ಷದ ಮುನ್ನ ನೆರೂಡ ಚಿಲಿಯ ಸೆನೇಟ್‌ಗೆ ಪಾರ್ಟಿಯ ಅಭ್ಯರ್ಥಿಯಾಗಿ ಸ್ಪರ್ಧಿಸಿ ಯಶಸ್ವಿಯಾಗುತ್ತಾನೆ. ಜನಸಾಮಾನ್ಯರ ಸಾಕ್ಷಿಪ್ರಜ್ಞೆಯಂತಿದ್ದ ಈತ ಅಮೆರಿಕಾದ ಬಹುರಾಷ್ಟ್ರೀಯ ಕಂಪನಿಗಳು ಚಿಲಿಯ ಆರ್ಥಿಕತೆಯ ಮೇಲೆ ಹೊಂದಿದ್ದ ಪ್ರಾಬಲ್ಯವನ್ನು ಹಾಗೂ ಚಿಲಿಯ ಸರ್ಕಾರ ಕಾರ್ಮಿಕ ವರ್ಗದ ಮೇಲೆ ನಡೆಸುತ್ತಿದ್ದ ದಬ್ಬಾಳಿಕೆಯನ್ನು ಬಹಿರಂಗವಾಗಿಯೇ ಟೀಕಿಸುತ್ತಾನೆ. ಕಮ್ಯುನಿಸ್ಟರ ನೇತೃತ್ವದಲ್ಲಿ ತಾಮ್ರದ ಗಣಿ ನೌಕರರು ಕೈಗೊಂಡಿದ್ದ ಮುಷ್ಕರವನ್ನು ದಮನಿಸಲು ಅಂದಿನ ಅಧ್ಯಕ್ಷ ಅನುಸರಿಸಿದ ಸರ್ವಾಧಿಕಾರಿ ಕ್ರಮಗಳನ್ನು ತರಾಟೆಗೆ ತೆಗೆದುಕೊಳ್ಳುತ್ತಾನೆ. ಪಾರ್ಲಿಮೆಂಟಿನಲ್ಲಿ ನೆರೂಡ ಭಾವೋದ್ರೇಕದಿಂದ ಮಾಡುತ್ತಿದ್ದ ಭಾಷಣಗಳನ್ನು ಕೇಳಿ ಆ ಅಧ್ಯಕ್ಷ ಸಿಡಿಮಿಡಿಗೊಂಡು ಪಾರ್ಲಿಮೆಂಟಿನ ಸದಸ್ಯನಾಗಿರಲು ನೆರೂಡ ಅರ್ಹನಲ್ಲ, ಅವನೊಬ್ಬ ಅಪ್ರಸ್ತುತ ವ್ಯಕ್ತಿ ಎಂದು ಘೋಷಿಸಿ ಅವನನ್ನು ಬಂಧಿಸಲು ಆಜ್ಞಾಪಿಸುತ್ತಾನೆ. ಕೂಡಲೇ ನೆರೂಡ ಭೂಗತನಾಗಿ ಸ್ಪೇನ್‌ನಲ್ಲಿದ್ದಾಗ ತಾನು ರಕ್ಷಣೆ ನೀಡಿದ್ದ ಕೆಲವು ವ್ಯಕ್ತಿಗಳಿಗೆ ಮೊರೆಹೋಗಿ ಅವರೊಡನೆ ವಾಸಿಸುತ್ತಾನೆ. ಕೆಲವು ವರ್ಷಗಳ ಕಾಲ ಹಾಗೆ ಭೂಗತನಾಗಿದ್ದ ನೆರೂಡ ಸುಮ್ಮನೆ ಕೂರಲಿಲ್ಲ. ಆ ಅವಧಿಯಲ್ಲಿ ಅವನು ತನ್ನ ಅತ್ಯಂತ ಶ್ರೇಷ್ಠವೆನ್ನಬಹುದಾದ 'ಕ್ಯಾಂಟೋ ಜನರಲ್' ಎಂಬ ಕೃತಿಯನ್ನು ರಚಿಸಿದ. ಅಮೆರಿಕಾ ಖಂಡದ ಉದ್ದಗಲಕ್ಕೂ ಜರುಗಿದ ಆಗುಹೋಗುಗಳ ಕುರಿತು ಮತ್ತು ಕೊಲಂಬಿಯಾದ ಶತಮಾನಗಳ ಕಾಲದ ಇತಿಹಾಸವನ್ನು ಅದರ ಒಂದು ವಿಭಾಗದಲ್ಲಿ ವರ್ಣಿಸಿದ್ದಾನೆ.

ಆ ಕಾವ್ಯದಲ್ಲಿ ಅವನು ೧೯೪೮ರಲ್ಲಿ ರಚಿಸಿದ 'ದಿ ಹೈಟ್ಸ್ ಆಫ್ ಮಚು ಪಿಚು' ಎಂಬ ಮಹತ್ವದ ಕವನವೂ ಇದೆ. ೧೯೪೩ರಲ್ಲಿ ಪೆರುವಿನ ಇನ್ಕಾಗಳ ಭವ್ಯ ಭಗ್ನಾವಶೇಷಗಳನ್ನು ನೋಡಿ ಸ್ತಂಭೀಭೂತನಾಗಿದ್ದ ನೆರೂಡನಲ್ಲಿ ಹೊಸ ಕಲ್ಪನೆಗಳು ರೂಪುಗೊಳ್ಳುತ್ತವೆ. ೧೫ನೆಯ ಶತಮಾನದಲ್ಲಿ ನಿರ್ಮಿಸಿದ್ದ ಮತ್ತು ಸುಮಾರು ಎಂಟು ಸಾವಿರ ಅಡಿಗಳಷ್ಟು ಎತ್ತರದಲ್ಲಿದ್ದ ಆ ನಗರವನ್ನು ವೀಕ್ಷಿಸಿದ ನೆರೂಡನಿಗೆ ಆ ಖಂಡದ ಉತ್ತರದಿಂದ ದಕ್ಷಿಣದವರೆಗೂ ಹರಡಿಕೊಂಡಿದ್ದ ಐತಿಹಾಸಿಕ ಘಟನೆಗಳು ಅವನು ಹೊಸ ದೃಷ್ಟಿಕೋನದಿಂದ ವಿಮರ್ಶಿಸಲು ಸ್ಫೂರ್ತಿ ನೀಡುತ್ತವೆ. ವಿಮರ್ಶಕ ಗೊಂಜ಼ಾಲೆಜ಼್ ಎಚಿರಿಯ ಆ ಮಹಾನ್ ಕವನವನ್ನು ಕುರಿತು ಹೇಳುವ ಮಾತುಗಳಿವು. ಈ ಅವಶೇಷಗಳು ಶತಮಾನಗಳ ಕಾಲ ಉಳಿದುಕೊಂಡು ಬಂದಿವೆ. ಅವು ಅಂದಿನ ದಿನಗಳಲ್ಲಿ ಅಸ್ತಿತ್ವದಲ್ಲಿರಬಹುದಾದ ಆದರ್ಶ ರಾಜ್ಯಕ್ಕೆ ಸಾಕ್ಷಿಯಾಗಿವೆ. ಅಂದಿದ್ದ ಭವ್ಯ ಸಂಸ್ಕೃತಿ ಮತ್ತು ನಾಗರಿಕತೆ, ಹಿಂಸೆ, ನಿಂದೆ ಮತ್ತು ವಂಚನೆಗಳಿಂದ ನಾಶಗೊಂಡಿವೆ. ೧೬ನೆಯ ಶತಮಾನದಲ್ಲಿ ವಸಾಹತುಶಾಹಿಗಳು ಪೆರುವನ್ನು ವಶಪಡಿಸಿಕೊಂಡರೂ ಮಚು ಪಿಚು ಮಾತ್ರ ಇನ್ನೂ ಉಳಿದುಕೊಂಡಿದೆ. ಅದರ ಭವ್ಯತೆಯನ್ನು ವೀಕ್ಷಿಸಿದ ನೆರೂಡ ತನ್ನ ಪೂರ್ವಜರನ್ನಲ್ಲದೆ ಅಮೆರಿಕಾದ ವಚನ ಭ್ರಷ್ಟತೆಯನ್ನು ನೆನಪಿಸಿಕೊಳ್ಳುತ್ತಾನೆ.

'ದಿ ಹೈಟ್ಸ್ ಆಫ್ ಮಚು ಪಿಚು' ಕಾವ್ಯದಲ್ಲಿ ಕೊಲಂಬಸ್, ವಸಾಹತುಶಾಹಿಗಳ ದೌರ್ಜನ್ಯ, ದುಪಾಕು ಅಮಾರು ಜನರು ಒಡ್ಡುವ ಪ್ರತಿರೋಧ, ಬೊಲಿವಾರಿಯನ್ ಕ್ರಾಂತಿ, ಅದರಿಂದ ಗರಿಗೆದರಿದ ಭರವಸೆಗಳಿಗೆ ಎಸಗಿದ ವಂಚನೆ ಎಲ್ಲವನ್ನೂ ನೆರೂಡ ನೆನಪಿಸಿಕೊಳ್ಳುತ್ತಾನೆ. 'ದಿ ಕ್ಯಾಂಟೋ'ದ ಆಯ್ದ ಭಾಗಗಳು ಭಾರತದ ಹಲವಾರು ಭಾಷೆಗಳಲ್ಲಿ ಲಭ್ಯವಿದ್ದರೂ ಆ ಇಡೀ ಕಾವ್ಯವನ್ನು ಭಾಷಾಂತರಿಸಿ ಪ್ರಕಟಿಸುವ ಅಗತ್ಯವಿದೆ.

ತನ್ನ ಮಹತ್ವದ ಕವಿತೆಗಳನ್ನು ಮತ್ತು ಕಮ್ಯುನಿಸ್ಟ್ ಸಿದ್ಧಾಂತವನ್ನು ಜನಸಾಮಾನ್ಯರಿಗೆ ಪರಿಚಯಿಸುವ ದಿಸೆಯಲ್ಲಿ ನೆರೂಡ ಅನೇಕ ವರ್ಷಗಳ ಕಾಲ ಹಲವಾರು ದೇಶಗಳಿಗೆ ಭೇಟಿ ನೀಡಿದ. ವಿಶ್ವಶಾಂತಿ ಸಮ್ಮೇಳನಗಳಲ್ಲಿ, ಲೇಖಕರ ಸಮ್ಮೇಳನಗಳಲ್ಲಿ ಭಾಗವಹಿಸಿ ಅವುಗಳ ಯಶಸ್ವಿಗಾಗಿ ಶ್ರಮಿಸಿದ. ಪೂರ್ವ ಯೂರೋಪ್ ಮತ್ತು ದಕ್ಷಿಣ ಅಮೆರಿಕಾದ ಅಕಾಡೆಮಿಗಳಲ್ಲಿ ಸದಸ್ಯನಾಗಿ ಅವುಗಳ ವರ್ಚಸ್ಸನ್ನು ಇಮ್ಮಡಿಗೊಳಿಸಿದ. ಸರ್ವಾಧಿಕಾರಿಗಳ ವಿರುದ್ಧ, ಸಾಹಿತಿಗಳಿಗೆ ಕಿರುಕುಳ ನೀಡುತ್ತಿದ್ದ ದುಷ್ಟ ಆಡಳಿತಗಾರರ ವಿರುದ್ಧ ಪ್ರತಿಭಟನೆಯ ಧ್ವನಿ ಎತ್ತಿದ. ಟರ್ಕಿಯ ಕಮುನಿಸ್ಟ್ ಕವಿ ನಜ಼ೀಮ್ ಹಿಕ್ಮತ್, ಕೊಲಂಬಿಯಾದ ಕಾದಂಬರಿಕಾರ ಗೇಬ್ರಿಯಲ್ ಮಾರ್ಕ್ವೆಜ಼್, ಚಿಲಿಯ ಪ್ರಸಿದ್ಧ ಕವಿ ಡಿಯಾಗೊ ಮಿಸ್ತ್ರಲ್, ಫ್ರಾನ್ಸ್‌ನ ಕವಿ ಪಾಲ್ ಎಡ್ವರ್ಡ್, ಮೆಕ್ಸಿಕೋದ ಭಿತ್ತಿಚಿತ್ರಕಾರ ಡಿಯಾಗೊ ರಿವೇರ, ಕ್ಯೂಬಾದ ನಿಕೊಲಾಸ್ ಎಲುವಾರ್ಡ್, ಬ್ರೆಜ಼ಿಲ್‌ನ ಕಾದಂಬರಿಕಾರ ಜಾರ್ಜ್ ಅಮಾಡಾ.... ಹೀಗೆ ಅನೇಕ ಸಾಹಿತಿಗಳ ಜೊತೆ ಅವನಿಟ್ಟುಕೊಂಡಿದ್ದ ಅನ್ಯೋನ್ಯ ಸ್ನೇಹಸಂಬಂಧಗಳು ಅನನ್ಯವಾದುವು.

ಜನಸಾಮಾನ್ಯರೊಡನೆ ಇದ್ದು ಅವರೊಂದಿಗೆ ಕಾಲ ಕಳೆಯುವುದನ್ನು ನೆರೂಡ ಬಹಳ ಇಷ್ಟಪಡುತ್ತಿದ್ದ. ರಂಗೂನ್‌ನಲ್ಲಿ ಚಿಲಿಯ ಕಾನ್ಸುಲರ್ ಅಧಿಕಾರಿಯಾಗಿ ನೆಲೆಸಿದ್ದ ಯುವ ನೆರೂಡ (ಆಗ ಬರ್ಮಾ ಬ್ರಿಟಿಷ್ ಇಂಡಿಯಾದ ಭಾಗವಾಗಿತ್ತು) ವಸಾಹತು ಜಾತಿಪದ್ಧತಿಯನ್ನು ತಿರಸ್ಕರಿಸಿದ. ಚಿಟ್ಟು ಹಿಡಿಸುವ ಹಾಗೂ ಅತೀ ಪೆದ್ದರಾಗಿದ್ದ ಬ್ರಿಟಿಷ್ ಅಧಿಕಾರಿಗಳಿಂದ ಸದಾ ದೂರವಿರುತ್ತಿದ್ದ. ತಾನು ಪ್ರೀತಿಸುತ್ತಿದ್ದ ಜೋಸಿ ಬ್ಲಿಸ್ ಸೇರಿದಂತೆ ಸ್ಥಳೀಯ ಜನರೊಂದಿಗೆ ನಿಕಟ ಸಂಬಂಧವನ್ನಿರಿಸಿ ಕೊಂಡಿದ್ದ. ಇದನ್ನೇ ನೆಪ ಮಾಡಿಕೊಂಡ ಬ್ರಿಟಿಷರು ನೆರೂಡನನ್ನು ತಮ್ಮ ಸಾಮಾಜಿಕ

ಸಂಸ್ಥೆಗಳಿಂದ ಬಹಿಷ್ಕರಿಸಿದರು. ಅದನ್ನು ಪ್ರತಿಭಟಿಸಿದ ನೆರೂಡ ಕೆಲವು ವರ್ಷಗಳ ನಂತರ "ಈ ಯೂರೋಪಿಯನ್ನರಿದ್ದಾರಲ್ಲ, ಅವರು ದುರಹಂಕಾರಿಗಳು, ಸಹಿಷ್ಣುತೆ ಎಂಬುದು ಅವರ ಸಂಸ್ಕೃತಿಯಲ್ಲೇ ಇಲ್ಲ" ಎಂದು ಟೀಕಿಸುತ್ತಾನೆ. ಅಲ್ಲದೆ, "ನಾನು ಪೌರ್ವಾತ್ಯ ದೇಶಗಳಿಗೆ ಬಂದದ್ದು ಆ ದುಷ್ಟ ವಸಾಹತುಶಾಹಿಗಳೊಡನೆ ಸಂಬಂಧವನ್ನಿರಿಸಿಕೊಳ್ಳುವುದಕ್ಕಲ್ಲ' ಎಂದು ಅವರನ್ನು ಜರೆದು ದಿಟ್ಟತನ ಮೆರೆಯುತ್ತಾನೆ.

ನೆರೂಡ ೧೯೨೦ರಲ್ಲಿ ಸಿಲೋನ್‌ನಲ್ಲಿದ್ದ ಹಾಗೂ ೧೯೬೦ರಲ್ಲಿ ಇಟಲಿಯಲ್ಲಿದ್ದ ಅವನಿದ್ದ ಎಲ್ಲ ದೇಶಗಳಲ್ಲೂ ಚಿಲಿಯ ಪ್ರತಿನಿಧಿಯಾಗಿ ದುಡಿಯುತ್ತಿದ್ದ. ಆತ ಎಂದಿಗೂ ತಾನೊಬ್ಬ ಅಧಿಕಾರಿ ಎಂದು ಮೆರೆಯಲೇ ಇಲ್ಲ. ಜನರೂ ಸಹ ಅವನನ್ನು ಆದರದಿಂದ ಬರಮಾಡಿಕೊಳ್ಳುತ್ತಿದ್ದರು.

ಯಾತನೆ, ನೋವು, ಹಿಂಸೆಯಂತಹ ಪದಗಳು ನೆರೂಡನ ಭಾವಪರವಶ ಮತ್ತು ವೃತ್ತಿ ಬದುಕನ್ನು ವರ್ಣಿಸಲು ಸೂಕ್ತವಾಗಿವೆ ಎಂದೇ ಹೇಳಬಹುದು.

ಸ್ಟಾಲಿನ್‌ನ ಆಡಳಿತಾವಧಿಯಲ್ಲಿ ಸೋವಿಯತ್ ಒಕ್ಕೂಟದಲ್ಲಿ ಜರುಗಿದ ಕೆಲವು ಅಹಿತಕರ ಘಟನೆಗಳು, ಸೋವಿಯತ್ ಒಕ್ಕೂಟ ಚೆಕೊಸ್ಲೋವಾಕಿಯ ಮತ್ತು ಹಂಗೆರಿಗೆ ಸಂಬಂಧಿಸಿದಂತೆ ತೆಗೆದುಕೊಂಡ ಕ್ರಮಗಳು ಹಾಗೂ ಚೀನಾದಲ್ಲಾದ ತಥಾಕಥಿತ "ಸಾಂಸ್ಕೃತಿಕ ಕ್ರಾಂತಿ" ಮುಂತಾದವುಗಳಿಂದ ನೆರೂಡ ಬೇಸರಗೊಂಡಿದ್ದ. ಆದರೆ ಇದ್ಯಾವುದರಿಂದಲೂ ನೆರೂಡ ಕಮ್ಯುನಿಸ್ಟ್ ಚಳುವಳಿಯ ಬಗ್ಗೆ ತನಗಿದ್ದ ನಿಷ್ಠೆಯಿಂದ ವಿಚಲಿತನಾಗಲಿಲ್ಲ. ಅವನ 'ಮೆಮೋರಿಯಲ್' ಎಂಬ ಕವನ ಸಂಕಲನದಲ್ಲಿ 'ಲಾಸ್ ಕಮ್ಯುನಿಸ್ತಾಸ್' ಎಂಬ ಕವನವೊಂದಿದೆ. ಅದರಲ್ಲಿ "ಕಪ್ಪು ಚಂದ್ರವೊಂದು ಕಮ್ಯುನಿಸಮ್‌ಅನ್ನು ಸ್ವಲ್ಪ ಮಟ್ಟಿಗೆ ಕಳೆಗುಂದಿಸಿದೆ, ನಿಜ; ಆದರೂ ನಾವು ಕಮ್ಯುನಿಸ್ಟರು ಏನೇನು ಮಾಡಬಲ್ಲೆವು ಎಂಬುದನ್ನು ಸದ್ಯದಲ್ಲೇ ನೋಡಲಿದ್ದೀರಿ" ಎಂಬ ಆತ್ಮವಿಶ್ವಾಸವನ್ನು ವ್ಯಕ್ತಪಡಿಸುತ್ತಾನೆ. ಈ ಹಿನ್ನೆಲೆಯಲ್ಲಿ ಕೊರ್‍ವಾಲಿನ್ ಕೇಳಿಕೊಂಡಾಗ ಹಿಂದೆಮುಂದೆ ನೋಡದೆ ಚುನಾವಣೆಯಲ್ಲಿ ಸ್ಪರ್ಧಿಸಲು ಒಪ್ಪಿಕೊಳ್ಳುತ್ತಾನೆ. ಆನಂತರ ದೇಶದೆಲ್ಲೆಡೆ ಪ್ರವಾಸ ಕೈಗೊಳ್ಳುತ್ತಾನೆ. ಕೊನೆಗೆ ಪಾಪ್ಯುಲರ್ ಯೂನಿಟಿ ಕೊಯಲಿಷನ್ ಪಕ್ಷದ ವತಿಯಿಂದ ಮೂರು ಬಾರಿ ಅಧ್ಯಕ್ಷ ಸ್ಥಾನಕ್ಕೆ ಸ್ಪರ್ಧಿಸಿ ಸೋತಿದ್ದ. ಸೋಷಲಿಸ್ಟ್ ಪಕ್ಷದ ಸಾಲ್ವಡಾರ್ ಅಲೆಂಡೆಯನ್ನು ಬೆಂಬಲಿಸಲು ತೀರ್ಮಾನಿಸುತ್ತಾನೆ. ಆ ಹೊತ್ತಿಗಾಗಲೇ ಪ್ರಾಸ್ಟೇಟ್ ಕ್ಯಾನ್ಸರ್‌ನಿಂದ ಬಳಲುತ್ತಿದ್ದ ನೆರೂಡ ಅತ್ಯುತ್ಸಾಹದಿಂದ ಅಲೆಂಡೆ ಪರ ಪ್ರಚಾರ ಕಾರ್ಯವನ್ನು ಕೈಗೊಳ್ಳುತ್ತಾನೆ. ಅಲೆಂಡೆ ಜಯ ಗಳಿಸಿದಾಗ ನೆರೂಡ ಸಂಭ್ರಮಿಸಿದ. ಬ್ಯೂನಸ್ ಐರಿಸ್‌ನಲ್ಲಿ ಹೊಸ ಸರ್ಕಾರ ಕೈಗೊಂಡ ಎಲ್ಲ ಪ್ರಗತಿಪರ ಕ್ರಮಗಳಿಗೂ ಬೆಂಬಲ ಘೋಷಿಸಿದ.

ಒಂದು ಸಂದರ್ಭದಲ್ಲಿ ೩೦ ದಶಕಗಳಷ್ಟು ಹಿಂದೆಯೇ ಕಾರ್ಡೆನಾಸ್‌ನ ನಾಯಕತ್ವದಲ್ಲಿ ಮೆಕ್ಸಿಕೊನಲ್ಲಿ ತೈಲೋದ್ಯಮವನ್ನು ರಾಷ್ಟ್ರೀಕರಣಗೊಳಿಸಲಾಯಿತು. ನಾಸೆರ್‌ನ ಆಡಳಿತದಲ್ಲಿ ಈಜಿಪ್ಟ್ ಸೂಯೆಜ಼್ ಕಾಲುವೆಯನ್ನು ರಾಷ್ಟ್ರೀಕರಣ ಗೊಳಿಸಿತು. ಪ್ರತೀ ದಿನ ಒಂದಲ್ಲ ಒಂದು ಕಡೆ ರಾಷ್ಟ್ರೀಕರಣಗೊಳಿಸುವುದನ್ನು ಕಾಣುತ್ತಿದ್ದೇವೆ. "ನಮ್ಮ ಚಿಲಿ ರಾಜಕೀಯವಾಗಿ ಹಾಗೂ ಬೌದ್ಧಿಕವಾಗಿ ಮುಂದುವರಿದಿರುವ ದೇಶ. ಆದರೂ ವಿದೇಶಿ ಕಂಪನಿಗಳಿಗೆ, ಉತ್ತರ ಅಮೆರಿಕನ್ನರಿಗಾಗಿ ಹಲವು ಮಿಲಿಯನ್ ಡಾಲರ್‌ಗಳಷ್ಟು ಮೌಲ್ಯವುಳ್ಳ ತಾಮ್ರವನ್ನು ಉತ್ಪಾದಿಸುವ ಕ್ಷೇತ್ರವನ್ನೇ ಅಲ್ಲದೆ ಟೆಲಿಫೋನ್ ಮತ್ತು ವಿದ್ಯುಚ್ಛಕ್ತಿ ಕ್ಷೇತ್ರಗಳನ್ನು ತಮ್ಮ ಸ್ವಾಮ್ಯಕ್ಕೆ ತೆಗೆದುಕೊಳ್ಳಲು ಅನುಮತಿ ನೀಡಲಾಯಿತು. ಇದೀಗ ನಿಮ್ಮಲ್ಲೊಂದು ಮನವಿ! ನಮ್ಮ ಜನರು ತಮ್ಮ ಮೈ ಮುಚ್ಚಿಕೊಳ್ಳುವುದಕ್ಕೆ ಬಟ್ಟೆ ಒದಗಿಸಲು ಆಸ್ಪತ್ರೆಗಳು, ಶಾಲೆಗಳು ಮತ್ತು ರಸ್ತೆಗಳನ್ನು ನಿರ್ಮಿಸಲು ಅದೇ ಡಾಲರ್‌ಗಳನ್ನು ಬಳಸಲು ನಾವೇಕೆ ಹಿಂಜರಿಯಬೇಕು? ಇದು ನಾವು ನಮ್ಮ ಜನರ ಒಳಿತಿಗಾಗಿ ದಿಟ್ಟ ಹೆಜ್ಜೆಗಳನ್ನಿಡುವ ಸಂದರ್ಭ. ಅದಕ್ಕಾಗಿ ರಾಜಕೀಯ ಇಚ್ಛಾಶಕ್ತಿಯನ್ನು ಪ್ರದರ್ಶಿಸೋಣ" ಎಂದು ಚಿಲಿಯ ಜನರಿಗೆ ಕರೆ ನೀಡುತ್ತಾನೆ ನೆರೂಡ.

ದಿನೇ ದಿನೇ ಅನಾರೋಗ್ಯ ಪೀಡಿಸುತ್ತಿದ್ದುದರಿಂದ ಫ್ರಾನ್ಸ್‌ನಲ್ಲಿ ಚಿಲಿಯ ರಾಯಭಾರಿಯಾಗಿದ್ದ ನೆರೂಡ ತನ್ನ ದೇಶಕ್ಕೆ ಹಿಂತಿರುಗಲೇಬೇಕಾಯಿತು.

೧೯೭೩ರ ಸೆಪ್ಟೆಂಬರ್ ೧೧ರಂದು ನೆರೂಡ ತನ್ನ ದೇಶದ ಬಗ್ಗೆ ಇಟ್ಟುಕೊಂಡಿದ್ದ ಕನಸುಗಳನ್ನು ನನಸಾಗಿಸಲು ಸದಾ ಚಡಪಡಿಸುತ್ತಿದ್ದ. ಆ ದಿಶೆಯಲ್ಲಿ ಜನರನ್ನು ಸಜ್ಜಾಗಿಸುತ್ತಿದ್ದ ನಡೆಗಳಿಗೆ ಭಾರಿ ಹಿನ್ನಡೆಯಾಯಿತು. ಅಮೆರಿಕಾದ ಸಾಮ್ರಾಜ್ಯಶಾಹಿ ಸರ್ಕಾರ ಹಸಿರು ನಿಶಾನೆ ತೋರಿಸಿದ ಕೂಡಲೇ ಜನರಲ್ ಪಿನೋಶೆ ತನ್ನ ಶಸ್ತ್ರಸಜ್ಜಿತ ಪಡೆಗಳನ್ನು ಬ್ಯಾರೆಕ್‌ಗಳಿಂದ ಬೀದಿಗಿಳಿಸಿ ದೇಶವನ್ನು ತನ್ನ ಸ್ವಾಧೀನಕ್ಕೆ



**ಮಚು ಪಿಚು**

ತೆಗೆದುಕೊಳ್ಳುತ್ತಾನೆ. "ಒಂದು ವೇಳೆ ಪಾಪ್ಯುಲರ್ ಯೂನಿಟಿ ಕೊಯಲಿಷನ್ ಸರ್ಕಾರವೇನಾದರೂ ಆ ಆಕ್ರಮಣದಿಂದ ಪಾರಾಗಿದ್ದಿದ್ದರೆ ನೆರೂಡ ಇನ್ನಷ್ಟು ದಿನ ಇರುತ್ತಿದ್ದ" ಎಂದು ಅವನ ಆಪ್ತ ಗೆಳೆಯರು ಮರುಗುತ್ತಿದ್ದರಂತೆ.

ಎಂದೋ ಒಂದು ದಿನ ಸ್ಪೇನ್‌ಗೆ ಒದಗಿದ ಗಂಡಾಂತರವೂ ಅಲೆಂಡೆ ಸರ್ಕಾರಕ್ಕೂ ಒದಗಬಹುದೇನೋ ಎಂಬ ಕಳವಳವನ್ನು ವ್ಯಕ್ತಪಡಿಸುತ್ತಿದ್ದ ನೆರೂಡ. ಅದು ನಿಜಕ್ಕೂ ಸಂಭವಿಸಿದ್ದೂ ಇತಿಹಾಸದ ವ್ಯಂಗ್ಯವಲ್ಲದೆ ಮತ್ತೇನು? ತೀವ್ರ ಅನಾರೋಗ್ಯದಿಂದ ಹಾಸಿಗೆ ಹಿಡಿದಿದ್ದ ನೆರೂಡ ಅದೊಂದು ದಿನ ಮಡದಿ ಮ್ಯಾಟಿಲ್ಡೆ ಉರುಟಿಗೆ ಪೆನ್ನು, ಕಾಗದ ತರಲು ಹೇಳಿ ತಾನು ಹೇಳುವ ಮಾತುಗಳನ್ನು ಬರೆದುಕೊಳ್ಳಲು ಹೇಳುತ್ತಾನೆ. ಆ ಟಿಪ್ಪಣಿಯಲ್ಲಿ ಹೇಗೆ ಸಂಪ್ರದಾಯವಾದಿಗಳು ಮತ್ತು ಕೆಲಸಕ್ಕೆ ಬಾರದವರು ಚಿಲಿಗೆ ದ್ರೋಹ ಬಗೆದು ಪ್ರಗತಿಪರ ಸರ್ಕಾರಗಳನ್ನು ಪದಚ್ಯುತಿಗೊಳಿಸಬಲ್ಲರು ಎಂಬ ಮಾತುಗಳಿವೆ. ಅದರಲ್ಲಿ, "ನಾನು ಆತುರಾತುರದಲ್ಲಿ ಈ ಮಾತುಗಳನ್ನು ಹೇಳುತ್ತಿದ್ದೇನೆ, ಕ್ಷಮಿಸಿ. ಆ ದುಷ್ಟ ಸೈನಿಕರು ನನ್ನ ಆತ್ಮೀಯ ಕಾಮ್ರೇಡ್ ಅಲೆಂಡೆನನ್ನು ಕೊಂದು ಯಾರಿಗೂ ತಿಳಿಯದಂತೆ ಅವನ ಮೃತದೇಹವನ್ನು ಹೂಳಿದ್ದಾರೆ. ಅವನ ದೇಹವನ್ನು ಅವರ ಮಷೀನ್ ಗನ್ನುಗಳು ಚೂರು ಚೂರು ಮಾಡಿವೆ. ಇದು ಅವರು ಚಿಲಿಗೆ ಎಸಗಿದ ಘೋರ ವಂಚನೆಯಲ್ಲವೇ?" ಎಂದು ಹೇಳುತ್ತಿದ್ದ ಕ್ಷಣದಲ್ಲೇ ಪಿನೋಶೆನ ಸೈನಿಕರು ಅವನ ಮನೆಯೊಳಗೆ ನುಗ್ಗಿಬರುತ್ತಾರೆ. ಅವರ ಕಮಾಂಡರ್ ಕಾಯಿಲೆಯಿಂದ ನರಳುತ್ತಿದ್ದ ನೆರೂಡನ ಮುಂದೆ ನಿಲ್ಲುತ್ತಾನೆ. ಮಹಾನ್ ಕವಿ, ಅವನನ್ನುದ್ದೇಶಿಸಿ "ಸುತ್ತಮುತ್ತ ನೋಡು ನಿನ್ನನ್ನು ಅಪಾಯಕ್ಕೀಡುಮಾಡಬಲ್ಲ ಒಂದು ವಸ್ತುವಿದೆ ನನ್ನ ಬಳಿ. ಅದು ನನ್ನ ಕಾವ್ಯವಲ್ಲದೆ ಮತ್ತೇನೂ ಅಲ್ಲ" ಎನ್ನುತ್ತಾನೆ. ಕೂಡಲೇ ಕಮಾಂಡರ್ ತನ್ನ ಹೆಲ್ಮೆಟ್‌ಅನ್ನು ಹೊರತೆಗೆದು "ದಯಮಾಡಿ ನನ್ನನ್ನು ಕ್ಷಮಿಸಿ ಸೆನರ್ ನೆರೂಡ" ಎನ್ನುತ್ತ ಹಿಂದೆ ಸರಿಯುತ್ತಾನೆ.

ಆ ಘಟನೆ ನಡೆದ ಕೆಲವೇ ದಿನಗಳ ತರುವಾಯ ಚಿತ್ರಕಲಾವಿದ ನೆಮಸಿಯಾ ಆ್ಯಂಟಿಸಿಜ಼್ ನೆರೂಡನನ್ನು ನೋಡಲು ಬರುತ್ತಾನೆ. ಅವನೊಡನೆ ಮಾತಿಗಿಳಿದು ನೆರೂಡ ಮುಂದಿನ ದಿನಗಳಲ್ಲಿ ಜರುಗಬಹುದಾದ ಆಗುಹೋಗುಗಳ ಬಗ್ಗೆ ಹೇಳುವ ಮಾತಿದು:

"ಈಗ ಈ ಸೈನಿಕರು ಬಹಳ ಕ್ರೌರ್ಯದಿಂದ ವರ್ತಿಸುತ್ತಿದ್ದಾರೆ. ಆದರೆ ಸ್ವಲ್ಪ ದಿನಗಳ ತರುವಾಯ ಜನಪ್ರಿಯರಾಗಲು ಪ್ರಯತ್ನಿಸುತ್ತಾರೆ. ಒಳ್ಳೆಯತನವನ್ನು ರೂಢಿಸಿಕೊಳ್ಳಲು ಮುಂದಾಗುತ್ತಾರೆ. ಟೆಲಿವಿಷನ್ ಕ್ಯಾಮರಾಗಳ ಮುಂದೆ ಸಾರ್ವಜನಿಕ ಸ್ಥಳಗಳಲ್ಲಿ ಮಕ್ಕಳನ್ನು ಮತ್ತು ವಯಸ್ಕರನ್ನು ಅಪ್ಪಿಕೊಳ್ಳುತ್ತಾರೆ. ವಸತಿಗಳನ್ನು ನಿರ್ಮಿಸುತ್ತಾರೆ. ಬುಟ್ಟಿಗಟ್ಟಲೆ ಸಿಹಿತಿಂಡಿಗಳನ್ನು ಹಂಚುತ್ತಾರೆ." ಮರುದಿನ ರಾತ್ರಿ ೧೯೭೩ರ ಸೆಪ್ಟೆಂಬರ್ ೨೩ರಂದು ನೆರೂಡ "ನಾನು ವಿರಮಿಸುತ್ತಿದ್ದೇನೆ" ಎಂದು ಹೇಳುತ್ತಲೇ ಕೊನೆಯುಸಿರೆಳೆದ. ನೆರೂಡ ಇಂದು ನಮ್ಮ ಪಾಲಿಗೆ ಇಲ್ಲ. ಆದರೆ ಆತನ ಕಾವ್ಯಗಳು ಜಗತ್ತಿನ ಎಲ್ಲ ಕ್ರಾಂತಿಕಾರಿಗಳಿಗೆ ಸ್ಫೂರ್ತಿಯ ಚಿಲುಮೆಯಾಗಿರುತ್ತವೆ.

(ಆಧಾರ : ಪಾಬ್ಲೊ ನೆರೂಡನ ಆತ್ಮಕತೆ ಮತ್ತಿತರ ಮೂಲಗಳು)

**ಎಸ್. ಸುರೇಂದ್ರ**
ನಂ. ೨೪, ೧೧ನೇ ಅಡ್ಡರಸ್ತೆ, ಕೆನರಾ ಬ್ಯಾಂಕ್ ಕಾಲನಿ
ಜಯನಗರ ಪೂರ್ವ, ಬೆಂಗಳೂರು – ೫೬೦ ೦೧೧

# ವ್ಯಾಸರಾಯತೀರ್ಥರು ಕನಕದಾಸರ ಗುರುಗಳಲ್ಲವೇ ಅಲ್ಲ



ವ್ಯಾಸರಾಯ ತೀರ್ಥರು

ಕನಕದಾಸರು ಮಾಧ್ವ ಪರಂಪರೆಯ ದ್ವೈತ ಮತದ ಅನುಯಾಯಿಗಳೆಂದೂ ವ್ಯಾಸರಾಯ ಸ್ವಾಮಿಗಳಿಂದ ದೀಕ್ಷೆ ಪಡೆದವರೆಂದೂ ವಾದಿರಾಜ ಸ್ವಾಮಿಗಳನ್ನು ಓಲೈಸಿದವರೆಂದೂ ವ್ಯಾಪಕ ಪ್ರಚಾರ ಮಾಡಲಾಗಿದೆ. ಹೀಗೆ ಮಾಡಲು ಕೇವಲ ಕಟ್ಟುಕತೆ, ಐತಿಹ್ಯ ಆಧರಿಸಿ ಕನಕದಾಸರ ಚರಿತ್ರೆಯನ್ನು ಬರೆಯಲಾಗಿದೆ. ಇಂಥ ಚರಿತ್ರೆಗಳ ಮೂಲಕ ಆ ವಿಷಯಗಳನ್ನು ಜನತೆಯ ಮನದಲ್ಲಿ ಗಟ್ಟಿಗೊಳಿಸಲಾಗಿದೆ. ಆದರೆ ಕನಕದಾಸರು ತಮ್ಮ ಯಾವೊಂದು ಕಾವ್ಯದಲ್ಲಿಯೂ ವ್ಯಾಸರಾಯರು ತಮ್ಮ ಗುರುಗಳೆಂಬ ವಿಷಯದ ಪ್ರಸ್ತಾಪ ಮಾಡಿಲ್ಲ. ಇನ್ನು , ಅವರ ಕೀರ್ತನೆಗಳಲ್ಲಿಯೂ ಸ್ಪಷ್ಟ ರೀತಿಯಲ್ಲಿ ಆ ಬಗೆಯ ವಿಷಯಗಳ ಪ್ರಸ್ತಾಪವಿಲ್ಲ. ಇದಕ್ಕೆ ಪ್ರತಿಯಾಗಿ ರಾಮಾನುಜ ಮತ ಮತ್ತು ಆ ಮತದ ಪರಂಪರೆಯಲ್ಲಿಯ ಗುರುಗಳಾದ ತಾತಾಚಾರ್ಯರನ್ನು ಉಲ್ಲೇಖಿಸಿ, ಗೌರವದಿಂದ ನಮನ ಸಲ್ಲಿಸಿದ ಕನಕದಾಸರ ಕೀರ್ತನೆಗಳಿವೆ.

**ಪ್ರೊ॥ ಜ್ಯೋತಿ ಹೊಸೂರ**

**ಕ**ನಕದಾಸರ ಬದುಕು–ಬರಹಗಳ ಕುರಿತು ಪವಾಡಾದಿ ಅವಾಸ್ತವ ವಿಷಯಗಳ ನೆರವಿಲ್ಲದೆ, ವಾಸ್ತವ ಆಕರಗಳನ್ನೇ ಮುಖ್ಯವಾಗಿ ಆಧರಿಸಿದ ಚರಿತ್ರೆ ಕೃತಿಗಳೇ ಪ್ರಚಾರದಲ್ಲಿ ಇಲ್ಲ. ಹೀಗಾಗಲು ಕಾರಣ ಸರಿಯಾದ ಮಾಹಿತಿ ಒದಗಿಸುವ ಆಕರಗಳ ಕೊರತೆಯೋ ಅಥವಾ ಆಧಾರಯುಕ್ತ ಆಕರಗಳನ್ನು ಗುರುತಿಸಲು ಅಸಾಮರ್ಥ್ಯದ ಕಾರಣವೋ ಅಥವಾ ಬೇರೆ ಹಿತಾಸಕ್ತಿಯೋ? ಇದು ಆಳಕ್ಕಿಳಿಯದವರಿಗೆ ಗೊತ್ತಾಗದ ಗುಟ್ಟು. ಅವರ ಬದುಕನ್ನು ಕುರಿತು, ಬರಹಗಳನ್ನು ಕುರಿತು, ಇಲ್ಲಿಯವರೆಗೆ ಪ್ರಕಟವಾಗಿ ಪ್ರಚಾರದಲ್ಲಿರುವ ಯಾವೊಂದು ಚರಿತ್ರೆ ಕೃತಿಯೂ ಜಿಜ್ಞಾಸು ಓದುಗರಿಗೆ ಸಮಾಧಾನ ನೀಡುವುದಿಲ್ಲ; ಪ್ರಧಾನ ಆಕರಗಳಿಂದ ಆಧಾರ–ವಿವರ–ಮಾಹಿತಿ ಪಡೆದುಕೊಂಡು ಬರೆದಂತೆ ಅನ್ನಿಸುವುದಿಲ್ಲ. ಬಹಳಷ್ಟು ಕೃತಿಗಳು ಕನಕದಾಸರನ್ನು ಕುರಿತು ಇರುವ ವದಂತಿ, ಕಟ್ಟುಕತೆ, ಪವಾಡ ಇತ್ಯಾದಿಗಳನ್ನೇ ವಾಸ್ತವವೆಂಬಂತೆ ಭ್ರಮಿಸಿಯೋ, ಹಿತಾಸಕ್ತಿ ಕಾರಣದಿಂದಲೇ ಆಕರಗಳನ್ನಾಗಿ ಮಾಡಿಕೊಂಡು ಬರೆದು ಪ್ರಕಟಿಸಿದಂಥವೇ ಆಗಿವೆ. ಆದರೆ ಆಕರಗಳನ್ನು ಬಳಸಿಕೊಳ್ಳುವಾಗ ಭ್ರಮಿಸದೆ, ಹಿತಾಸಕ್ತಿಗಳಿಗೆ ಬಲಿಯಾಗದೆ, ಎಷ್ಟು ಎಚ್ಚರಿಕೆ – ಎಷ್ಟು ಪ್ರಾಮಾಣಿಕತೆ ವಹಿಸಿದರೂ ಕಡಿಮೆಯೆಂಬ ಹೊಣೆಗಾರಿಕೆಯು ಅಂಥ ಕೃತಿಗಳಲ್ಲಿ ಕಂಡುಬರುವುದಿಲ್ಲ. ಏಕೆಂದರೆ, ಶಾಸ್ತ್ರೀಯತೆ, ತರ್ಕಶಕ್ತಿ ಹಾಗೂ ಇದ್ದ ಆಕರಗಳನ್ನು ಗುರುತಿಸುವ ಔಚಿತ್ಯಪ್ರಜ್ಞೆ ಇತ್ಯಾದಿಗಳ ನೆರವಿನೊಂದಿಗೆ ಅವುಗಳಲ್ಲಿ ಹುದುಗಿರುವ ಅಂಶಗಳ ಹಿನ್ನೆಲೆಯ ಆಶಯ ಗಮನಿಸಿ, ಸುಳಿವು ಪಡೆದು, ಅಲ್ಲಿಯ ಸಾಂಕೇತಿಕತೆ ಇತ್ಯಾದಿ ಅರಿತು ಆ ಕೃತಿಗಳನ್ನು ರಚಿಸಿಲ್ಲವೆಂಬುದು ಅವುಗಳನ್ನು ಕಾಳಜಿಪೂರ್ವಕವಾಗಿ ಪರಿಶೀಲಿಸಿದಾಗ ಸ್ಪಷ್ಟವಾಗುತ್ತದೆ. ಹೀಗಾಗಿ, ಲಭ್ಯವಿರುವ ಆಕರಗಳನ್ನು ಸರಿಯಾಗಿ ಗಮನಿಸಿ, ಔಚಿತ್ಯಪ್ರಜ್ಞೆಯನ್ನು ಜಾಗೃತವಾಗಿಟ್ಟುಕೊಂಡು ಅಧ್ಯಯನ ಮಾಡಿ, ಕನಕದಾಸರ ಬದುಕು–ಬರಹ ಗ್ರಹಿಸಿ, ಕಟ್ಟುಕತೆ, ವದಂತಿ ಇತ್ಯಾದಿಗಳ ಬಗ್ಗೆ ಮರುಚಿಂತನ ಮಾಡಿ, ಆಶಯ ಅರಿತು, ಸಮರ್ಥ ಕೃತಿ ರೂಪಿಸುವ ಕಾರ್ಯ ಮಾಡುವುದು ಈಗ ಅತ್ಯಗತ್ಯ. ಆ ದಿಶೆಯಲ್ಲಿ ಪ್ರಸ್ತುತ ಲೇಖನವು ಆಕರಗಳ ತಾರತಮ್ಯ ಗುರುತಿಸುವ ಮೂಲಕ ಆಸಕ್ತರ ಕುತೂಹಲವನ್ನು ತಣಿಸಲಿದೆ.

ಕನಕದಾಸರ ಬದುಕು–ಬರಹಗಳಿಗೆ ಸಂಬಂಧಿಸಿದಂತೆ ಈಗ ದೊರಕುವ ಎಲ್ಲ ಬಗೆಯ ಆಕರಗಳನ್ನು ಕಾಳಜಿಯಿಂದ ಪರಿಶೀಲಿಸಿದಾಗ ಅವರ 'ಮೋಹನ ತರಂಗಿಣಿ' ಕಾವ್ಯಕೃತಿಯು ಆದ್ಯ ಮತ್ತು ಮಹತ್ತ್ವದ ಅಧಿಕೃತವಾದ ಪ್ರಧಾನ ಆಕರವಾಗಬಲ್ಲುದೆಂಬುದು ಖಚಿತವಾಗುತ್ತದೆ. ಅವರ ಎಲ್ಲ ಕಾವ್ಯ ಮತ್ತು ಕೀರ್ತನಾದಿ ಇತರ ಸಾಹಿತ್ಯ–ರಾಶಿಯೊಡನೆ ಪ್ರಕೃತ 'ಮೋಹನ ತರಂಗಿಣಿ'ಯನ್ನು ಹೋಲಿಸಿ ಪರಿಶೀಲಿಸಿದಾಗ ಆಕರವಾಗಿ ಅದರಲ್ಲಿ ವಿಶೇಷತೆ ಮತ್ತು ಅಧಿಕೃತತೆಯ ವಿಷಯಗಳು ಒಳಗೊಂಡಿರುವುದು ಸ್ಪಷ್ಟವಾಗಿ ವಿದಿತವಾಗುತ್ತದೆ.

ಪಂಚಕಾವ್ಯಕೃತಿಗಳಲ್ಲದೆ ಹಲವು ಹಾಡುಗಳನ್ನೂ ಕನಕದಾಸರು ರಚಿಸಿದ್ದಾರೆ. ಅವು ಕೀರ್ತನೆಗಳೆಂದೇ ಪ್ರಖ್ಯಾತವಾಗಿವೆ; ಅವು ವೈವಿಧ್ಯಪೂರ್ಣ ವಿಷಯ ಆಧರಿಸಿದ ವಿವಿಧ ರೀತಿಯ ರಚನೆಗಳೂ ಆಗಿವೆ. ಕೀರ್ತನೆಗಳೆಂದು ಹೆಸರಾಗಿರುವ ಈ ಹಾಡುಗಳಲ್ಲದೆ ದಾಸರು (೧) ನೃಸಿಂಹಸ್ತವ (೨) ಮೋಹನ ತರಂಗಿಣಿ (೩) ರಾಮಧಾನ್ಯ ಚರಿತೆ (೪) ನಳಚರಿತೆ (೫) ಭಕ್ತಿಸಾರ ಅಥವಾ ಹರಿಭಕ್ತಿಸಾರ ಹೆಸರಿನಲ್ಲಿ ಐದು ಕಾವ್ಯಕೃತಿಗಳನ್ನು ರಚಿಸಿದ್ದಾರೆಂಬುದು ಜನಜನಿತ ಮತ್ತು ಸಾಮಾನ್ಯವಾಗಿ ಎಲ್ಲರೂ ಒಪ್ಪಿದ ವಿಷಯ. ಕನಕದಾಸರ ಈ ಎಲ್ಲ ಕೃತಿರಾಶಿಯನ್ನು ಕಾಳಜಿಯಿಂದ ಅವಲೋಕಿಸಿದಾಗ ಅವರ ಬದುಕಿಗೆ ಸಂಬಂಧಿತ ಮಹತ್ತ್ವದ ಮಾಹಿತಿ ಸ್ಪಷ್ಟವಾಗಿ ನಮೂದಾಗಿರುವುದು 'ಮೋಹನ ತರಂಗಿಣಿ' ಹೆಸರಿನ ಕಾವ್ಯಕೃತಿಯಲ್ಲಿ ಮಾತ್ರವೆಂಬುದು ಖಚಿತವಾಗುತ್ತದೆ. ಈ ಕೃತಿಯ ಅಧ್ಯಯನದಿಂದ ಕನಕದಾಸರ ಬದುಕು, ಕುರಿತು ಕೆಲವು ಮಹತ್ತ್ವದ ವಿಷಯಗಳು ಆ ಕಾವ್ಯದಲ್ಲಿ ದಾಖಲಾಗಿರುವುದು ತಿಳಿದುಬರುತ್ತದೆ. ಆದರೆ ಇಲ್ಲಿಯವರೆಗೆ ಪ್ರಕಟವಾಗಿರುವ ದಾಸರ ಬಗೆಗಿನ ಬಹುತೇಕ ಚರಿತ್ರೆ – ಕೃತಿಗಳಲ್ಲಿ ಅವರ ಜೀವನದ ಬಗೆಗೆ ಇಲ್ಲಿ ಹೇಳಲಾಗಿರುವ ವಿಷಯಗಳ ಪ್ರಸ್ತಾಪವಿಲ್ಲದಿರುವುದು ಆಶ್ಚರ್ಯಕರ ವಿದ್ಯಮಾನ. ಈಗಲಾದರೂ ಆ ಕೃತಿಯಲ್ಲಿರುವ ಅಂಥ ಮಹತ್ತ್ವದ ವಿಷಯಗಳ ಕುರಿತು ಗಮನ ಹರಿಸಿ ಪರಿಶೀಲಿಸುವುದು ಮೊದಲ ಅಗತ್ಯ.

*ಶ್ರೀ ಗಿರಿಜೇಶ್ವರನಾತ್ಮಾಭಿರಾಮ ಸ*
*ದ್ವಾಗೀಶಪಿತ ಪರಂಧಾಮ*
*ಕಾಗಿನೆಲೆಯ ರಂಗ ಸುರಸಾರ್ವಭೌಮ ಸು*
*ತ್ಯಾಗಿ ಪಾಲಿಸು ಪೂರ್ಣಕಾಮ* ॥೧॥

ಕಾಗಿನೆಲೆಯ ರಂಗನಲ್ಲಿ ಪಾಲಿಸೆಂದು ಕೋರಿಕೆ ಸಲ್ಲಿಸುವುದರೊಂದಿಗೆ ಕವಿ ಕನಕದಾಸರು 'ಮೋಹನ ತರಂಗಿಣಿ' ಕಾವ್ಯಾರಂಭ ಮಾಡುತ್ತಾರೆ. ಮೊದಲನೆಯ ಪೀಠಿಕಾ ಸಂಧಿಯ ೧ನೆಯ ಈ ಪದ್ಯದಲ್ಲಿ ತನ್ನ ಆರಾಧ್ಯ ದೇವತೆಯನ್ನು ಹೆಸರುಗೊಂಡು ಸಂಬೋಧಿಸಿ, ಊರ ಹೆಸರನ್ನೂ ಹೇಳಿ ಪ್ರಾರ್ಥಿಸಿದ್ದಾರೆಂಬುದು ಸ್ಪಷ್ಟವಾಗಿ ತಿಳಿದುಬರುತ್ತದೆ.

ಎರಡನೆಯ ಸಂಧಿಯ ಪ್ರಾರಂಭದ ಪದ್ಯದಲ್ಲಿಯೇ ದಾಸರು ತಮ್ಮ ಹೆಸರನ್ನೂ ಹೇಳಿದ್ದಾರೆ. ಕಾಗಿನೆಲೆಯಲ್ಲಿಯ ತನ್ನ ಆರಾಧ್ಯ ದೇವತೆಯೇ ತನ್ನ ಕೃತಿಗೆ ಕರ್ತನೂ ಆಗಿದ್ದಾನೆಂಬುದಾಗಿ ಸ್ಪಷ್ಟಪಡಿಸಿ, ಆ ಕೃತಿಯನ್ನು ಕೇಳಿದರೆ ಅವರಿಗೆ ಪುಣ್ಯ ಲಭಿಸುವುದೆಂದಿದ್ದಾರೆ.

*ಕೃತಿಮೇಲ್ವದವ ಕನಕದಾಸೋತ್ತಮ ಕೇಳ್ದವ*
*ಕ್ಷಿತಿ ಸುಜ್ಞಾನವಧೂಟಿ*
*ಕೃತಿಗೆ ಕರ್ತನು ಕಾಗಿನೆಲೆಯಾದಿಕೇಶವ*
*ಕೃತಿಯ ಕೇಳ್ದರೆ ಪುಣ್ಯವಹುದು* ॥೨–೧॥

– ಎಂಬುದಾಗಿ ಹೇಳುವ ಮೂಲಕ 'ಮೋಹನ ತರಂಗಿಣಿ' ಕಾವ್ಯ ರಚಿಸಿದ ಕವಿ ಕನಕದಾಸನೆಂಬುದಾಗಿ ಕವಿಯೇ ಇಲ್ಲಿ ಹೇಳಿದ್ದಾರೆ. ಮುಂದುವರಿದು ತನ್ನ ಆರಾಧ್ಯ ದೈವ ಕಾಗಿನೆಲೆಯ ರಂಗ ಎಂಬುದಾಗಿ ಹಿಂದಿನ (ಸಂಧಿ) ಅಧ್ಯಾಯದಲ್ಲಿ ಹೇಳಿದಂತೆ ಇಲ್ಲಿಯೂ ಕಾಗಿನೆಲೆಯ ಆದಿಕೇಶವನೆಂಬುದಾಗಿಯೂ ಸ್ಪಷ್ಟಪಡಿಸಿದ್ದಾರೆ. ಈ ಆಧಾರದಿಂದಲೇ, ಅಂದರೆ ಕವಿಯು ಸ್ತುತಿಸುವ ರಂಗ, ಆದಿಕೇಶವ – ಈ ದೈವಗಳ ಪ್ರಸ್ತಾಪ ಮತ್ತು ಭಾಷಾಶೈಲಿ, ಅನಂತರದ ಪರಂಪರೆಯ ಪ್ರತೀತಿ ಇತ್ಯಾದಿಗಳನ್ನು ಆಧರಿಸಿ ಉಳಿದ ಕಾವ್ಯಕೃತಿಗಳಾದ ನೃಸಿಂಹಸ್ತವ, ರಾಮಧಾನ್ಯ ಚರಿತ್ರೆ, ನಳಚರಿತೆ ಹಾಗೂ ಹರಿಭಕ್ತಿಸಾರ (ಭಕ್ತಿಸಾರ) ಹೆಸರಿನ ಈ ನಾಲ್ಕು ಕಾವ್ಯಗಳೂ ಈ ಕನಕದಾಸ ಕವಿಗಳಿಂದಲೇ ರಚನೆಗೊಂಡಿವೆಯೆಂದು ವಿದ್ವಾಂಸರು ಒಪ್ಪಿದ್ದಾರೆ. ಈ ಕಾವ್ಯಗಳ ಕರ್ತೃತ್ವದ ಬಗೆಗಿನ ಪರಂಪರೆಯ ನಂಬುಗೆಯೂ ಇದೇ ಬಗೆಯದಾಗಿದೆ. ಹೀಗಾಗಿ, ಈ ಬಗ್ಗೆ ಭಿನ್ನಾಭಿಪ್ರಾಯಗಳಿಲ್ಲ. ಆದ್ದರಿಂದ 'ಮೋಹನ ತರಂಗಿಣಿ'ಯು ಕನಕದಾಸರ ಬದುಕು ಮತ್ತು ಬರಹ ಸಂಬಂಧಿಸಿದಂತೆ ಪ್ರಮುಖ ಆಧಾರ ಒದಗಿಸುವ ಮಹತ್ತ್ವದ ಆಕರವಾಗಿದೆ. 'ಆದಿಕೇಶವ' ಅಂಕಿತ ಹೊಂದಿರುವ ಎಲ್ಲ ಕೀರ್ತನಾದಿಗಳೂ ಕನಕದಾಸರ ರಚನೆಗಳೆಂದು ನಿರ್ಣಯಿಸಲು ಅಂದರೆ ಕನಕದಾಸರ 'ಅಂಕಿತ', 'ಆದಿಕೇಶವ' ಎಂಬುದಾಗಿ ನಿರ್ಣಯಿಸಲೂ ಈ 'ಮೋಹನ ತರಂಗಿಣಿ' ಕಾವ್ಯವೇ ಪ್ರಮುಖ ಆಕರವಾಗುತ್ತದೆಯೆಂಬುದನ್ನು ವಿದ್ವಾಂಸರು ಗಮನಿಸಬೇಕಾಗುತ್ತದೆ.

ಪ್ರಸ್ತುತ 'ಮೋಹನ ತರಂಗಿಣಿ' ಕಾವ್ಯದ ಸಮಗ್ರ ಪರಿಶೀಲನೆ ಮತ್ತು ಅವಲೋಕನ ಮಾಡಿ, ಇದರ ಬಗ್ಗೆ ಇಲ್ಲಿಯವರೆಗೆ ಪ್ರಕಟವಾದ ಹೊಸ ಬಗೆಯ ಅಭಿಪ್ರಾಯಯುಕ್ತ ಕೃತಿಗಳನ್ನೂ ಕಾಳಜಿಯಿಂದ ಗಮನಿಸಬೇಕಾಗಿದೆ. ಏಕೆಂದರೆ, ಕನಕದಾಸರ ಬಗ್ಗೆ ಮಾಹಿತಿಯ ಮೂಲ ಕೇಂದ್ರವಸ್ತುವಾಗಿ, ಅವರು ಹೊಂದಿ ಅಪ್ಪಿದ್ದ ಮತ, ಗುರು ಮತ್ತು ಅವರ ಧೋರಣೆ, ಅಂದಿನ ಸಾಮಾಜಿಕ ಸ್ಥಿತಿಗತಿ ಇತ್ಯಾದಿಗಳ ಬಗ್ಗೆಯೂ ಈ ಕಾವ್ಯ ಮಹತ್ತ್ವದ ಆಕರವಾಗಿದೆ. ಅಲ್ಲದೆ, ಅದು ಇನ್ನಿತರ ಸುಳಿವುಗಳನ್ನೂ ನೀಡುತ್ತದೆ. ಈ ಸುಳಿವುಗಳ ಜಾಡು ಹಿಡಿದು ವಿವರವಾಗಿ ಸಮರ್ಪಕವಾಗಿ ಆಲೋಚನೆ ಮಾಡದೆ ಕನಕದಾಸರ ಚರಿತ್ರೆಯ ಬಗೆಗಿನ ಯಾವುದೇ ವಿಷಯಗಳ ಬಗೆಗೆ ಖಚಿತವೆಂಬಂಥ ನಿರ್ಧಾರಗಳಿಗೆ ಬರುವುದು ಸರಿಯಾಗಲಾರದು.

ಕನಕದಾಸರು ಮಾಧ್ವ ಪರಂಪರೆಯ ದ್ವೈತ ಮತದ ಅನುಯಾಯಿಗಳೆಂದೂ ವ್ಯಾಸರಾಯ ಸ್ವಾಮಿಗಳಿಂದ ದೀಕ್ಷೆ ಪಡೆದವರೆಂದೂ ವಾದಿರಾಜ ಸ್ವಾಮಿಗಳನ್ನು ಓಲೈಸಿದವರೆಂದೂ ವ್ಯಾಪಕ ಪ್ರಚಾರ ಮಾಡಲಾಗಿದೆ. ಹೀಗೆ ಮಾಡಲು ಕೇವಲ ಕಟ್ಟುಕತೆ, ಐತಿಹ್ಯ ಆಧರಿಸಿ, ಕನಕದಾಸರ ಚರಿತ್ರೆಯನ್ನು ಬರೆಯಲಾಗಿದೆ. ಇಂಥ ಚರಿತ್ರೆಗಳ ಮೂಲಕ ಆ ವಿಷಯಗಳನ್ನು ಜನತೆಯ ಮನದಲ್ಲಿ ಗಟ್ಟಿಗೊಳಿಸಲಾಗಿದೆ. ಆದರೆ ಕನಕದಾಸರು ತಮ್ಮ ಯಾವೊಂದು ಕಾವ್ಯದಲ್ಲಿಯೂ ವ್ಯಾಸರಾಯರು ತಮ್ಮ ಗುರುಗಳೆಂಬ ವಿಷಯದ ಪ್ರಸ್ತಾಪ ಮಾಡಿಲ್ಲ. ಇನ್ನು, ಅವರ ಕೀರ್ತನೆಗಳಲ್ಲಿಯೂ ಸ್ಪಷ್ಟ ರೀತಿಯಲ್ಲಿ ಆ ಬಗೆಯ ವಿಷಯಗಳ ಪ್ರಸ್ತಾಪವಿಲ್ಲ. ಇದಕ್ಕೆ ಪ್ರತಿಯಾಗಿ ರಾಮಾನುಜ ಮತ ಮತ್ತು ಆ ಮತದ ಪರಂಪರೆಯಲ್ಲಿಯ ಗುರುಗಳಾದ ತಾತಾಚಾರ್ಯರನ್ನು ಉಲ್ಲೇಖಿಸಿ, ಗೌರವದಿಂದ ನಮನ ಸಲ್ಲಿಸಿದ ಕನಕದಾಸರ ಕೀರ್ತನೆಗಳಿವೆ. ಮರೆಯದೇ ನೆನಪಿಟ್ಟುಕೊಳ್ಳಬೇಕಾದ ವಿಶೇಷವೆಂದರೆ, ವ್ಯಾಸರಾಯ ಸ್ವಾಮಿಗಳಾಗಲೀ ದ್ವೈತದ ಪರಂಪರೆಯಲ್ಲಾಗಲೀ ಕನಕದಾಸರಿಗೆ ತಕ್ಕ ಸ್ಥಾನ ಕೊಟ್ಟು ಉಲ್ಲೇಖಿಸಿದ ಒಂದೂ ಉದಾಹರಣೆಯೂ ದೊರೆಯುವುದೇ ಇಲ್ಲವೆಂಬ ವಾಸ್ತವಾಂಶವನ್ನು ವಿದ್ವಾಂಸರು ಗಂಭೀರವಾಗಿ ಗಮನಿಸಬೇಕಾದ ವಿಚಾರ. ಇಲ್ಲಿ ಏನೋ ಗುಟ್ಟು ಹುದುಗಿರಬಹುದೆಂದು ಭಾಸವಾಗುವುದಿಲ್ಲವೇ? ಈ ಗುಟ್ಟಿನ ಕುರಿತೂ ವಿಶ್ಲೇಷಣೆ ಮಾಡಿರುವ ಲೇಖನವೊಂದು ಇತ್ತೀಚೆಗೆ ಪ್ರಕಟವಾಗಿರುವುದುಂಟು. ವಿದ್ವಾಂಸರು ಅದನ್ನೂ ಗಮನಿಸಿ ಪ್ರತಿಕ್ರಿಯಿಸಿದರೆ ನೈಜತೆ ಹೊರಬರಬಹುದು. ಆಗ ಕನಕದಾಸರನ್ನು ಸರಿಯಾಗಿ ಅರಿಯಬೇಕೆಂದು ಬಯಸುವವರಿಗೆಲ್ಲರಿಗೂ ಹೊಸ ಸುಳಿವು ಸಿಗಬಹುದು.

## ವ್ಯಾಮೋಹ

ಸ್ವಾತಂತ್ರ್ಯದ
ಮೊದಲು
ಸ್ವದೇಶಿವಸ್ತುಗಳ
ಮೋಹ
ಸ್ವಾತಂತ್ರ್ಯದ
ನಂತರ
ವಿದೇಶಿ ವಸ್ತುಗಳ
ವ್ಯಾಮೋಹ

**ಬಸವರಾಜ ಹುಡೇದಗಡ್ಡಿ**
ಬೆಂಗಳೂರು – ೫೬೦ ೦೧೦

‘ಮೋಹನ ತರಂಗಿಣಿ’ ಕಾವ್ಯದ ಪೀಠಿಕಾ ಸಂಧಿಯಲ್ಲಿಯೇ ಖಚಿತ ಮಾತುಗಳಲ್ಲಿ ತಾವು ವಿಶಿಷ್ಟಾದ್ವೈತ, ಅಂದರೆ ರಾಮಾನುಜ ಮತದ ಅನುಯಾಯಿಗಳೆಂದೂ ಆ ಮತದ ಪರಂಪರೆಯಲ್ಲಿಯ ತಾತಾಚಾರ್ಯರು ಶಿಷ್ಯರಿಗೆ ಪ್ರೇರಕರೆಂದೂ ಕನಕದಾಸರೇ ಉಲ್ಲೇಖಿಸಿದ್ದಾರೆ. ಅಂತೆಯೇ ಅವರ ಅಡಿಗಳಿಗೆ ಎರಗುವೆನೆಂದೂ ಹೇಳಿದ್ದಾರೆ. ಈ ಬಗೆಗಿನ ಖಚಿತತೆಗಾಗಿ ಆ ಕಾವ್ಯದ ಪೀಠಿಕಾ ಸಂಧಿಯಲ್ಲಿಯ ಮೂರು ಪದ್ಯಗಳನ್ನು ನಾವೆಲ್ಲರೂ ಸರಿಯಾಗಿ ಗಮನಿಸಬೇಕು. ಅವುಗಳಲ್ಲಿ ಹುದುಗಿರುವ ವಿಷಯ ಗ್ರಹಿಸಬೇಕು. ಕೆಳಗಿವೆ ಆ ಪದ್ಯಗಳು :

*ಶ್ರೀಮದ್ಗುರುರಾಯದುರಿತವಿಜೇಯ ದು*
*ಷ್ಕಾಮ ವಿಚ್ಛೇದನಾಹ್ಲಾದ*
*ತಾಮಸ ಗುಣನಾಶ ಸಾತ್ವಿಕೋಲ್ಲಾಸ ಶ್ರೀ*
*ರಾಮಾನುಜ ಮುನಿ ಶರಣು* ॥೧-೨॥

*ಅರ್ಕನೊಳಾಟವೆ ತಮಕೆ ಗರುಡನ ಕೂಡೆ*
*ಕಾರ್ಕೋಟಕ ಮೇಳವಿಪುದೆ*
*ತರ್ಕಕೆ ರಾಮಾನುಜರೊಳು ವಾದಿ ಸಂ*
*ಪರ್ಕ ನಿಲ್ವುದೆ ನಿಲ್ಲಲರಿಯದು* ॥೧-೩॥

*ಈ ರೀತಿಯ ಪೆಂಪುವಡೆದು ಸದ್ಗುರು ಕರ*
*ವಾರಿಜೋದ್ಭವ ಶಿಷ್ಯ ಜನರ*
*ಪ್ರೇರಿಸಿ ಚತುರ್ವಿಧ ಫಲವೀವ ತಾತಾ*
*ಚಾರಿಯರಡಿಗೆ ಎರಗುವೆನು* ॥೧-೪॥

**ಪ್ರೊ॥ ಜ್ಯೋತಿ ಹೊಸೂರ ‘ಉದಯ ವಿಕಾಸ’**
*(ಷಾಣ್ಮಾಸಿಕ ಸಾಹಿತ್ಯ-ಸಂಸ್ಕೃತಿ-ಅಧ್ಯಯನ ಪತ್ರಿಕೆ)*




ಮೇಲಿನ ಮೂರೂ ಪದ್ಯಗಳು ತೀರ ಸರಳ ಭಾಷೆಯಲ್ಲಿದ್ದು ಅವುಗಳ ಅರ್ಥ ಗೊಂದಲಗೊಳಿಸದೆ ಎಲ್ಲರಿಗೂ ಸುಲಭವಾಗಿ ತಿಳಿಯುತ್ತದೆ. ರಾಮಾನುಜ ಮುನಿಗೆ ಶರಣು ಎನ್ನುವ ಮೂಲಕ ಮತ್ತು ಆ ಮುನಿಯಲ್ಲಿಯ ವಾದಶಕ್ತಿಯನ್ನು ಹೊಗಳುವ ಮೂಲಕ ಅವರ ಹಿರಿಮೆ ಪ್ರತಿಷ್ಠಾಪಿಸಿ, ಆ ಪರಂಪರೆಯಲ್ಲಿಯ ತಾತಾಚಾರ್ಯ ಗುರುವಿಗೆ ಕನಕದಾಸರು ವಂದನೆಗಳನ್ನು ಅರ್ಪಿಸುತ್ತಾರೆ. ವಿಜಯನಗರ ಸಾಮ್ರಾಜ್ಯದ ಸಾಮ್ರಾಟ ಕೃಷ್ಣದೇವರಾಯನ ರಾಜಗುರುಗಳಾಗಿದ್ದ ಶ್ರೀ ತಾತಾಚಾರ್ಯರು ಶಿಷ್ಯರಿಗೆ ಪ್ರೇರಣೆ ನೀಡಿ, ಚತುರ್ವಿಧ ಫಲ ನೀಡುವ ಸಮರ್ಥರೆಂದೂ ದಾಸರು ಹೊಗಳಿದ್ದಾರೆ. ಹೀಗಾಗಿ ಕನಕದಾಸರು ರಾಮಾನುಜ ಮತದ ಗುರು ಪರಂಪರೆಯನ್ನು ಮತ್ತು ಶ್ರೀವೈಷ್ಣವ ಮತವನ್ನು ಮೆಚ್ಚಿ ಅಪ್ಪಿದವರೆಂದು ನಿರ್ಣಯಿಸಬೇಕಾಗುತ್ತದೆ. ಈ ನಿರ್ಣಯಕ್ಕೆ ‘ಮೋಹನ ತರಂಗಿಣಿ’ ಕಾವ್ಯವೇ ಮೂಲ ಆಕರ.

ಈ ವಾಸ್ತವವನ್ನು ಮೊಟ್ಟಮೊದಲು ಗಮನಿಸಿ ದೀರ್ಘ ಲೇಖನವೊಂದನ್ನು ಬರೆದು ಪ್ರಕಟಿಸಿದ ಶ್ರೇಯಸ್ಸು ಡಾ॥ ಬೆಟಗೇರಿ ಕೃಷ್ಣಶರ್ಮ ಅವರಿಗೆ ಸಲ್ಲುತ್ತದೆ. ಅವರು ‘ಮೋಹನ ತರಂಗಿಣಿ’ ಕಾವ್ಯವನ್ನು ಆಮೂಲಾಗ್ರವಾಗಿ ಸಮತೋಲ ದೃಷ್ಟಿಯಿಂದ ಅಧ್ಯಯನ ಮಾಡಿ, ಆ ಕಾವ್ಯದ ಮೂಲಕ ತಾವು ಮೆಚ್ಚಿ ಅಪ್ಪಿದ ಮತ ಮತ್ತು ವಿಜಯನಗರ ಸಾಮ್ರಾಜ್ಯ ಕಾಲದ ಜನಜೀವನ ಚಿತ್ರ ಎರಡನ್ನೂ ಕನಕದಾಸರು ಮನಂಬುಗುವಂತೆ ಕೊಟ್ಟಿದ್ದಾರೆಂದು ಡಾ॥ ಬೆಟಗೇರಿ ಕೃಷ್ಣಶರ್ಮ ಅವರು ತಮ್ಮ ‘ಕರ್ನಾಟಕ ಜನಜೀವನ’ ಕೃತಿಯಲ್ಲಿ ಸೇರ್ಪಡೆಗೊಳಿಸಿರುವ ‘ಕನಕದಾಸರು ಕಂಡ ವಿಜಯನಗರ’ ಹೆಸರಿನ ಲೇಖನದಲ್ಲಿ ಸ್ಪಷ್ಟವಾಗಿ ವಿವರಿಸಿದ್ದಾರೆ. ಅಂದರೆ, ಕನಕದಾಸರು ಶ್ರೀವೈಷ್ಣವ ಮತದಿಂದ ಪ್ರಭಾವಿತರಾಗಿ ಅದನ್ನು ಮೆಚ್ಚಿ ಅಪ್ಪಿದವರೆಂಬುದನ್ನು ಸ್ಪಷ್ಟ ರೀತಿಯಲ್ಲಿ ಡಾ॥ ಬೆಟಗೇರಿ ಕೃಷ್ಣಶರ್ಮರು ಆ ಲೇಖನದ ಪ್ರಾರಂಭದಲ್ಲಿ ಹೇಳಿದ್ದಾರೆ. ಆಸಕ್ತರು ಆ ಕೃತಿಯನ್ನೂ ಅದರಲ್ಲಿಯ ಲೇಖನವನ್ನೂ ಕಾಳಜಿಯಿಂದ ಪರಿಶೀಲಿಸಬೇಕು. ಅನಂತರವೂ ಸಂಶಯ ಉಳಿದರೆ ಮೂಲ ಕೃತಿ ‘ಮೋಹನ ತರಂಗಿಣಿ’ ಕಾವ್ಯವನ್ನು ಪೂರ್ವಾಗ್ರಹಪೀಡಿತರಾಗದೆ ಮುಕ್ತಮನದಿಂದ ಓದಿ ಅಧ್ಯಯನ ಮಾಡಿ ವಾಸ್ತವ ಅರಿತುಕೊಳ್ಳಬೇಕು.

ಕನಕದಾಸರು ತಾವು ಒಪ್ಪಿದ್ದು ಮತ್ತು ಅಪ್ಪಿದ್ದು ರಾಮಾನುಜರ ಮತವನ್ನು ಎಂಬುದಾಗಿ ಸ್ಪಷ್ಟ ರೀತಿಯಲ್ಲಿ “ಮೋಹನ ತರಂಗಿಣಿ” ಕಾವ್ಯದಲ್ಲಿ ಹೇಳಿದ ಬಗ್ಗೆ ಇದೀಗ ನಾವು ವಿವರವಾಗಿ ತಿಳಿದುಕೊಂಡಿದ್ದೇವೆ. ವಾಸ್ತವತೆ ಹೀಗಿದ್ದರೂ ಈ “ಮೋಹನ ತರಂಗಿಣಿ” ಕಾವ್ಯದಲ್ಲಿಯೇ ಮಾಧ್ವಮತ ಮತ್ತು ಆ ಮಾಧ್ವಮತದಲ್ಲಿಯ ಒಂದು ಮಠದ ಅಧಿಪತಿಗಳಾದ ವಾದಿರಾಜರ ಉಲ್ಲೇಖವು ಸಾಂಕೇತಿಕ ರೀತಿಯಲ್ಲಿ ಬಂದಿದೆಯೆಂದು ಶ್ರೀ ಕಟ್ಟಿ ಶೇಷಾಚಾರ್ಯರು ತಮ್ಮ ‘ಕವಿ ಕನಕದಾಸ’ ಕೃತಿಯಲ್ಲಿ ಹೇಳಲು ತಂತ್ರಗಾರಿಕೆಯಿಂದ ಹೆಣಗಾಡಿದ್ದಾರೆ. (ಆ ಕಾವ್ಯದಲ್ಲಿಯ ಅಧ್ಯಾಯ ಸಂಧಿ) ೮ ಇದರಲ್ಲಿಯ ಎರಡನೆಯ ಪದ್ಯ ಮತ್ತು ಅಧ್ಯಾಯ (ಸಂಧಿ) ೨೬ ಇದರಲ್ಲಿಯ ಒಂದನೆಯ ಪದ್ಯ ಇವೆರಡೂ ಪದ್ಯಗಳಲ್ಲಿ ದ್ವೈತಮತ ಮತ್ತು ದ್ವೈತಮತದ ವಾದಿರಾಜ ಹೆಸರಿನ ಪೀಠಾಧಿಪತಿಗಳ ಉಲ್ಲೇಖ ಇದೆಯೆಂಬುದಾಗಿ, ಅಲ್ಲಿ ಹಾಗಿಲ್ಲದಿದ್ದರೂ ಹೇಳಿ, ತಂತ್ರಗಾರಿಕೆಯಿಂದ ವಿವರ ನೀಡಿ, ಅಧಿಕೃತಗೊಳಿಸಲು ಮೊಟ್ಟಮೊದಲು ಶ್ರೀ ಕಟ್ಟಿ ಶೇಷಾಚಾರ್ಯರು ಹೆಣಗಾಡಿದ್ದಾರೆ. ಆ ಪದ್ಯಗಳಲ್ಲಿ ಅವರು ವಿವರಿಸಿದಂತೆ ಅರ್ಥವು ಇರದಿದ್ದರೂ ಮೋಡಿಗಾರಿಕೆಯಿಂದ ದ್ವೈತಪರವಾದ ಅರ್ಥ ಅವುಗಳಲ್ಲಿ ಹುದುಗಿದೆಯೆಂಬಂತೆ ಶ್ರೀ ಕಟ್ಟಿಯವರು ಕಲ್ಪಿಸಿ ಹೇಳಿದ್ದಾರೆ. ಈ ರೀತಿ ವಿಶಿಷ್ಟ ಮತದ ಹಿತಾಸಕ್ತಿ ಕಾಪಾಡಲು ಇಲ್ಲದ ಸಂಬಂಧ ಜೋಡಿಸಿ, ಇಲ್ಲದ ಅರ್ಥ ಆರೋಪಿಸುವ ಸಲುವಾಗಿನ ಯೋಜನೆ ರೂಪಿಸುವ ಜಾಣ್ಮೆಯನ್ನು ಶ್ರೀ ಕಟ್ಟಿ ಶೇಷಾಚಾರ್ಯರು ವ್ಯವಸ್ಥಿತವಾಗಿ ಮಾಡಿದ್ದಾರೆ. ಅವರ ಆ ದುಸ್ಸಾಹಸವನ್ನು ಇತ್ತೀಚೆಗೆ ಪ್ರಕಟವಾದ ‘ಮೋಹನ ತರಂಗಿಣಿ ಕಾವ್ಯದಲ್ಲಿಯ ಎರಡು ಪದ್ಯಗಳ ಅರ್ಥ ಜಿಜ್ಞಾಸೆ’ ಹೆಸರಿನ ಲೇಖನವೊಂದರಲ್ಲಿ ವಿವರವಾಗಿ ವಿಶ್ಲೇಷಣೆ ಮಾಡಿ, ಬೆಳಕಿಗೆ ತಂದು ವಿದ್ವಾಂಸರ ಗಮನ ಸೆಳೆಯಲು ಆ ಲೇಖಕರು ಪ್ರಯತ್ನಿಸಿದ್ದಾರೆ. ಆ ಲೇಖನದ ಮೌಲ್ಯವನ್ನು ನಿರ್ಧರಿಸಿ, ಅಭಿಪ್ರಾಯ ವ್ಯಕ್ತಪಡಿಸುವ ಕಾರ್ಯವನ್ನು ವಿದ್ವಾಂಸರು ಮಾಡಬೇಕಾಗಿದೆ.

ಅಧಿಕೃತವೆನ್ನಲು ಯೋಗ್ಯವಾದ ಆಕರಗಳ ಆಧಾರ ಸ್ಪಷ್ಟವಾಗಿ ಇದ್ದರೂ ಅವುಗಳನ್ನು ಗಮನಿಸದೇ ವಿಶಿಷ್ಟ ಹಿತಾಸಕ್ತಿಗಾಗಿ ಕೇವಲ ಕಟ್ಟುಕತೆ, ದಂತಕತೆ, ವದಂತಿಗಳನ್ನೇ ಆಧರಿಸಿ, ಕನಕದಾಸರ ಗುರುಗಳು ವ್ಯಾಸರಾಯರು ಎಂದೇ ಹೇಳಲು ಪೋಷಕವಾಗುವಂತೆ ಚರಿತ್ರೆಗಳನ್ನು ಬರೆದು, ಆ ಮೂಲಕ ಮಾಡಿರುವ ಮೋಡಿಗಾರಿಕೆ ಅದ್ಭುತವಾಗಿದೆ! ಸಂಶೋಧನೆ ಮಾಡಿ, ಪಿಎಚ್‌ಡಿ ಪದವಿಗಳಿಗಾಗಿ ವಿಶ್ವವಿದ್ಯಾಲಯಗಳಿಗೆ ಸಲ್ಲಿಸಿ, ಪಿಎಚ್‌ಡಿ ಪದವಿ ಪಡೆದು, ಅನಂತರದಲ್ಲಿ ಪ್ರಕಟಗೊಂಡಿರುವ ಅಂಥವರ ಮಹಾಪ್ರಬಂಧಗಳಲ್ಲಿಯೂ ಕನಕದಾಸರ ಗುರುಗಳು ವ್ಯಾಸರಾಯರೆಂದೇ ಬರೆದುದು ಇನ್ನೂ ಹೆಚ್ಚಿನ ಅದ್ಭುತವಾಗಿದೆ! ಹಾಗೆಂದು ಎಲ್ಲರೂ ಮೌನಿಗಳಾಗಬಾರದು. ಕನಕದಾಸರ ಬದುಕು ಮತ್ತು ಸಾಧನೆಗಳ ಬಗ್ಗೆ ನೈಜ ಆಸಕ್ತಿಯುಳ್ಳವರು, ವಿದ್ವಾಂಸರು, ಸಂಬಂಧಿಸಿದ ಪ್ರಾಧಿಕಾರ, ಅಧ್ಯಯನ ಹಾಗೂ ಸಂಶೋಧನ ಕೇಂದ್ರ, ಸಂಸ್ಥೆಗಳು, ಪೀಠಗಳು ಗಂಭೀರವಾಗಿ ಆಲೋಚಿಸಿ ಕಾರ್ಯಾಚರಣೆಗಿಳಿಯಬೇಕು. ನೈಜ ಆಕರಗಳನ್ನು ಆಧರಿಸಿದ ಗಟ್ಟಿ ಅಭಿಪ್ರಾಯಗಳನ್ನು ಪ್ರಕಟಿಸಬೇಕು; ಅಬ್ಬರಿಸಬೇಕು.

**ಪ್ರೊ॥ ಜ್ಯೋತಿ ಹೊಸೂರ**
ನಂ. ೨೨೬, ‘ವಿಕಾಸ’, ಶಾಂತಿನಗರ
ರಾಯಬಾಗ, ಬೆಳಗಾವಿ ಜಿಲ್ಲೆ – ೫೯೧ ೩೧೭

# ಹೆಜ್ಜೆಗಳು ಮೂಡಿಸಿದ ಹಾದಿ

## ೧೮೦೦ – ೧೯೫೦

*(ಅಕ್ಟೋಬರ್ ಸಂಚಿಕೆಯಿಂದ ಮುಂದುವರೆದ ಭಾಗ)*

**೩. ಸಮಾಜವಾದಿ ಚಳುವಳಿ:**

ಸಮಾಜವಾದವು ಒಂದು ರಮ್ಯ ಪರಿಕಲ್ಪನಾತ್ಮಕ ಚಿಂತನೆಯಷ್ಟೇ ಅಲ್ಲ, ಕಾರ್ಯಸಾಧ್ಯವಾದ ಸಿದ್ಧಾಂತವೂ ಹೌದು. ಅದೊಂದು ಸುದೀರ್ಘ ಪಯಣ ಎನ್ನುತ್ತಾರೆ ಕಿಶನ್ ಪಟ್ನಾಯಕ್. ಕರ್ನಾಟಕದ ಸಾಮಾಜಿಕ–ರಾಜಕೀಯ ಚಿಂತನಾ ವಿಧಾನವನ್ನು ಸಮಾಜವಾದವು ಬಲುತೀವ್ರವಾಗಿ ಪ್ರಭಾವಿಸಿದೆ. ರಾಮಮನೋಹರ್ ಲೋಹಿಯಾ ಅವರ ನಿಕಟವರ್ತಿಗಳಿಂದ, ಅವರ ಆಲೋಚನೆಯ ನೇರ ಪ್ರಭಾವಕ್ಕೆ ಒಳಗಾದವರಿಂದ ಕರ್ನಾಟಕವು ಇಡಿಕಿರಿದಿತ್ತು. ಜೆ. ಎಚ್. ಪಟೇಲ್, ನಾಗೇಶ ಹೆಗಡೆ, ಜಾರ್ಜ್ ಫರ್ನಾಂಡೀಸ್, ಶಾಂತವೇರಿ ಗೋಪಾಲಗೌಡ, ನಂಜುಂಡಸ್ವಾಮಿ ಮುಂತಾದವರೊಂದಿಗೆ ಕಮಲಾದೇವಿ ಚಟ್ಟೋಪಾಧ್ಯಾಯ, ಪೊನ್ನಮ್ಮಾಳ್, ಮಿಣುಕಮ್ಮ ಮೊದಲಾದ ಮಹಿಳೆಯರೂ ಮುಖ್ಯರಾಗಿದ್ದರು. "ಗಂಡಸರು ಮಾತ್ರ ಕೂತು ಹರಟೆ ಹೊಡೆಯುವ ಕಾಫಿ ಮಾಲ್‌ಗಳಿಂದ ಕ್ರಾಂತಿಯ ರೂಪುರೇಷೆಗಳು ಹೊಮ್ಮುವುದು ಸಾಧ್ಯವಿಲ್ಲ" ಎನ್ನುವಷ್ಟು ಮಹಿಳಾಪರವಾಗಿದ್ದ ಲೋಹಿಯಾ ಚಿಂತನೆಗಳೂ, ಸಮಾಜವಾದಿ ಹೋರಾಟದ ಜೊತೆಗೆ ಸಮಪ್ರಮಾಣದಲ್ಲಿ ಮಹಿಳಾ ಕ್ಷಮತೆಯನ್ನು ಕ್ರೋಢೀಕರಿಸಲು ಯಶಸ್ವಿಯಾಗಲಿಲ್ಲ. ಕರ್ನಾಟಕದಲ್ಲಿ ಕಮಲಾದೇವಿ ಚಟ್ಟೋಪಾಧ್ಯಾಯರು ಸಮಾಜವಾದಿ ಸಂಘಟನೆಯಲ್ಲಿ ಸಕ್ರಿಯರಾಗಿದ್ದರು. ಇವರು ಮಂಗಳೂರು, ಬೆಂಗಳೂರು, ಹುಬ್ಬಳ್ಳಿಗಳಲ್ಲಿ ಸಮಾಜವಾದಿ ಯುವ ಪಡೆಯನ್ನೇ ಹುಟ್ಟುಹಾಕಿದರು. ಅಮ್ಮೆಂಬಳ ಬಾಳಪ್ಪ, ಕೆ. ಕೆ. ಶೆಟ್ಟಿ, ಕೆ. ಎಸ್. ಕಾರಂತ, ಉಮಾಬಾಯಿ ಕುಂದಾಪುರ, ಖಾದ್ರಿ ಶಾಮಣ್ಣ, ಸೋಗಾಲ ನಾಗಭೂಷಣ ಮೊದಲಾದ ಅನೇಕರು ಇವರ ಸಂಘಟನೆಯ ಫಲಗಳು. ಗಾಂಧೀ ಹತ್ಯೆಯ ನಂತರ ತೀವ್ರ ರಾಜಕೀಯ ನಿರಾಸಕ್ತಿ ತಾಳಿದ ಕಮಲಾದೇವಿಯವರು ನಾರ್ವೆ, ಸ್ವೀಡನ್, ಡೆನ್ಮಾರ್ಕ್, ಚೀನಾಗಳಲ್ಲಿಯ ಒಕ್ಕಲುತನ ಮತ್ತು ಸಹಕಾರಿ ತತ್ವಗಳ ಅಳವಡಿಕೆಯನ್ನು ಅಧ್ಯಯನ ಮಾಡಿದರು. ೭೦ರ ವಯಸ್ಸಿನಲ್ಲಿಯೂ ದೇಶದ ಮೂಲೆ ಮೂಲೆಗಳನ್ನು ಸುತ್ತಿ, ಪಾರಂಪರಿಕ ಕಲೆ ಮತ್ತು ಕರಕೌಶಲಗಳ ಅಧ್ಯಯನ ಮತ್ತು ಸಂರಕ್ಷಣೆಗೆ ಶ್ರಮಿಸಿದರು. ಇಂದಿನ ಫರೀದಾಬಾದ ನಗರ, ಮಹಾಬಲಿಪುರದ ಶಿಲ್ಪಕಲಾ ಕಾಲೇಜು, ದೆಹಲಿಯ ನಾಟಕಶಾಲೆಗಳು ಇವರ ಪ್ರಯತ್ನದ ಫಲಿತಗಳಾಗಿವೆ.



ಕಮಲಾದೇವಿ ಚಟ್ಟೋಪಾಧ್ಯಾಯ

ಗಾಂಧೀಜಿ ಮತ್ತು ಲೋಹಿಯಾ ಇಬ್ಬರ ವಿಚಾರಗಳಿಂದಲೂ ಪ್ರಭಾವಕ್ಕೆ ಒಳಗಾದ, ಸಮಾಜವಾದಿ ಹೋರಾಟಗಳೊಂದಿಗೆ ಬಾಳಿದ ಶಕ್ತಿಶಾಲಿ ಮಹಿಳೆ ಪೊನ್ನಮ್ಮಾಳ್, ಮೂಲತಃ ಶಿವಮೊಗ್ಗೆಯವರು. ಸಾಮಾಜಿಕ ಸಮಾನತೆಯ ಪರವಾಗಿದ್ದ ಕುಟುಂಬದವರು. ಸ್ವಾತಂತ್ರ್ಯ ಹೋರಾಟದಲ್ಲಿ ಜೈಲು ಸೇರಿದವರು. ತುರ್ತು ಪರಿಸ್ಥಿತಿ ವಿರುದ್ಧ ಕಪ್ಪುಪಟ್ಟಿ ಧರಿಸಿ ನೇರಾನೇರ ಪ್ರತಿರೋಧಿಸಿದವರು. ಕ್ವಿಟ್ ಇಂಡಿಯಾಕ್ಕೆ ಕಾಲೇಜು ಬಿಟ್ಟಿದ್ದು ಎಂದು ನೆನಪಿಸಿಕೊಳ್ಳುತ್ತಿದ್ದ ಪೊನ್ನಮ್ಮಾಳ್ ತಮ್ಮ ಸಹಹೋರಾಟಗಾರರಾಗಿದ್ದ ಎಸ್. ಬಂಗಾರಪ್ಪ, ಜೆ. ಎಚ್. ಪಟೇಲರು ಮುಖ್ಯಮಂತ್ರಿಯಾಗಿದ್ದಾಗಲೂ ಜನಹೋರಾಟಗಳಲ್ಲಿ ಮಾತ್ರ ಅವರನ್ನು ಎದುರಾದವರು. ಜನರ ಬೇಡಿಕೆಯ ಪತ್ರವನ್ನು ಹಿಡಿದು ವಿಧಾನಸೌಧದ ಮೆಟ್ಟಿಲು ಹತ್ತಿದವರು. ೧೯೯೪ರಲ್ಲಿ 'ತುಂಗಾಮೂಲ ಉಳಿಸಿ' ಹೋರಾಟಕ್ಕಿಳಿದಾಗ ಪೊನ್ನಮ್ಮಾಳ್‌ಗೆ ೭೦ ವರ್ಷ. "ರಾಜಕೀಯ ಪಕ್ಷದಿಂದ ಹಿಡಿದು ಉಳಿದೆಲ್ಲ ಕ್ಷೇತ್ರಗಳಲ್ಲಿಯೂ ಮಹಿಳೆಯರಿಗೆ ಮೀಸಲಾತಿ ಅನಿವಾರ್ಯ. ಈ ದೇಶದಲ್ಲಿ ಮಹಿಳೆಯರು ಹೆಚ್ಚು ಶೋಷಿತರು" ಎನ್ನುತ್ತಿದ್ದರು. ಮಹಿಳಾ ಜಾಗೃತಿ ಮತ್ತು ವಿಮೋಚನಾ ಸಂಘಟನೆಗಳಿಗಾಗಿ ಶ್ರಮಿಸುತ್ತಿದ್ದ ಪೊನ್ನಮ್ಮಾಳ್ ನಕ್ಸಲೈಟ್ ಗುಂಪಿನವರೆಂದು ಪಾರ್ವತಿ ಮತ್ತು ಹಾಜಿಮಾ ಎಂಬ ಹುಡುಗಿಯರ ಎನ್‌ಕೌಂಟರ್ ಆದಾಗ ಅದನ್ನು ಬಲವಾಗಿ ಖಂಡಿಸಿದ್ದರಿಂದ ಪೊಲೀಸರಿಂದ ನಿರಂತರ ಕಿರುಕುಳಕ್ಕೂ ಒಳಗಾದರು. ಸ್ವಾತಂತ್ರ್ಯಾನಂತರ ಅಧಿಕಾರ ರಾಜಕಾರಣವು ಸಮಾಜವಾದಿಗಳು ಮತ್ತು

**ಡಾ॥ ವಿನಯಾ ಒಕ್ಕುಂದ**

ಮಹಿಳೆಯರ ಮೇಲಿನ ದೌರ್ಜನ್ಯ ಅನ್ಯಾಯಗಳು ಕಡಿಮೆಯಾಗಿಲ್ಲ. ಸ್ವರೂಪದಲ್ಲಿ ವ್ಯತ್ಯಾಸಗೊಂಡಿವೆ ಅಷ್ಟೇ. ಸ್ತ್ರೀ-ಪುರುಷ ಅನುಪಾತದ ಅಸಮತೋಲನ, ಹೆಚ್ಚುತ್ತಿರುವ ಶಿಶುಮರಣ-ತಾಯ್ಮರಣ, ಮನುಷ್ಯ ಬದುಕಿನ ಘನತೆಯನ್ನೇ ಅಣಕ ಮಾಡುವಂಥ ಅತ್ಯಾಚಾರಗಳು, ಮಹಿಳೆಯ ಶಿಕ್ಷಣ ಪ್ರಮಾಣದಲ್ಲಿ ಹೆಚ್ಚಳ ಮತ್ತು ಗುಣಮಟ್ಟದಲ್ಲಿ ಕುಸಿತ, ಮಹಿಳಾ ಉದ್ಯೋಗಿಗಳ ಸಂಖ್ಯೆಯಲ್ಲಿ ಹೆಚ್ಚಳ ಮತ್ತು ಅಧಿಕಾರ ಸ್ಥಾನಗಳಲ್ಲಿ ಕುಂಠಿತ, ಜಾಗತೀಕರಣದ ಪರಿಣಾಮವಾಗಿ ಕೌಶಲ್ಯಾಧಾರಿತ ಹಾಗೂ ಶ್ರಮ ಆಧಾರಿತವಾದ ಮಹಿಳಾ ಉದ್ಯೋಗ ವಲಯವು ಸಂಕುಚಿತಗೊಳ್ಳುತ್ತಿರುವುದು, ಬಂಡವಾಳವಾದವು ಮಹಿಳಾ ಸ್ವಾತಂತ್ರ್ಯ ಮತ್ತು ಸಮಾನತೆಯ ಸ್ಲೋಗನ್ನು ತನ್ನ ಮಾರುಕಟ್ಟೆಯಾಗಿ ಬಳಸುತ್ತ, ಮಹಿಳಾ ಪ್ರಜ್ಞೆಯನ್ನು ದಿಕ್ಕುಗೆಡಿಸುತ್ತಿರುವುದು, ಮಹಿಳಾ ದುಡಿಮೆಯಲ್ಲಿ ಬಹುದೊಡ್ಡ ವಲಯವೊಂದು ಮನರಂಜನಾ ಮಾಧ್ಯಮ ಹಾಗೂ ಲೈಂಗಿಕ ಕಾರ್ಯಕರ್ತೆಯರದಾಗಿರುವುದು; ಅಧಿಕಾರ ರಾಜಕಾರಣ ಮತ್ತು ಧಾರ್ಮಿಕ ಮೂಲಭೂತವಾದಗಳು ಮಹಿಳೆಯ ಪ್ರಜ್ಞೆಯನ್ನು ತನ್ನ ಸರಕಾಗಿ ಮಾರ್ಪಡಿಸುತ್ತಿರುವುದು... ಹೀಗೆ ಮಹಿಳಾ ವಿಷಯಗಳು ಆಳದಾಳದ ಸಂಕೀರ್ಣದ ಪದರುಗಳೊಳಗೆ ತಳಮಳಿಸುತ್ತಿರುವ ಸಂದರ್ಭವಿದು. ಮಹಿಳಾ ಪ್ರಜ್ಞೆ ತುಂಬ ಎಚ್ಚರಿಕೆಯ ಹೆಜ್ಜೆಗಳನ್ನೂರಬೇಕಿದೆ.

ಜನಸಂಘದ ಮೈತ್ರಿಗೆ ಕಾರಣವಾಗಿದ್ದನ್ನು ಪೊನ್ನಮ್ಮಾಳ್ 'ತಪ್ಪು ಸೇರ್ಪಡೆ' ಎಂದೇ ವ್ಯಾಖ್ಯಾನಿಸುತ್ತಿದ್ದರು. ಹೋರಾಟದಲ್ಲಿ ಜೊತೆಗಿದ್ದ ಹೆಣ್ಣುಮಕ್ಕಳನ್ನು ಚರಿತ್ರೆ ಗುರ್ತಿಸಲಿಲ್ಲ – ಎಂಬ ಕೋಪವನ್ನೂ ಅವರು ಒಂದು ಸಂದರ್ಶನದಲ್ಲಿ ವ್ಯಕ್ತಪಡಿಸಿದ್ದಾರೆ (ಸಮಾಜವಾದಿಗಳ ಸಂದರ್ಶನ– ಬಿ. ಪೀರಬಾಷಾ).



ಸಮಾಜವಾದಿ ಹೋರಾಟ ಕೂಡ ಮಹಿಳೆಯರನ್ನು ಆ ನಂತರದಲ್ಲಿ ಅಲಕ್ಷಿಸಿದ ಪರಿಣಾಮವಾಗಿ, ಸ್ವಾತಂತ್ರ್ಯ ಹೋರಾಟದ ನಂತರದಲ್ಲಿ ಆದಂತೆ ಆ ಮಹಿಳೆಯರು ಮತೀಯವಾದಿ ಶಕ್ತಿಗಳೊಂದಿಗೆ ಸೇರಿಹೋದ ದುರಂತಗಳು ನಡೆದವು. ಇದಕ್ಕೆ ಶಿವಮೊಗ್ಗೆಯ ದಲಿತ ಮಹಿಳೆ ಮಿಣುಕಮ್ಮ ಒಂದು ಉದಾಹರಣೆಯಾಗಿದ್ದಾರೆ. ಶಾಂತವೇರಿ ಗೋಪಾಲಗೌಡರ ಮಹಾನ್ ಅಭಿಮಾನಿಯಾಗಿದ್ದ ಮಿಣುಕಮ್ಮ ಕಾಗೋಡು ಸತ್ಯಾಗ್ರಹದಲ್ಲಿ ಭಾಗವಹಿಸಿ ಮೂರು ತಿಂಗಳು ಜೈಲುವಾಸವನ್ನೂ ಅನುಭವಿಸಿದವರು. ಇವರೊಂದಿಗೆ ಗುತ್ತ್ಯಮ್ಮ, ಬಸವಾನಿ ಸಾವಿತ್ರಮ್ಮ ಎಂಬವರ ಪ್ರಸ್ತಾಪವೂ ಬರುತ್ತದೆ. ಗೋಪಾಲಗೌಡರು ಈ ದಲಿತ ಹೆಣ್ಣುಮಗಳಿಗೆ ೪–೫ ಎಕರೆ ಜಮೀನನ್ನೂ ಸರ್ಕಾರದಿಂದ ಕೊಡಿಸಿದ್ದರು. ಗೋಪಾಲಗೌಡರ ಮರಣಾನಂತರ ಮಿಣುಕಮ್ಮನನ್ನು ಎಲ್ಲರೂ ಮರೆತ ಹಾಗಾಗಿತ್ತು. ಸ್ಥಳೀಯ ಬಿಜೆಪಿ ಈ ಹೆಣ್ಣುಮಗಳನ್ನು ತನ್ನ ವಶಕ್ಕೆ ತೆಗೆದುಕೊಂಡಿತು. ಮುಂದೆ ಇವಳು ಪಂಚಾಯ್ತಿ ಸದಸ್ಯೆಯಾಗಿ ೨ ಬಾರಿ ಆಯ್ಕೆಯಾಗುತ್ತಾಳೆ ಮತ್ತು ಸಮಾಜವಾದಿಗಳ ವಿರುದ್ಧವಾಗುತ್ತಾಳೆ. ಮಹಿಳೆಯನ್ನು ಬಳಕೆಯ ಪದಾರ್ಥವಾಗಿಸಿಕೊಳ್ಳುವ ರಾಜಕಾರಣದ ಉರಿ ಥಾಳಾಗಿಯೇ ಹೆಣ್ಣು ಪ್ರಜ್ಞೆಯನ್ನು ಕಮರಿಸಿದೆ.

ಕರ್ನಾಟಕದಲ್ಲಿ ನಡೆದ ವಿವಿಧ ಚಳುವಳಿಗಳು, ತನ್ನ ಭಾಗವಾಗಿ ಮಹಿಳಾ ಶಕ್ತಿಯನ್ನು ಒಳಗೊಳ್ಳುತ್ತ, ಆ ಮೂಲಕವೇ ಮಹಿಳೆಯರಿಗೊಂದು ತಿಳುವಳಿಕೆಯನ್ನು, ತಾತ್ವಿಕ ಸ್ಪಷ್ಟತೆಯನ್ನು ಒದಗಿಸಿವೆ. ಮಹಿಳಾ ಅಧ್ಯಯನಕಾರರಾದ ನಂದಿತಾ ಗಾಂಧಿ ಮತ್ತು ನಂದಿತಾ ಷಾ ಅವರು ಮೂರು ಅಲೆಗಳಲ್ಲಿ ಮಹಿಳಾ ಚಳುವಳಿಯನ್ನು ವರ್ಗೀಕರಿಸಿ, ಸ್ವಾತಂತ್ರ್ಯಾನಂತರದ ಆರಂಭಿಕ ದಶಕಗಳದ್ದು ನಿಧಾನಗತಿಯ ಚಲನೆ ಎನ್ನುತ್ತಾರೆ. ಇದಕ್ಕೆ ರಾಜಕೀಯ ಅಧಿಕಾರದ ಪುರುಷ ಚಿಂತನೆಯೂ ಕಾರಣವಾಗಿದೆ. ಈ ಹಂತದಲ್ಲಿ ಸಾಂಸ್ಕೃತಿಕ ಹಾಗೂ ಕೌಟುಂಬಿಕ ಪ್ರಶ್ನೆಗಳಿಗಿಂತ, ಸಾಮಾಜಿಕ–ಆರ್ಥಿಕ ಚಳುವಳಿಗಳೊಂದಿಗೆ ಮಹಿಳೆ ಗುರ್ತಿಸಿಕೊಂಡಿದ್ದಾಳೆ. ಇದರಿಂದ ಮಹಿಳೆಯ ದೃಷ್ಟಿಕೋನ ಮತ್ತು ಕಾರ್ಯವ್ಯಾಪ್ತಿ ಹೆಚ್ಚಿದೆ.

ಮಹಿಳಾ ಚರಿತ್ರೆಯ ಮೂರನೆಯ ಮಜಲು ಆರಂಭವಾಗುವುದು ಸಂವಿಧಾನಕ್ಕೂ ಸಾಮಾಜಿಕ ಬದುಕಿಗೂ ಇರುವ ಕಂದಕದ ಅರಿವಿನ ಪ್ರತಿರೋಧದೊಂದಿಗೆ. ಸಂವಿಧಾನಕ್ಕಿಂತಲೂ ಮಿಗಿಲಾದ ಹಿಡಿತವನ್ನು ಧಾರ್ಮಿಕ ಸಂಘಟನೆಗಳು, ಪಿತೃಪ್ರಧಾನ ಸಾಮಾಜಿಕ ಮೌಲ್ಯಗಳು ಸಾಧಿಸಿವೆ ಎನ್ನುವುದು ಮಹಿಳಾ ಪ್ರಜ್ಞೆಗೆ ಮನನವಾಗತೊಡಗಿತು. ಮಧುಕೀಶ್ವರ ಭಾರತದ ಪಿತೃಪ್ರಧಾನ ರಚನೆಯ ಎದುರು ಸಂವಿಧಾನದ ಅಸಹಾಯಕತೆಯನ್ನು ಹೀಗೆ ಹೇಳುತ್ತಾರೆ – "ಪ್ರಸ್ತುತ ಭಾರತೀಯ ಕುಟುಂಬ ರಚನೆಯು ಹೆಂಗಸರ ಅಧೀನತೆ ಮತ್ತು ಶೋಷಣೆಯನ್ನು ಅನುಮೋದಿಸುತ್ತದೆ. ಇದರಿಂದಾಗಿ ಸಂವಿಧಾನ ಕೊಡುವ ಮೂಲಭೂತ ಹಕ್ಕುಗಳು ಹೆಂಗಸರ ಮಟ್ಟಿಗೆ ಅಪ್ರಸ್ತುತವೆನಿಸಿವೆ." ಈ ಹಂತದಲ್ಲಿ ಮಹಿಳಾ ಬದುಕು ಸಂಕೀರ್ಣ ಸಂದರ್ಭಕ್ಕೆ ಸಿಲುಕಿತ್ತು. ಮಹಿಳಾ ಶಿಕ್ಷಣ ಮತ್ತು ಉದ್ಯೋಗಗಳನ್ನು ಕುಟುಂಬ ತನ್ನ ಆದಾಯದ ಭಾಗವಾಗಿ ಪರಿಗಣಿಸತೊಡಗಿತ್ತು. ಭಾರತ ಸರ್ಕಾರವು ಮಹಿಳಾ ಸ್ಥಿತಿಗತಿಯನ್ನು ಊರ್ಜಿತಗೊಳಿಸಲು ಶಿಕ್ಷಣ, ಸಾಮಾಜಿಕ ಕ್ಷೇಮಾಭಿವೃದ್ಧಿ ಮತ್ತು ಆರೋಗ್ಯದ ನೆಲೆಗಳಿಂದ ಕಾರ್ಯತತ್ಪರವಾಯಿತು. ಮೊದಲ ಐದು ಪಂಚವಾರ್ಷಿಕ ಯೋಜನೆಗಳಲ್ಲಿ ಈ ಅಂಶಗಳನ್ನು ಆದ್ಯತೆಯಾಗಿಸಿ ಕೊಳ್ಳಲಾಗಿತ್ತು. ೧೯೮೫ರಲ್ಲಿ ಮಾನವ ಸಂಪನ್ಮೂಲ ಅಭಿವೃದ್ಧಿ ಇಲಾಖೆಯ ಅಡಿಯಲ್ಲಿ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಗಳು ಕಾರ್ಯನಿರ್ವಹಿಸಿದವು. ಅಂತರರಾಷ್ಟ್ರೀಯವಾಗಿ ಮಹಿಳಾ ವರ್ಷ ಮತ್ತು ಮಹಿಳಾ ದಶಕಗಳ ಘೋಷಣೆಯು ಮಹಿಳಾ ವಿಷಯವನ್ನು ಸಾಮಾಜಿಕ ಮುನ್ನೆಲೆಗೆ ತಂದಿತು. ಸ್ವಾತಂತ್ರ್ಯ ಹೋರಾಟದ ನಂತರದಲ್ಲಿ ಮರಳಿ ಪರಂಪರಾಗತ ಕುಟುಂಬ ರಚನೆಗಳಲ್ಲಿಯೇ ಮಹಿಳಾ ಬದುಕು ಸೇರಿಹೋಯಿತಾದರೂ, ಆಧುನಿಕತೆಯ ಕಾರಣವಾದ ಬದಲಾವಣೆಗಳು ನಡೆದಿದ್ದವು. ಇದಕ್ಕೊಂದು ಚಲನಶೀಲ ಸಂಘಟನಾತ್ಮಕ ಸಾಮರ್ಥ್ಯ ಒದಗಿದ್ದು ೭೦ರ ದಶಕದಲ್ಲಿ. ಮಧ್ಯಮ ವರ್ಗದ ಮಹಿಳೆಯರು ಸುಶಿಕ್ಷಿತ ಗೃಹಿಣಿ, ತಾಯಿ, ಉದ್ಯೋಗಿ ಎಂಬ ಪಾತ್ರ ನಿರ್ವಹಣೆಯ ಜೊತೆಗೆ, ತನ್ನದೇ ಆದ ಚಹರೆಯನ್ನು ರೂಪಿಸಿಕೊಳ್ಳಲಾಗದ ಮತ್ತು ವ್ಯವಸ್ಥೆಯ ಮಾಯಾಸ್ಲೇಟಿನಲ್ಲಿ ಕರಗಿ ಹೋಗುತ್ತಿದ್ದೇನೆಂಬ ಅಸ್ವಸ್ಥತೆಯನ್ನು ಅನುಭವಿಸಿದರು. ಕೌಟುಂಬಿಕ ಸಾಮಾಜಿಕ ನಿರ್ಬಂಧಗಳು ಮುಗಿತಾಯವೇ ಇಲ್ಲದ ಅಲೆಯಂತೆ ಒತ್ತಡವನ್ನು ಸೃಷ್ಟಿಸುತ್ತಿದೆಯೆಂಬ 'ಎಚ್ಚರದ ಯಾತನೆ' ಕಂಡುಬಂದಿತು. ಇದೇ ಅವಧಿಯು ಸ್ತ್ರೀವಾದಿ ತಾತ್ವಿಕತೆಯ ಪ್ರವೇಶಿಕೆಯೂ ಆಗಿತ್ತು. ಈ ಆಧುನಿಕ ಚಿಂತನಾಕ್ರಮವು ಪೂರ್ವ ಪರಂಪರೆಯನ್ನು ವಿಶ್ಲೇಷಿಸುವ, ಸಂಶ್ಲೇಷಿಸುವ ವಿಧಾನವೂ ಆಯಿತು. ಇಡಿಯಾಗಿ ಕನ್ನಡದ ಸಾಮಾಜಿಕ–ಸಾಹಿತ್ಯಿಕ ಜಗತ್ತು ಸ್ತ್ರೀವಾದವನ್ನು ಆದರದಿಂದ ಬರಮಾಡಿಕೊಂಡಿಲ್ಲ ಎನ್ನುವುದು ಸತ್ಯವಾದರೂ, ಈ ಚಿಂತನೆಯ ಪ್ರಭಾವದಿಂದ ಹೊರಗುಳಿಯಲಾಗಲಿಲ್ಲ ಎನ್ನುವುದೂ ಸತ್ಯ.

೧೯೬೪ರಲ್ಲಿ ಕಮ್ಯುನಿಸ್ಟ್ ಪಕ್ಷವು ಸೈದ್ಧಾಂತಿಕವಾಗಿ ಇಬ್ಭಾಗವಾದ ನಂತರದಲ್ಲಿ ಆ ಪಕ್ಷಗಳ ಭಾಗವಾಗಿದ್ದ ಮಹಿಳಾ ಸಮಿತಿಗಳು ಹೆಚ್ಚು ಸಕ್ರಿಯವಾಗಿ ಕೆಲಸ ಮಾಡಲು ತೊಡಗಿದವು. ಮಹಿಳೆಯ ಹಕ್ಕುಬಾಧ್ಯತೆಗಳು, ದೇಶ ಮತ್ತು ರಾಜ್ಯ ಸರಕಾರಗಳ ನೀತಿನಿರೂಪಣೆ ಮತ್ತು ಕಾರ್ಯಯೋಜನೆಗಳಲ್ಲಿ ಅನಿವಾರ್ಯವಾಯಿತು. ಲಿಂಗಸೂಕ್ಷ್ಮತೆಯ ಯೋಜನೆಗಳನ್ನು ರೂಪಿಸಬೇಕಾಯಿತು. ಮಹಿಳಾ ಶಿಕ್ಷಣಕ್ಕೆ ಪ್ರೋತ್ಸಾಹ, ಸರ್ವಶಿಕ್ಷಣ ಅಭಿಯಾನ, ನಿರ್ಗತಿಕ ಮಹಿಳೆಯರಿಗೆ ಮಾಸಾಶನ, ದೇವದಾಸಿಯರ ಪುನರ್ವಸತಿ ಯೋಜನೆ, ಕೊಳಗೇರಿ ಮಹಿಳೆಯರ ಪುನರ್ವಸತಿ, ಆರ್ಥಿಕ ತರಬೇತಿಗಳು, ಸ್ವ–ಸಹಾಯ ಸಂಘಗಳು ಇತ್ಯಾದಿ ಸರ್ಕಾರೀ ಮತ್ತು ಅರೆಸರ್ಕಾರೀ ಯೋಜನೆಗಳು ಪ್ರಾರಂಭಗೊಂಡವು. ಕರ್ನಾಟಕ ಲೇಖಕಿಯರ ಸಂಘವು ಮಹಿಳಾ ಅಧ್ಯಯನದ ತಾತ್ವಿಕತೆಯನ್ನು ರೂಪಿಸಿತು. ಮಹಿಳಾ ಪರಂಪರೆಯನ್ನು ರೂಪಿಸಿಕೊಳ್ಳುವ ಭಾಗವಾಗಿ, ಚರಿತ್ರೆಯಲ್ಲಿ ಕಾಣೆಯಾಗಿ ಹೋದ ಮಹಿಳಾ ಅಭಿವ್ಯಕ್ತಿಯನ್ನು ದಾಖಲಿಸಿತು. ವಿಶ್ವವಿದ್ಯಾಲಯಗಳಲ್ಲಿ ಮಹಿಳಾ ಅಧ್ಯಯನ ಕೇಂದ್ರಗಳು ಪ್ರಾರಂಭವಾದವು. ಕರ್ನಾಟಕ ಸಾಹಿತ್ಯ ಅಕಾಡೆಮಿ ಮತ್ತು ಕನ್ನಡ ಸಾಹಿತ್ಯ ಪರಿಷತ್ತಿನಂತಹ ಸಂಘಟನೆಗಳು ಮಹಿಳಾ ವಿಷಯಗಳನ್ನು ಅಧ್ಯಯನದ ಆದ್ಯತೆಯಾಗಿಸಿದವು. ಈ ಅರಿವಿನ ಭಾಗವಾಗಿ ಮಹಿಳೆಯರ ದೌರ್ಜನ್ಯವು ವರದಿಯಾಗಲಾರಂಭಿಸಿತು. ರಕ್ಷಣಾತ್ಮಕವಾದ ಮೊದಲ ಹಂತವಾಗಿ ಸರ್ಕಾರ ಮಹಿಳಾಪರವಾದ ಬಹುಕಾನೂನುಗಳನ್ನು ಜಾರಿಗೆ ತಂದಿತು. ಈ ಕಾಯ್ದೆ ಕಾನೂನುಗಳ ಅಬ್ಬರ ಅದೆಷ್ಟಿತ್ತು ಎಂದರೆ, ಫ್ಲೇವಿಯಾ ಆಗ್ನೇಸ್ ಹೇಳುವಂತೆ – ಕೇವಲ ಕಾಯ್ದೆಗಳಿಂದಲೇ ಮಹಿಳೆಯರ ಶೋಷಣೆಗೆ ಮುಕ್ತಿ ಸಿಗುವಂತಿದ್ದರೆ, ಈ ದಶಕವನ್ನು ಮಹಿಳೆಯರ ಪಾಲಿನ ಸುವರ್ಣದಶಕ ಎನ್ನಬಹುದಿತ್ತು. ಆದರೆ ಸರ್ಕಾರ ಕಾನೂನುಗಳನ್ನು ತರುವ ಮೂಲಕ ಹೋರಾಟಗಾರರ ಬಾಯಿ ಮುಚ್ಚಿಸಿ, ಮಹಿಳಾ ಪ್ರಶ್ನೆಯನ್ನು ರಂಗದಿಂದೊಂದಷ್ಟು ದೂರ ಎಳೆದುಹಾಕಿತು.

ಈ ಅವಧಿಯಲ್ಲಿ ಕರ್ನಾಟಕದಲ್ಲಿ ಹಲವು ಮಹಿಳಾ ಸಂಘಟನೆಗಳು ಎಡಪಂಥೀಯ ತಾತ್ವಿಕತೆಯ ಪ್ರಬಲ ನಂಟಿನೊಂದಿಗೆ ಕಾರ್ಯನಿರ್ವಹಿಸುತ್ತಿದ್ದವು.



'ನ್ಯಾಷನಲ್ ಫೆಡರೇಶನ್ ಆಫ್ ಇಂಡಿಯನ್ ವಿಮೆನ್'ನ ಕರ್ನಾಟಕ ಶಾಖೆ ೧೯೭೫ರಲ್ಲಿ ಬೆಂಗಳೂರಿನಲ್ಲಿ ಸಮ್ಮೇಳನ ನಡೆಸಿತು. ಕರ್ನಾಟಕ ರಾಜ್ಯ ಮಹಿಳಾ ಸಂಘ ಎಂದು ಕರೆಯಲಾಗುವ ಇದರ ಸ್ಥಾಪಕ ಅಧ್ಯಕ್ಷೆ ಅನುಪಮಾ ನಿರಂಜನ ಆಗಿದ್ದರು.



೧೯೭೪ರಲ್ಲಿ ಮಹಿಳಾ ಸ್ಥಾನಮಾನಗಳ ಅಧ್ಯಯನ ಸಮಿತಿಯು ಸಲ್ಲಿಸಿದ Towards Equality ಎಂಬ ವರದಿಯು ಬೌದ್ಧಿಕ ಜಗತ್ತನ್ನು ನೋಯಿಸಿ ಎಚ್ಚರಿಸಿತ್ತು. ಇದಕ್ಕೆ ಪ್ರತಿಕ್ರಿಯೆಯ ರೂಪದಲ್ಲಿ ಮೈಸೂರಿನಲ್ಲಿ 'ಸಮತಾ' ಎಂಬ ಸ್ತ್ರೀವಾದಿ ಚಿಂತನೆಯ ಸ್ತ್ರೀಪರ ಕಾರ್ಯಯೋಜನೆಯನ್ನು ಹೊಂದಿದ್ದ ಸಂಘಟನೆಯು ಅಸ್ತಿತ್ವಕ್ಕೆ ಬಂದಿತು. ಡಾ॥ ವಿಜಯಾ ದಬ್ಬೆ, ರತಿರಾವ್, ಮೀರಾನಾಯಕ್ ಮೊದಲಾದವರು 'ಸಮಾನತೆ ನಮ್ಮ ಜನ್ಮಸಿದ್ಧ ಹಕ್ಕು' ಎಂಬ ಘೋಷಣೆಯೊಂದಿಗೆ, ಸಮತಾದ ಒಲವು ನಿಲುವುಗಳನ್ನು ರೂಪಿಸಿದರು. ಮಹಿಳೆಯರ ಸಮಸ್ಯೆಗಳ ವಿಶ್ಲೇಷಣೆ ಮತ್ತು ಪರಿಹಾರಗಳ ಶೋಧನೆ ಜೊತೆಗೆ ಮಹಿಳಾ ಸಮಸ್ಯೆಗಳ ಕುರಿತ ತಾತ್ವಿಕ ತಿಳಿವನ್ನು ಬೆಳೆಸುವ ಹಾದಿಯಲ್ಲಿ ಸಮತಾದ ಕಾರ್ಯಚಟುವಟಿಕೆಗಳು ಮುನ್ನಡೆದವು. ಬೀದಿನಾಟಕಗಳು, ಭಾಷಣ, ಚರ್ಚೆ, ಅಶ್ಲೀಲ ಸಿನಿಮಾಗಳ ವಿರೋಧ, ಹೆಣ್ಣುಮಕ್ಕಳ ಅಸಹಜ ಸಾವಿನ ತನಿಖೆಗೆ ಒತ್ತಾಯ, ೨ನೇ ಮದುವೆಯಾಗುವ ಸುಶೀಲರನ್ನು ಪ್ರಶ್ನಿಸುವುದು, ಮೂಢನಂಬಿಕೆ ಮತ್ತು ಕೋಮುವಾದದ ವಿರುದ್ಧದ ಅರಿವು, ಸಮತಾ ವೇದಿಕೆಯಿಂದ ಶಾಲೆ–ಕಾಲೇಜುಗಳಲ್ಲಿ ಅರಿವು ಮೂಡಿಸಿದ್ದು, ದೇಶದಾದ್ಯಂತ ನಡೆಯುತ್ತಿದ್ದ ಮಹಿಳಾ ದೌರ್ಜನ್ಯದ ವಿರುದ್ಧದ ದನಿಯಾಗಿಯೂ ದುಡಿದದ್ದು, ಕರ್ನಾಟಕದಲ್ಲಿ ಮೋಟಮ್ಮನವರು ಸಮಾಜ ಕಲ್ಯಾಣ ಸಚಿವೆಯಾಗಿದ್ದಾಗ ರೂಪಿಸಿದ್ದ ಸ್ವಸಹಾಯ ಸಂಘಗಳ ಪ್ರಯೋಜನವನ್ನು ಜನರಿಗೆ ಅರಿವಾಗಿಸಿದ್ದು, ಸಮತಾ–ಪ್ರತಿ ಬುಧವಾರ ಮಹಿಳಾ ಸಮಸ್ಯೆಯ ಅಹವಾಲು ಸ್ವೀಕರಿಸಿ ಪರಿಹಾರೋಪಾಯ ಹುಡುಕಿದ್ದು... – ಹೀಗೆ, ಸಮತಾದ ಕಾರ್ಯ ವೈಖರಿಗಳು ಬಹುಸ್ತರೀಯವಾಗಿದ್ದವು. ತಾತ್ವಿಕತೆ ಖಚಿತವಾಗಿತ್ತು. ಸಮತಾ ನಡೆಸಿದ ಇಂತಹ ಘಟನೆಗಳ ಪರಿಶೀಲನೆಯಲ್ಲಿ, ಜಾಗೃತಿಯಲ್ಲಿ ಕೆಲವಕ್ಕೆ ಪರಿಹಾರ ದೊರೆತಿವೆ. ಕೆಲವು ಐತಿಹಾಸಿಕ ತೀರ್ಪುಗಳಾಗಿವೆ. ಮಹಿಳಾ ಸಂಘಟನೆಗಳದ್ದು ಬರೀ ಅಕಾಡೆಮಿಕ್‌ವಲಯ ಎಂಬ ಮಿಥ್‌ಅನ್ನು ಸಮತಾ ಒಡೆದಿದೆ. ಸ್ತ್ರೀವಾದವನ್ನು ಸಾಮಾಜಿಕ ಅರಿವಾಗಿ ಬೆಳೆಸುವ ಹಂಬಲದಲ್ಲಿ 'ಸಮತಾ ವಾರ್ತಾಪತ್ರ' ಪ್ರಾರಂಭವಾಯಿತು. ಒಂದೆಡೆ ತಾತ್ವಿಕ ಚಿಂತನೆ ಮತ್ತು ಅಕಾಡೆಮಿಕ್ ಅಧ್ಯಯನದ ಅಗತ್ಯ ಇನ್ನೊಂದೆಡೆ ಕೆಳಮಧ್ಯಮ – ಮಧ್ಯಮ ಮತ್ತು ಬಡವರ್ಗದ ಹೆಣ್ಣುಗಳ ಬದುಕಿನಲ್ಲಿ ದಶಾವತಾರ ಎತ್ತುತ್ತಿರುವ ಅಸಮಾನತೆಯನ್ನು ತಿಳಿಯಪಡಿಸುವ ಪ್ರಯತ್ನ ಈ ಎರಡು ನಡೆಯ ಚಲನಶೀಲ, ಒತ್ತಡವು ಸಮತಾವನ್ನು 'ಸಮತಾ ಅಧ್ಯಯನ ಕೇಂದ್ರ' ಮತ್ತು 'ಸಮತಾ ವೇದಿಕೆ' ಎಂಬ ಎರಡು ಭಾಗವಾಗಿಸಿತು. ಕನ್ನಡದ ಪ್ರಮುಖ ಸ್ತ್ರೀವಾದಿ ಚಿಂತಕಿ ವಿಜಯಾ ದಬ್ಬೆಯವರ ಕನಸಿನ ಸಮತಾ, ನಿರಂತರವಾಗಿ ೩–೪ ದಶಕಗಳಿಂದ ಮೈಸೂರು ಸೀಮೆಯ ಮತ್ತು ಕರ್ನಾಟಕದ ಸ್ತ್ರೀಪರ ಚಿಂತನೆಯ ಕಳಕಳಿಯ ಕ್ರಿಯಾಶೀಲವಾದ ಶಕ್ತಿಕೇಂದ್ರವಾಗಿತ್ತು. ಇಂದಿಗೂ ಸಮತಾ ವೇದಿಕೆ ಮಹಿಳೆಯರು ಎದುರಿಸುತ್ತಿರುವ ಅನ್ಯಾಯಗಳ ಅಹವಾಲನ್ನು ಸ್ವೀಕರಿಸುತ್ತಿರುವ ಕ್ರಿಯಾಶೀಲ ವೇದಿಕೆಯೇ ಆಗಿದೆ.

ಎಡಪಂಥೀಯ ವಿಚಾರಧಾರೆಯ ಭಾಗವಾಗಿ ಮಹಿಳಾ ಸಂಘಟನೆಯಾಗಿ ಇಂದಿಗೂ ಎಚ್ಚರದ ಧ್ವನಿಯಾಗಿರುವುದು ಜನವಾದಿ ಮಹಿಳಾ ಸಂಘಟನೆ. ಇದು All Indian Democratic Women's Associationನ ಒಂದು ಭಾಗವಾಗಿ ಹುಟ್ಟಿಕೊಂಡಿತ್ತು. ೧೯೮೭ರಲ್ಲಿ ಮದ್ರಾಸ್‌ನಲ್ಲಿ ನಡೆದ ಸಮ್ಮೇಳನದ ನಂತರ ಕರ್ನಾಟಕದಲ್ಲಿದು ಹೆಚ್ಚು ಕ್ರಿಯಾಶೀಲವಾಯಿತು. ಚಿಂತನೆ ಮತ್ತು ಚಳುವಳಿಯನ್ನು ಒಟ್ಟಾಗಿ ಮುನ್ನಡೆಸಬೇಕು ಎನ್ನುವುದು ಜನವಾದಿಯ ಆದ್ಯತೆ. ಸ್ಲಂ ಮಹಿಳೆಯರು, ಕೃಷಿಕೂಲಿಕಾರ್ಮಿಕರು, ಅಂಗನವಾಡಿ ಕಾರ್ಯಕರ್ತೆಯರು, ದೇವದಾಸಿಯರು ಹೀಗೆ ಜಾತಿ–ವರ್ಗಗಳ ತಾರತಮ್ಯದಿಂದ, ಲಿಂಗನೀತಿಯಿಂದ ದುಪ್ಪಟ್ಟು ಅನ್ಯಾಯಕ್ಕೆ ಒಳಗಾಗುತ್ತಿರುವವರ ಕುರಿತು ಕಾರ್ಯಯೋಜನೆಯನ್ನು ರೂಪಿಸಿಕೊಂಡು ಸಂಘಟನಾತ್ಮಕ ಹೋರಾಟ ನಡೆಸುವುದು ಜನವಾದಿ ಸಂಘಟನೆಯ ಆದ್ಯತೆಯಾಗಿತ್ತು. ಬೆಲ್ಚಿ, ಬೆಂಡಿಗೇರಿಗಳಲ್ಲಿ ದಲಿತರಿಗೆ ಮಲತಿನ್ನಿಸಿದ ಅಮಾನವೀಯತೆಗಳು ನಡೆದಾಗ ಗಟ್ಟಿಯಾದ ಪ್ರತಿರೋಧದ ಧ್ವನಿಯೆತ್ತಿದ್ದು ಜನವಾದಿ ಸಂಘಟನೆ. ದಲಿತ, ರೈತ ಹೋರಾಟಗಳು ತಮ್ಮೊಡನೆ ಪಾಲುದಾರರಾಗಿರುವ ಮಹಿಳೆಯರ ಹಿತವನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ ಎಂಬುದನ್ನು ಗಮನಿಸಿ, ಅದರ ವಿರುದ್ಧ ಜಾಗೃತಿಯ ಸಂವೇದನೆಯನ್ನು ರೂಪಿಸಿದ್ದು ಜನವಾದಿ ಸಂಘಟನೆ. ಸರ್ಕಾರೀ ಸೌಲಭ್ಯಗಳ ಹಂಚಿಕೆಯಲ್ಲಿಯೂ ಮಹಿಳೆಯ ಪಾಲುದಾರಿಕೆಯು ಕನಿಷ್ಠ ಪ್ರಮಾಣದ್ದಾಗುವುದರ ವಿರುದ್ಧದ ಜಾಗೃತಿಯನ್ನು ನಡೆಸಿದರು. 'ಕೂಲಿಗಾಗಿ ಕಾಳು' ಯೋಜನೆಯಲ್ಲಿ ಮಹಿಳಾ ಶ್ರಮಶಕ್ತಿಯ ಅಗಾಧತೆಯನ್ನು ಕಾಣಿಸಿದರು. ಕೆಳಜಾತಿ ವರ್ಗಗಳ ಹೆಣ್ಣುಮಕ್ಕಳನ್ನು ಗುಜ್ಜರ ಮದುವೆಯ ಹೆಸರಿನಲ್ಲಿ ಮಾರಾಟ ಮಾಡುವ ಅಮಾನವೀಯತೆಯ ವಿರುದ್ಧ ಸಂಘಟನೆ ದುಡಿದಿದೆ. ಕೋಮುವಾದ, ಮತೀಯವಾದಗಳು ಮಹಿಳಾ ದೌರ್ಜನ್ಯವನ್ನು ಅತಿರೇಕವಾಗಿಸಿದ ದುರಂತದಲ್ಲಿ ಕೆ. ನೀಲಾ, ಮೀನಾಕ್ಷಿ ಬಾಳಿ, ಕೆ. ಎಸ್. ವಿಮಲಾ ಇವರ ನಾಯಕತ್ವದಲ್ಲಿ ನೂರಾರು ಪ್ರತಿಭಟನೆಗಳು ಮತ್ತು ರ್‍ಯಾಲಿಗಳು ನಡೆದಿವೆ. ಶೋಷಿತ ಮಹಿಳೆಯರು ಮಹಿಳಾ ಹಕ್ಕು ಆಯೋಗಕ್ಕೆ ದೂರು ಸಲ್ಲಿಸುವ ಪೂರ್ವದಲ್ಲಿ ಜನವಾದಿ ಮಹಿಳಾ ಸಂಘಟನೆಗೆ ಅಪೀಲು ಹೋಗುವುದು ಇತ್ತೀಚಿನ ವಿದ್ಯಮಾನವಾಗಿದೆ. ರಾಮಚಂದ್ರಾಪುರ ಮಠದ ರಾಘವೇಶ್ವರ ಸ್ವಾಮಿಯ ವಿರುದ್ಧ ರಾಮಕಥಾಗಾಯಕಿ ಸಲ್ಲಿಸಿದ ದೂರು ಮತ್ತು ಆ ಮಠಕ್ಕೆ ಸಂಬಂಧಿಸಿದ ವಿದ್ಯಾರ್ಥಿನಿಲಯದಿಂದ ಸ್ವಾಮಿಯ ವಿರುದ್ಧ ಸಲ್ಲಿಸಿದ ಅತ್ಯಾಚಾರದ ದೂರು, ಕನಿಷ್ಠ ವಿಚಾರಣೆಯ ಹಂತವನ್ನಾದರೂ ತಲುಪಿದ್ದರೆ ಅದರ ಹಿಂದೆ ಜನವಾದಿ ಸಂಘಟನೆಯ ಪರಿಶ್ರಮವಿದೆ. ಅದೇ ರೀತಿ ವಿದ್ಯಾರ್ಥಿನಿಯು ಬಿಸಿಯೂಟದ ಕಾರ್ಯಕರ್ತೆಯರ, ಆಶಾ ಕಾರ್ಯಕರ್ತೆಯರ ವಿಷಯದಲ್ಲಿ ಸರ್ಕಾರ ಇತ್ಯಾತ್ಮಕ ಧೋರಣೆ ತಳೆದಿದ್ದರೆ; ಅದು ಜನವಾದಿ ಸಂಘಟನೆಯ ಹೋರಾಟದ ಪ್ರತಿಫಲವಾಗಿತ್ತು.

ಕರ್ನಾಟಕ ಮಹಿಳಾ ಚಳುವಳಿಯು ಕರ್ನಾಟಕ ಲೇಖಕಿಯರ ಸಂಘದ ಕರ್ತೃತ್ವಶೀಲ ಪುಟಗಳು ಸೇರ್ಪಡೆಯಾಗದಿದ್ದರೆ ಅಪೂರ್ಣವಾಗುತ್ತದೆ. ೧೯೭೯ರಲ್ಲಿ ಸ್ಥಾಪನೆಯಾದ ಲೇಖಕಿಯರ ಸಂಘವು ಇಂದು ಸಾವಿರಾರು ಲೇಖಕಿಯರನ್ನು ತನ್ನ ಸದಸ್ಯೆಯರನ್ನಾಗಿಸಿದೆ. ಮಹಿಳಾ ಸಾಹಿತ್ಯ ಪರಂಪರೆಯ ಹುಡುಕಾಟ, ಚರಿತ್ರೆಯಲ್ಲಿ ಅಲಕ್ಷ್ಯಗೊಂಡ ಮಹಿಳಾ ಸಂವೇದನೆಯ ದಾಖಲೆಗಳು, ಮಹಿಳಾ ಅಭಿವ್ಯಕ್ತಿಯು ಎದುರಿಸುತ್ತಿರುವ ಅಡೆತಡೆಗಳು – ಇವುಗಳ ತಾತ್ವಿಕ ಶೋಧನೆಯ ಮೂಲಕ ಮಹಿಳಾ ಸಂವೇದನೆಯ ಅರಿವನ್ನು ಮೂಡಿಸಿದ್ದು ಲೇಖಕಿಯರ ಸಂಘದ ಮಹತ್ವದ ಕೊಡುಗೆ. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆಯನ್ನು ಮರುನಿರ್ಮಿಸುವ ಘನತೆಯ ಕಾರ್ಯವನ್ನು ಲೇಖಕಿಯರ ಸಂಘ ಕೈಗೆತ್ತಿಕೊಂಡಿತು. ಕನ್ನಡದ ಸಾಹಿತ್ಯ ಚರಿತ್ರೆಯ ಸಂಪುಟಗಳು ಮರೆತ, ಸಾಂಸ್ಕೃತಿಕ ಪುಟಗಳು ಅಲಕ್ಷಿಸಿದ ಮಹಿಳೆಯರ ಸಾಧನೆಯನ್ನು ಶೋಧಿಸಿ ಮಹಿಳಾ ಪರಂಪರೆಯನ್ನು ರೂಪಿಸಿತು. ನಂಜನಗೂಡಿನ ತಿರುಮಲಾಂಬಾ, ಆರ್. ಕಲ್ಯಾಣಮ್ಮ, ಬೆಳಗೆರೆ ಜಾನಕಮ್ಮ, ಶ್ಯಾಮಲಾದೇವಿ ಬೆಳಗಾಂವಕರ, ಸರಸ್ವತಿದೇವಿ ಗೌಡರ, ಸರಸ್ವತಿಬಾಯಿ ರಾಜವಾಡೆ ಹೀಗೆ ಆದ್ಯ ಬರಹಗಾರ್ತಿಯರ ಕೃತಿ ಸಂಪುಟಗಳು ಬಂದವು. ಅಲಕ್ಷಿತ ಮಹಿಳೆಯ ಚರಿತ್ರೆಯನ್ನು ಮರುಶೋಧಿಸುವ ಅಗತ್ಯದ ಎಚ್ಚರವು ಕನ್ನಡದ ಸಂವೇದನಾಶೀಲತೆಯನ್ನು ಪ್ರಭಾವಿಸಿತು. ಇದರ ಪರಿಣಾಮವಾಗಿ ಜನಪದ ಹಾಡುಗಾರ್ತಿಯರ ಬಾಳಕಥನಗಳು ದಾಖಲಾದವು. ಆಧುನಿಕತೆಯ ಆರಂಭದ ಕಾಲದಲ್ಲಿ ರಂಗಭೂಮಿ, ಸಿನೆಮಾಗಳಲ್ಲಿ ದೇಶದ ಮಟ್ಟದಲ್ಲಿ ತಮ್ಮ ಪ್ರತಿಭೆಯ ಕಾರಣದಿಂದಲೇ ತಾರೆಯರಾದ ಅಮೀರಬಾಯಿ ಕರ್ನಾಟಕಿ, ಗೋಹರಜಾನ್, ಜುಬೇದಾಬಾಯಿ ಸವಣೂರು ಇವರುಗಳ ಕುರಿತು ಅಧ್ಯಯನಗಳಾದವು. ಮಹಿಳಾ

ನೆಲೆಯಿಂದ ಸಾಹಿತ್ಯವನ್ನೂ ಒಳಗೊಂಡಂತೆ ಎಲ್ಲ ಜ್ಞಾನಶಾಖೆಗಳ ಪುನರ್‌ವಿಮರ್ಶೆಯು ಆರಂಭವಾಯಿತು. ಬದುಕಿನ ವಿಭಿನ್ನ ಕ್ಷೇತ್ರಗಳಲ್ಲಿ ಸಾಧನೆ ಮಾಡಿದ ಮಹಿಳೆಯರ ಬದುಕನ್ನು ಪ್ರಾಮಾಣಿಕವಾಗಿ ದಾಖಲಿಸುವ, ಆತ್ಮಕಥನಾತ್ಮಕ ಬರಹಗಳ ಒಲವು ಹೆಚ್ಚಿತು. ಆ ಮೂಲಕ 'ವೈಯಕ್ತಿಕವೆಲ್ಲವೂ ಸಾರ್ವತ್ರಿಕವಾದದ್ದು' ಎಂಬ ಸೈದ್ಧಾಂತಿಕತೆಯನ್ನು ಅರಿವಾಗಿಸಲಾಯಿತು. ಈ ಹಂತದಲ್ಲಿ ವಿಜಯಾ ದಬ್ಬೆ, ಬಿ.ಎನ್. ಸುಮಿತ್ರಾಬಾಯಿ, ಎನ್. ಗಾಯತ್ರಿ, ನೇಮಿಚಂದ್ರ, ಆರ್. ಪೂರ್ಣಿಮಾ, ಎಚ್.ಎಸ್. ಶ್ರೀಮತಿ, ಹೇಮಲತಾ ಮಹಿಷಿ, ಕಮಲಾ ಹಂಪನಾ, ಡಾ॥ ವಿಜಯಮ್ಮ, ಸರೋಜಿನಿ ಶಿಂತ್ರಿ ಮುಂತಾದವರ ಶ್ರಮ ಗಣನೀಯವಾದದ್ದು.


ಸಾಲು ಮರದ ತಿಮ್ಮಕ್ಕ

ಸ್ವಾತಂತ್ರ್ಯಾನಂತರದಲ್ಲಿ, ಸರ್ಕಾರಗಳ 'ಅಭಿವೃದ್ಧಿ ಯೋಜನೆಗಳು' ತಪ್ಪು ತಳಹದಿಯಿಂದ ಬೆಳೆಯತೊಡಗಿದಾಗ; ಅದನ್ನು ವಿರೋಧಿಸುವ ಪರಿಸರವಾದಿ ಹೋರಾಟದಲ್ಲಿ ಮಹಿಳೆಯರ ಪಾತ್ರ ಗಮನಾರ್ಹವಾಗಿತ್ತು. ಹಿರಿಯ ಸ್ವಾತಂತ್ರ್ಯ ಹೋರಾಟಗಾರರೂ, ಚಿಂತಕರೂ ಆಗಿರುವ ಎಚ್.ಎಸ್. ದೊರೆಸ್ವಾಮಿಯವರು 'ನೆನಪಿನ ಸುರಳಿ ತೆರೆದಾಗ' ಎಂಬ ತಮ್ಮ ಆತ್ಮಕಥನದಲ್ಲಿ – ಮೈಸೂರಿನಲ್ಲಿ ಕುಡಿತದ ಅಂಗಡಿ ವಿರುದ್ಧದ ಚಳುವಳಿಯಲ್ಲಿ ಸತತವಾಗಿ ಒಂದು ತಿಂಗಳ ಕಾಲ ಬಡ–ದುಡಿವ ವರ್ಗದ ಹೆಣ್ಣುಮಕ್ಕಳು ಭಾಗೀದಾರರಾದ ಬಗೆಯನ್ನು ಹೆಮ್ಮೆಯಿಂದ ಸ್ಮರಿಸಿದ್ದಾರೆ. ಕಳೆದ ತಿಂಗಳು ದಾವಣಗೆರೆಯಿಂದ ಬೆಂಗಳೂರು ವಿಧಾನಸೌಧದವರೆಗೆ ಸಾವಿರಾರು ಹೆಣ್ಮಕ್ಕಳು ಪಾದಯಾತ್ರೆ ಮಾಡಿ ಕೇಳಿದ್ದು – ಮದ್ಯ ನಿಷೇಧವನ್ನು. ಕರ್ನಾಟಕದಲ್ಲಿ ಅರಣ್ಯ ನಾಶವನ್ನು ತಡೆವ 'ಅಪ್ಪಿಕೊ ಚಳುವಳಿಯ' ಕಾಲದಿಂದಲೂ ಶಿವರಾಮ ಕಾರಂತರ ಜೊತೆಯಲ್ಲಿ ಪರಿಸರ ಕಾಳಜಿಯಿಂದ ದುಡಿದವರು ಕುಸುಮಾ ಸೊರಬ. ಉತ್ತರ ಕನ್ನಡ ಜಿಲ್ಲೆಯ ಇವರು ಕುಸುಮಕ್ಕ ಎಂದೇ ಜನಜನಿತರಾದವರು. ಕರ್ನಾಟಕದ ಕಾಶ್ಮೀರ ಎಂದು ರವೀಂದ್ರನಾಥ ಠಾಗೂರರಿಂದ ಕರೆಯಿಸಿಕೊಂಡಿದ್ದ ಈ ನೆಲ, ದೇಶದ 'ಅಭಿವೃದ್ಧಿಯ' ಹುಚ್ಚುಹೊಳೆಯಲ್ಲಿ ಕೊಚ್ಚಿಹೋಗಲಾರಂಭಿಸಿತ್ತು. ನೌಕಾನೆಲೆ, ಡೆನ್ಮಾರ್ಕ್ ಯೋಜನೆ, ಕೈಗಾ ಅಣುಸ್ಥಾವರಗಳು ಈ ಪರಿಸರದ ಶ್ರೀಮಂತಿಕೆಯನ್ನು ನಾಶಗೊಳಿಸಲಾರಂಭಿಸಿದ್ದವು. ಕೈಗಾ ಅಣುಸ್ಥಾವರದ ವಿರುದ್ಧ ನಡೆದ ಬೃಹತ್ ಪ್ರತಿರೋಧದಲ್ಲಿ ಕುಸುಮಕ್ಕ ಮಹತ್ವದ ಪಾತ್ರವಹಿಸಿದ್ದರು. ಹೋರಾಟ ಯಶಸ್ವಿಯಾಗಲಿಲ್ಲ. "ಮುಂದೊಂದು ದಿನ ಈ ದುರಂತ ಜನರಿಗೆ ಅರಿವಾದಾಗ, ಇವರು ಪ್ರತಿಭಟಿಸಿದ್ದರು ಎಂಬ ನೆಮ್ಮದಿಯಾದರೂ ನಮಗಿರಲಿ" – ಎಂದು ಕುಸುಮಕ್ಕ ನೊಂದು ನುಡಿದಿದ್ದರು. ಕೆಲವೇ ದಿನಗಳಲ್ಲಿ ಅವರು ರಸ್ತೆ ಅಪಘಾತದಲ್ಲಿ ಕಣ್ಮುಚ್ಚಿದರು. ಕರ್ನಾಟಕದ ಮಹಿಳಾ ಅಸ್ಮಿತೆಯು 'ಸಾಲುಮರದ ತಿಮ್ಮಕ್ಕನ' ಪ್ರಸ್ತಾಪವಿಲ್ಲದೆ ಮುನ್ನಡೆಯಲಾರದು. ಪದ್ಮಶ್ರೀ ಪುರಸ್ಕಾರವನ್ನು ಪಡೆದ ತಿಮ್ಮಕ್ಕ, ಬಡತನವನ್ನು, ವೈಯ್ಯಕ್ತಿಕ ಬದುಕಿನಲ್ಲಿ ಅನುಭವಿಸಿದ ಪ್ರೀತಿಯ ಕೊರತೆಯನ್ನು, ಅನಕ್ಷರತೆಯನ್ನು, ಮಕ್ಕಳಿಲ್ಲದ ಒಂಟಿತನವನ್ನು ಒಡನಾಡಿಯಾಗಿ ಕಟ್ಟಿಕೊಂಡೇ ಇದ್ದವಳು. ಕೆಳವರ್ಗದ ಈ ಹೆಣ್ಣುಮಗಳು ಹೆದ್ದಾರಿಗುಂಟ ನೂರಾರು ಮರಗಳನ್ನು ಬೆಳೆಸಿದಳು. ಪ್ರಶಸ್ತಿ ಪುರಸ್ಕಾರಗಳಿಗೆ ಕೊಬ್ಬಿದವಳಲ್ಲ. ವೃದ್ಧಾಪ್ಯದ ತಿಮ್ಮಕ್ಕನಿಗೆ 'ಏನು ಬೇಕು?' ಎಂದು ಕೇಳಿದರೆ 'ನಮ್ಮೂರಿಗೆ ಹೆರಿಗೆ ಆಸ್ಪತ್ರೆಯಿಲ್ಲ, ಹೆಣ್ಮಕ್ಕಳಿಗೆ ತೊಂದರೆಯಾಗುತ್ತಿದೆ. ಒಂದಾದರೂ ಎಲ್ಲಾ ಸೌಕರ್ಯವಿರೋ ಹೆರಿಗೆ ಆಸ್ಪತ್ರೆ ಬೇಕು ಕಣಪ್ಪ' ಎಂದು ಹೇಳುವವಳು. ಇಂತಹದೇ ವ್ಯಕ್ತಿತ್ವದ ಜನಪದ ಹಾಡುಗಾರ್ತಿ ಹಾಲಕ್ಕಿ ಸುಕ್ರಜ್ಜಿ, ರಂಗಕಲಾವಿದೆ ಸುಭದ್ರಮ್ಮ ಮನ್ಸೂರ, ರಂಗನಟಿ – ಹಾಡುನಟಿ ಬಿ. ಜಯಶ್ರೀ, ಹೀಗೆ ಅಗಣಿತ ಚಹರೆಗಳು ನೆನಪಾಗುತ್ತವೆ.

೧೯೮೫ರ ದಶಕದಲ್ಲಿ ಜಗತ್ತಿನಾದ್ಯಂತ ಮುಂದುವರಿದ ರಾಷ್ಟ್ರಗಳಲ್ಲಿ ಮಹಿಳಾ ವಾದವು ಸಮಾನ ಹಕ್ಕು ಬಾಧ್ಯತೆಗಳಿಗಾಗಿ ಧ್ವನಿಯೆತ್ತಿದ ಕಾಲದಲ್ಲಿ, ಭಾರತದ ಸರ್ಕಾರಗಳು ಇಲ್ಲಿಯ ಮಹಿಳಾ ದನಿಯನ್ನು ಉಪೇಕ್ಷಿಸುವಂತಿರಲಿಲ್ಲ. Women In Development (WID)ಗೆ ಸ್ಪಂದಿಸಲೇಬೇಕಾಯಿತು. ರಾಷ್ಟ್ರದ ಪ್ರಗತಿಗಾಗಿ ಮಹಿಳೆ – ಎಂಬ ಕಲ್ಪನೆಯು ಕಲ್ಯಾಣ ಕಾರ್ಯಕ್ರಮಗಳಿಗಿಂತ ಅಭಿವೃದ್ಧಿಯ ನೆಲೆಯ ಕಡೆ ವಿಸ್ತರಿಸಿತು. ೧೯೯೩ರ ರಾಷ್ಟ್ರೀಯ ಮಹಿಳಾ ಕೋಶವು – ಲಿಂಗಾಧಾರಿತ ಮಾನವ ಸಂಪನ್ಮೂಲದ ಅಭಿವೃದ್ಧಿಯ ಅನಿವಾರ್ಯತೆಯನ್ನು ಘೋಷಿಸಿತು. ೨೦೦೧ನ್ನು ಮಹಿಳಾ ಸಬಲೀಕರಣ ವರ್ಷವೆಂದು ಸಾರಲಾಯಿತು. ರಾಜ್ಯದಲ್ಲಿಯೂ ಇಂತಹ ಹಲವಾರು ಕಾರ್ಯಕ್ರಮಗಳು ಜರುಗಿದವು. ಮಹಿಳೆಯರ ಆಂತರಿಕ ವಲಸೆ ತಡೆ, ನೆಹರೂ ರೋಜಗಾರ್ ಯೋಜನೆ, ಪ್ರಧಾನಮಂತ್ರಿ ರೋಜಗಾರ್ ಯೋಜನೆಗಳ ಅನ್ವಯ, ದೇಶದಲ್ಲೇ ಮೊದಲ ಬಾರಿಗೆ ಮಹಿಳೆಯರಿಗಾಗಿ ಅಂತರ್ ವಲಯಗಳ ವಿನಿಯೋಗ ಯೋಜನೆ, ಹೀಗೆ ಅಸಂಖ್ಯ ಯೋಜನೆಗಳನ್ನು ಜಾರಿಗೆ ತರಲಾಗಿದೆ.

ಇದರೊಂದಿಗೆ ಸರ್ಕಾರೇತರ ಸಂಘಟನೆಗಳಾದ ಎನ್.ಜಿ.ಓ.ಗಳು ಮಹಿಳೆಯರ ಹಿತಕ್ಕಾಗಿ ದುಡಿಯುತ್ತಿರುವುದು ಮೇಲ್ನೋಟಕ್ಕೆ ಕಾಣುತ್ತದೆ. ಆದರೆ ಬಡ–ಅಸಹಾಯಕ ಜನರನ್ನು ಸಂಘಟಿಸಿ, ಅವರ ಕೌಶಲ್ಯ–ಶ್ರಮಗಳನ್ನು ಬಂಡವಾಳ ಮಾಡಿಕೊಂಡು ಅದನ್ನೇ ಒಂದು ಉದ್ಯಮವಾಗಿಸಿ; ಯಥಾಪ್ರಕಾರ ಎಲ್ಲ ಉದ್ಯಮಗಳಲ್ಲಿಯಂತೇ ಶ್ರಮಿಕರಿಗೆ ಕಡಿಮೆ ಲಾಭವನ್ನು ಹಂಚುವ ಸ್ವಸಹಾಯ ಸಂಸ್ಥೆಗಳೂ ಎನ್.ಜಿ.ಓ.ಗಳೂ ಇವೆ. ಇವು ಜಾಗತೀಕರಣ ಪ್ರಕ್ರಿಯೆಯಿಂದ ಬೀದಿಪಾಲಾದ ಬಡಜನರ ಅಸಹಾಯಕ ಕ್ರೋಧವು ಹೊರಹೊಮ್ಮದಂತೆ, ವ್ಯವಸ್ಥೆಯನ್ನವರು ಪ್ರಶ್ನಿಸದಂತೆ ಪ್ರಭುತ್ವ ಮತ್ತು ಬಂಡವಾಳವಾದದ ಸುರಕ್ಷತೆಯನ್ನು ಕಾಪಾಡುವ ಬಗೆಯೂ ಆಗಿದೆಯೇ ಎನ್ನುವ ವಿಶ್ಲೇಷಣೆಯೂ ಇದೆ. ಮುಳ್ಳನ್ನು ಮುಳ್ಳಿನಿಂದಲೇ ತೆಗೆವ ಅನಿವಾರ್ಯತೆಯಂತೆ ಕೆಲವು ಎನ್.ಜಿ.ಓ.ಗಳು ಮಹಿಳಾ ಪರವಾಗಿ ಅತ್ಯಂತ ನಿರ್ಣಾಯಕವಾಗಿ ಶ್ರಮಿಸುತ್ತಿವೆ. ಇವುಗಳಲ್ಲಿ ಅಥಣಿಯ ವಿಮೋಚನಾ ಸಂಸ್ಥೆಯ ಪಾತ್ರ ಅನನ್ಯವಾದದ್ದು. ಹಿಂದೆ ಬೆಳಗಾವಿಯಲ್ಲಿದ್ದ ದೇವರಾಯ ಇಂಗಳಗಿಯವರು ಮಹಿಳಾ ವಿಮೋಚನೆಯ ಹಲವು ಪ್ರಯತ್ನಗಳನ್ನು ಮಾಡಿದ್ದು ಚರಿತ್ರೆಯಲ್ಲಿ ಅರೆಬರೆಯಾಗಿ ಉಳಿದಿದೆ. ಈಗ ೧೯೪೬ ಡಿಸೆಂಬರ್‌ನಲ್ಲಿ ಬೆಳಗಾವಿ ಜಿಲ್ಲೆ ಮಲ್ಲಾಬಾದ್‌ನ ಅತ್ಯಂತ ಶ್ರೀಮಂತ ಕುಟುಂಬದಲ್ಲಿ ಜನಿಸಿದ ಬಿ.ಎಲ್. ಪಾಟೀಲರು, ಇಂದು ಕರ್ನಾಟಕದಲ್ಲಿ ನಿಜವಾದ ಮಹಿಳಾ ಪರ ನಿಲುವಿನಿಂದ ದುಡಿಯುತ್ತಿರುವ ಮಹನೀಯರಾಗಿದ್ದಾರೆ. ಬಸವಣ್ಣ, ರಾಮಕೃಷ್ಣ ಪರಮಹಂಸ, ವಿವೇಕಾನಂದರ ವಿಚಾರಧಾರೆಗಳಿಂದ ಗಾಢ ಪ್ರಭಾವಕ್ಕೆ ಒಳಗಾದ ಪ್ರಸಿದ್ಧ ವಕೀಲರಿವರು. ಚಿಂತಕ ಜೋಗನ್ ಶಂಕರ ಅವರ ಪ್ರೇರಣೆ ಪಾಟೀಲರ ಬಾಳಿಗೆ ಮಹತ್ವದ ತಿರುವನ್ನು ಕೊಟ್ಟಿತು. "ಕರ್ನಾಟಕದ ನಿಮ್ಮ ಅಥಣಿ ತಾಲೂಕಿನಲ್ಲಿ ಅತಿಹೆಚ್ಚಿನ ಸಂಖ್ಯೆಯ ದೇವದಾಸಿಯರಿದ್ದಾರೆ. ಮುಂಬೈ ಕೆಂಪುದೀಪದ ಪ್ರದೇಶದಲ್ಲಿ ಪ್ರತಿ ನಾಲ್ವರಲ್ಲಿ ಒಬ್ಬಳು ನಿಮ್ಮ ತಾಲೂಕಿನವಳೇ, ನಿಮಗೆ ನಾಚಿಕೆ ಅನ್ನಿಸುವುದಿಲ್ಲವೇ?" ಎಂಬ ಜೋಗನ್ ಶಂಕರ ಅವರ ಮಾತು ದೀಕ್ಷೆಯಾಯಿತು. ೧೯೮೫ರಲ್ಲಿ ದೇವದಾಸಿ ವಿಮೋಚನಾ ಪುನರ್ವಸತಿ ಸಂಘ ಸ್ಥಾಪನೆಯಾಯಿತು. 'ಕಪಾರ್ಟ' ಎಂಬ ಎನ್.ಜಿ.ಓ. ಸಂಸ್ಥೆಯ ನೆರವಿನೊಂದಿಗೆ ಈ ಬಹುಸವಾಲಿನ ಕಾಯಕವನ್ನು ನಿಭಾಯಿಸತೊಡಗಿದರು. ಸ್ವತಃ ದೇವದಾಸಿ ಸಮುದಾಯಗಳ ಅಸಹಕಾರ, ದಲಿತ ವರ್ಗದ ಪ್ರತಿರೋಧದ ನಡುವೆಯೂ, ಪ್ರಾಣಭಯ, ತೇಜೋವಧೆ, ಚಾರಿತ್ರ್ಯಹರಣ, ಕೌಟುಂಬಿಕ ನೆಮ್ಮದಿಯ ಅಪಹರಣಗಳಲ್ಲಿಯೂ ಧೃತಿಗೆಡದೆ ಇದೊಂದು ವ್ರತವೆನ್ನುವಂತೆ ತಮ್ಮನ್ನು ತೆತ್ತುಕೊಂಡರು. ಪಾಟೀಲರ ಧರ್ಮಪತ್ನಿ ಶಾಂತಮ್ಮನವರು ತಮ್ಮ ಹೆಸರಿನಲ್ಲಿದ್ದ ಎಂಟು ಎಕರೆ ಭೂಮಿಯನ್ನು ವಿಮೋಚನಾ ಶಾಲೆಗಾಗಿ ದಾನ ನೀಡಿದರು. ದೇಶದಲ್ಲಿಯೇ ದೇವದಾಸಿ ಮಕ್ಕಳ ಶಿಕ್ಷಣದ ಕಾಳಜಿಗಾಗಿರುವ ಏಕೈಕ ಶಿಕ್ಷಣ ಸಂಸ್ಥೆಯಿದು. ೧೯೯೭ರಲ್ಲಿಯೇ ರಾಷ್ಟ್ರಪತಿಗಳಿಂದ ಪ್ರಶಸ್ತಿ ಪಡೆವ ಮಟ್ಟಕ್ಕೆ ಬೆಳೆದಿದೆ. ಕೆಳಜಾತಿ ಕೆಳವರ್ಗಗಳಿಂದ ಕಿತ್ತುಕೊಂಡ ಹಕ್ಕುಗಳನ್ನು ಅವರಿಗೆ ಮರಳಿ ನೀಡುವುದೇ ಅಭಿವೃದ್ಧಿ ಎಂಬ ಖಚಿತ ತಿಳುವಳಿಕೆ ಪಾಟೀಲರದು. ಅತ್ಯಂತ ಮಹತ್ತರವಾದ ಅದರಲ್ಲೂ, ಸಮಾಜದ ಕಟ್ಟಕಡೆಯ ಅಂಚಿನ ಮಹಿಳೆಯರ ಪರವಾದ ಕಾಯಕದಲ್ಲಿ ತೊಡಗಿಸಿಕೊಂಡಾಗ,

ಸಮಾಜದಿಂದ ಅಶ್ಲೀಲ-ಅಸಭ್ಯ ಮಾತುಗಳನ್ನು ಕೇಳಬೇಕಾಗುವುದು ಅನಿವಾರ್ಯ. ತಾವು ಅಧೀರರಾದಾಗೆಲ್ಲ ಇಳಕಲ್‌ದ ಮಹಾಂತಸ್ವಾಮೀಜಿಯವರು ಮತ್ತು ಗದಗಿನ ತೋಂಟದಾರ್ಯ ಸ್ವಾಮೀಜಿಯವರು ತುಂಬಿದ ಧೈರ್ಯವನ್ನು ನೆನೆಯುತ್ತಾರೆ. ೧೯೯೨ರಲ್ಲಿ ದೇಶದಲ್ಲಿಯೇ ಮೊದಲ ಬಾರಿಗೆ 'ವಿಮೋಚನಾ ಸಹಕಾರ ಸಂಘ'ವನ್ನು ಸ್ಥಾಪಿಸಿ, ದೇವದಾಸಿಯರ ಕೌಶಲ್ಯಾಭಿವೃದ್ಧಿ ಮತ್ತು ತತ್ಸಂಬಂಧಿ ಮಾರುಕಟ್ಟೆಯ ಯೋಜನೆಯನ್ನು ರೂಪಿಸಿದರು. ದೇವದಾಸಿಯರನ್ನು ಪರಿವರ್ತಿಸುವುದು ಅದೆಷ್ಟು ಸವಾಲಿನದೆಂಬ ಅರಿವಿರುವ ಪಾಟೀಲರು ಹೆಜ್ಜೆ ಹೆಜ್ಜೆಗೂ ಸೋಲುಂಡೂ ಗಟ್ಟಿಯಾದವರು. ಮಹಿಳಾ ಚಳುವಳಿಗಳು ಅಂದಿನಿಂದ ಇಂದಿನವರೆಗೂ ಮಧ್ಯಮವರ್ಗದ ಕೇಂದ್ರದಲ್ಲಿಯೇ ಯೋಚಿಸುತ್ತಿವೆ. ತಳಸಮುದಾಯದ ಮಹಿಳೆಯರ ಅಂಚಿನವರೆಗೂ ತಲುಪಿಲ್ಲ – ಎಂಬ ಅಭಿಪ್ರಾಯ ಪಾಟೀಲರದು. ಜಾತಿ-ಧರ್ಮ ಆಧಾರಿತವಾಗಿ ಮಹಿಳೆಯರನ್ನು ಒಡೆದು ಬಳಸಿಕೊಳ್ಳುವ ತಂತ್ರಗಾರಿಕೆಯನ್ನು ಪಾಟೀಲರು ವಿರೋಧಿಸುತ್ತಾರೆ. ಸಮಾಜ ಸುಧಾರಣೆ ಕೂಡ ರಾಜಕೀಯ ಅಧಿಕಾರವನ್ನು ಬಳಸಿಕೊಳ್ಳುವ ಮಾರ್ಗವಾಗಿರುವ ಹಲವರಿಗೆ, ಅಲಕ್ಷಿತ ಸಮುದಾಯದ ಮಹಿಳೆಯರ ಸಮಸ್ಯೆ ಮುಖ್ಯವೆನಿಸುವುದಿಲ್ಲ. ಆದರೆ, ಪಾಟೀಲರು ದೇವದಾಸಿಯರ ಮತ್ತು ಅವರ ಮಕ್ಕಳ ಪುನರ್ವಸತಿಗಾಗಿ ನಿಜವಾದ ಬದ್ಧತೆಯಿಂದ ಕಾರ್ಯನಿರ್ವಹಿಸುತ್ತಿರುವ ಅಪರೂಪದವರು.

ದಲಿತ ಮಹಿಳೆಯರು ತಮ್ಮ ವರ್ಗ ನೆಲೆಯಿಂದಲೂ ಸಮಾಜದ ಕಟ್ಟಕಡೆಯವರಾಗಿದ್ದು, ತಾವು ಹೊತ್ತಿರುವ ಭಾರದಿಂದ ತತ್ತರಿಸುತ್ತಿದ್ದಾರೆ – ಎಂಬ ಸ್ಪಷ್ಟತೆಯನ್ನು ಇಟ್ಟುಕೊಂಡು ಮಹಿಳಾ ಪರವಾಗಿ ದುಡಿಯುತ್ತಿರುವವರಲ್ಲಿ ವುಮೆನ್ಸ್ ವಾಯ್ಸ್‌ನ ರೂಥ್ ಮನೋರಮಾ, ಪೌರಕಾರ್ಮಿಕ ಮಹಿಳಾ ಸಂಘಟನೆಯ ದು. ಸರಸ್ವತಿ, ಪ್ರಜಾರಾಜ್ಯ ವೇದಿಕೆಯ ವೀಣಾ, ಮಾಳ್ಗಿ ಮಂಜುಳ ಇವರೆಲ್ಲ ಮುಖ್ಯರಾಗುತ್ತಾರೆ. ಕಳೆದೆರಡು ದಶಕಗಳಿಂದ ಮಹಿಳಾ ವಿಷಯವು ತೃತೀಯಲಿಂಗಿಗಳ ವಿಷಯವೂ ಆಗಿ ವಿಸ್ತರಿಸಿಕೊಳ್ಳುತ್ತಿದೆ. ತನ್ನ ಗ್ರಹಿಕೆಯ ನೆಲೆಯನ್ನು ಎತ್ತರಿಸಿಕೊಳ್ಳುತ್ತಿದೆ. ಭಾರತದಾದ್ಯಂತ ಹಾಗೆಯೇ ಕರ್ನಾಟಕದಲ್ಲಿಯೂ ಭಾರತದ ಮಹಿಳಾ ಚಳುವಳಿಯಲ್ಲಿ ಹಲವು ಸೈದ್ಧಾಂತಿಕ ಮಾರ್ಗಗಳಿವೆ, ಕ್ರಿಯಾತ್ಮಕ ವಿಧಾನಗಳಿವೆ. ಆದರೆ ಅವುಗಳ ಕುರಿತು ಅತ್ಯಂತ ಕಡಿಮೆ ದಾಖಲೆಗಳಿವೆ. ಗಂಭೀರವಾದ ಸಂಶೋಧನೆಯಂತೂ ಇನ್ನೂ ಕಡಿಮೆ. ಎಷ್ಟೋ ಸಂದರ್ಭಗಳಲ್ಲಿ ಮಹಿಳಾ ಪ್ರಶ್ನೆಯನ್ನು ಮುಂದಿಟ್ಟುಕೊಂಡು ನಡೆವ ಹೋರಾಟಕ್ಕಿಂತಲೂ, ಸಾಮಾನ್ಯ ಸಂಗತಿಗಳಿಗೆ ಮಹಿಳಾ ಪ್ರಜ್ಞೆ ಸ್ಪಂದಿಸುವಾಗ ಎದುರಿಸಿದ ಸಂಘರ್ಷ ಹೆಚ್ಚಿನದು. ಈ ಮನಸ್ಥಿತಿಗೊಂದು ಇತಿಹಾಸವೇ ಇದೆ. ೬೦ರ ದಶಕದಲ್ಲಿ ಭಾರತ ಮತ್ತು ಚೀನಾ ದೇಶದ ಸಂಬಂಧಗಳು ಬಿಗಡಾಯಿಸಿದ ಸಂದರ್ಭದಲ್ಲಿ – ಶಾಂತಿ ಒಪ್ಪಂದವನ್ನು ಪ್ರತಿಪಾದಿಸಿದ ಮಹಿಳೆಯರನ್ನು ಸೆರೆಯಲ್ಲಿ ದೂಡಿದ್ದನ್ನು ಗಮನಿಸಬೇಕು. ಇದೇ ಪರಿಸ್ಥಿತಿ ಇಂದಿಗೂ ಇದೆ. ಭಾರತ ಮತ್ತು ಪಾಕಿಸ್ತಾನದ ಸಂಬಂಧವನ್ನು ಶಾಂತಗೊಳಿಸಬೇಕು ಎನ್ನುವ ಸದಭಿಪ್ರಾಯ ಎರಡೂ ದೇಶಗಳ ಪ್ರಗತಿಪರ ಚಿಂತನೆಯ ಮಹಿಳೆಯರದು. ಆದರೆ ವಿಜೃಂಭಿಸುತ್ತಿರುವ ಕೋಮುವಾದಿ ಮನಸ್ಥಿತಿಗಳಿಗೆ ಅವರು ಅಪರಾಧಿಗಳಾಗಿ ಕಾಣುತ್ತಾರೆ.

ಕರ್ನಾಟಕದಲ್ಲಿ ಮಹಿಳಾ ಚಳುವಳಿಯು ಸ್ಥಳೀಯವಾದ ನೂರೊಂದು ಪ್ರತಿಕ್ರಿಯೆಗಳ ಮೂಲಕ, ಸೈದ್ಧಾಂತಿಕ ವಿಚಾರ ವಿನಿಯಮಯದ ಮೂಲಕ, ಅಕಾಡೆಮಿಕ್ ಚಿಂತನೆಗಳ ಮೂಲಕ, ಕ್ರಿಯಾತ್ಮಕ ಹೋರಾಟಗಳ ಮೂಲಕ ಬೆಳೆದು ಬಂದಿದೆ. ಈ ಎಲ್ಲವುಗಳೊಂದಿಗೆ ಮಹಿಳಾ ಪತ್ರಿಕೆಗಳ ಕೊಡುಗೆ ಗಣನೀಯವಾದದ್ದು. 'ವಿಮೋಚನಾ', 'ಮಾನಸ', 'ಅಚಲ' ಪತ್ರಿಕೆಗಳು ಪ್ರಮುಖವಾದವು. ಅಂದಿನ ಕಾಲದ ಮಹಿಳಾ ಸಂಕಟಗಳ ಕುರಿತು ಲೇಖನಗಳು, ಸಂವಾದಗಳು, ವಿಶ್ಲೇಷಣೆಗಳನ್ನು ಪ್ರಕಟಿಸುತ್ತ ಲಿಂಗಸೂಕ್ಷ್ಮತೆಯನ್ನು ಅನುಸಂಧಾನಗೊಳಿಸುವಲ್ಲಿ ಯಶಸ್ವಿಯಾಗಿವೆ. ಪತ್ರಿಕೆಗಳು ಸಂಘಟನೆಗಳ ಸ್ವರೂಪದಲ್ಲಿ ಕಾರ್ಯನಿರ್ವಹಿಸಿವೆ. ಸಾಮಾಜಿಕ ಅನುಸಂಧಾನ, ಪ್ರಕಟಣೆ, ಶೋಧ ಮತ್ತು ಪ್ರತಿರೋಧ, ಮಹಿಳಾ ಹಕ್ಕೊತ್ತಾಯಗಳವರೆಗೆ ಪತ್ರಿಕೆಗಳ ಕಾರ್ಯ ಸೂಚಿಗಳಿದ್ದವು. ಅತ್ಯಾಚಾರ-ದೌರ್ಜನ್ಯ ಪ್ರಕರಣಗಳು, ಗಾರ್ಮೆಂಟ್ ಮತ್ತು ಅಸಂಘಟಿತ ವಲಯದ ಮಹಿಳೆಯರ ಸಂಘಟನೆ, ಪೌರ ಕಾರ್ಮಿಕರ ಸಂಘಟನೆ, ಧಾರ್ಮಿಕ ಕೋಮುವಾದದ ವಿರೋಧ ಹೀಗೆ ಜನಮಾನಸದಲ್ಲಿ ಅಚ್ಚಳಿಯದ ಅಭಿಪ್ರಾಯ ರೂಪಿಸುವಲ್ಲಿ ಈ ಪತ್ರಿಕೆಗಳ ಪಾತ್ರ ಮಹತ್ವದ್ದು. ೧೯೮೦ರ ದಶಕದಲ್ಲಿ ಕರ್ನಾಟಕದಲ್ಲಿ ನಡೆದ ಎರಡು ಅಹಿತಕಾರಿ ಘಟನೆಗಳು ಮಹಿಳಾ ಸಂವೇದನಾಶೀಲತೆಯನ್ನು ಸಾಮಾಜಿಕ ಆದ್ಯತೆಯಾಗಿಸಿದವು. ಕುದುರೆಮೋತಿ ಮಠದ ಸ್ವಾಮಿಯು ತನ್ನ ಕಾಮನೆಗೆ ಸೊಪ್ಪು ಹಾಕದ ಕೆಳಜಾತಿಯ ಹೆಣ್ಣುಮಗಳನ್ನು ಊರಲ್ಲಿ ಬೆತ್ತಲೆ ಮೆರವಣಿಗೆ ಮಾಡಿಸಿದ ಘಟನೆ ಮತ್ತು ಧಾರವಾಡದಲ್ಲಿ ಹಾಸ್ಟೆಲ್ ವಾರ್ಡನ್ ರಮಾಬಂಢಾರಿ ಹುಡುಗಿಯರನ್ನು ರಾಜಕೀಯ ಮುಖಂಡರುಗಳಿಗೆ ಬಳಕೆಯ ವಸ್ತುವಾಗಿಸುತ್ತಿದ್ದ ಪ್ರಕರಣಗಳು ಸಂವೇದನಾಶೀಲರು, ಬರಹಗಾರರು, ಪ್ರಗತಿಪರರು, ವಿದ್ಯಾರ್ಥಿಗಳು ಬೀದಿಗಿಳಿದು ಬಹುದೊಡ್ಡ ಪ್ರಮಾಣದ ಚಳುವಳಿಯನ್ನು ಹುಟ್ಟುಹಾಕಲು ಕಾರಣವಾಯಿತು. ಇದರ ಪರಿಣಾಮವಾಗಿ ಮಹಿಳಾ ವಿಷಯವು ಆಧುನಿಕ ಪ್ರಜ್ಞೆಯ ಅನಿವಾರ್ಯವಾದ ಭಾಗವಾಯಿತು. ಆದರೀಗ ಮುಕ್ತ ಬಂಡವಾಳವಾದವು ಸಾಮಾಜಿಕ ಭ್ರಷ್ಟತೆಯನ್ನು ಬೆಳೆಸುತ್ತಿರುವಾಗ ಮಹಿಳಾ ದೌರ್ಜನ್ಯದ ಪ್ರಮಾಣ ಅಸಹನೀಯ ಮಟ್ಟದಲ್ಲಿ ಏರಿಕೆಯಾಗುತ್ತಿದ್ದರೂ, ತೀಕ್ಷ್ಣವಾದ ಮತ್ತು ವ್ಯವಸ್ಥಿತವಾದ ಪ್ರತಿರೋಧವನ್ನು ರೂಪಿಸಲಾಗುತ್ತಿಲ್ಲ ಎಂಬ ತಳಮಳವಿದೆ.

**ಸಮಾರೋಪ**

ಇಷ್ಟೆಲ್ಲ ಪ್ರಯತ್ನಗಳ, ಪಲ್ಲಟಗಳ, ನಂತರದಲ್ಲಿ ಸಾಮಾಜಿಕ ದೃಷ್ಟಿಕೋನವು ಲಿಂಗಸೂಕ್ಷ್ಮ ಮೃದುತ್ವವನ್ನು ಪಡೆದಿರಬಹುದೆಂದು ಹೇಳಲಾಗುತ್ತಿಲ್ಲ. ಮಹಿಳೆಯರ ಮೇಲಿನ ದೌರ್ಜನ್ಯ ಅನ್ಯಾಯಗಳು ಕಡಿಮೆಯಾಗಿಲ್ಲ. ಸ್ವರೂಪದಲ್ಲಿ ವ್ಯತ್ಯಾಸಗೊಂಡಿವೆ ಅಷ್ಟೇ. ಸ್ತ್ರೀ-ಪುರುಷ ಅನುಪಾತದ ಅಸಮತೋಲನ, ಹೆಚ್ಚುತ್ತಿರುವ ಶಿಶುಮರಣ-ತಾಯ್ಮರಣ, ಮನುಷ್ಯ ಬದುಕಿನ ಘನತೆಯನ್ನೇ ಅಣಕ ಮಾಡುವಂಥ ಅತ್ಯಾಚಾರಗಳು, ಮಹಿಳೆಯ ಶಿಕ್ಷಣ ಪ್ರಮಾಣದಲ್ಲಿ ಹೆಚ್ಚಳ ಮತ್ತು ಗುಣಮಟ್ಟದಲ್ಲಿ ಕುಸಿತ, ಮಹಿಳಾ ಉದ್ಯೋಗಿಗಳ ಸಂಖ್ಯೆಯಲ್ಲಿ ಹೆಚ್ಚಳ ಮತ್ತು ಅಧಿಕಾರ ಸ್ಥಾನಗಳಲ್ಲಿ ಕುಂಠಿತ, ಜಾಗತೀಕರಣದ ಪರಿಣಾಮವಾಗಿ ಕೌಶಲ್ಯಾಧಾರಿತ ಹಾಗೂ ಶ್ರಮ ಆಧಾರಿತವಾದ ಮಹಿಳಾ ಉದ್ಯೋಗ ವಲಯವು ಸಂಕುಚಿತಗೊಳ್ಳುತ್ತಿರುವುದು, ಬಂಡವಾಳವಾದವು ಮಹಿಳಾ ಸ್ವಾತಂತ್ರ್ಯ ಮತ್ತು ಸಮಾನತೆಯ ಸ್ಪೇಸನ್ನು ತನ್ನ ಮಾರುಕಟ್ಟೆಯಾಗಿ ಬಳಸುತ್ತ, ಮಹಿಳಾ ಪ್ರಜ್ಞೆಯನ್ನು ದಿಕ್ಕುಗೆಡಿಸುತ್ತಿರುವುದು, ಮಹಿಳಾ ದುಡಿಮೆಯಲ್ಲಿ ಬಹುದೊಡ್ಡ ವಲಯವೊಂದು ಮನರಂಜನಾ ಮಾಧ್ಯಮ ಹಾಗೂ ಲೈಂಗಿಕ ಕಾರ್ಯಕರ್ತೆಯರದಾಗಿರುವುದು; ಅಧಿಕಾರ ರಾಜಕಾರಣ ಮತ್ತು ಧಾರ್ಮಿಕ ಮೂಲಭೂತವಾದಗಳು ಮಹಿಳೆಯ ಪ್ರಜ್ಞೆಯನ್ನು ತನ್ನ ಸರಕಾಗಿ ಮಾರ್ಪಡಿಸುತ್ತಿರುವುದು... ಹೀಗೆ ಮಹಿಳಾ ವಿಷಯಗಳು ಆಳದಾಳದ ಸಂಕೀರ್ಣದ ಪದರುಗಳೊಳಗೆ ತಳಮಳಿಸುತ್ತಿರುವ ಸಂದರ್ಭವಿದು. ಮಹಿಳಾ ಪ್ರಜ್ಞೆ ತುಂಬ ಎಚ್ಚರಿಕೆಯ ಹೆಜ್ಜೆಗಳನ್ನೂರಬೇಕಿದೆ.

ಈ ಸಂಕ್ರಮಣ ಸಾಮಾಜಿಕ-ಸಾಂಸ್ಕೃತಿಕ ವಿದ್ಯಮಾನಗಳಲ್ಲಿ ಪ್ರತಿಯೊಂದು ನಾಡು-ನುಡಿಯಲ್ಲಿ ಮಹಿಳಾ ಪ್ರಶ್ನೆಯು ನಿರ್ವಚನೆಗೊಂಡ ವಿಧಾನ ಮತ್ತು ಪರಂಪರೆಯ ನಿರ್ಮಿತಿಯ ಪ್ರಯತ್ನಗಳನ್ನು ಶೋಧಿಸುವುದು ಮಹತ್ವದ್ದೆನಿಸುತ್ತವೆ. ಹಲವು ಭಾಷೆ ಮತ್ತು ಸಂಸ್ಕೃತಿ ಚಹರೆಯನ್ನು ಕಾಣುವ ಕೂಡು ಓದು ಮಹಿಳಾ ಚರಿತ್ರೆಯ ಅರಿವು ಮಾತ್ರವಲ್ಲ, ವರ್ತಮಾನದ ಕಣ್ಣೋಟವೂ ಆಗಬಹುದು.

(ಮುಗಿಯಿತು)

**ಡಾ॥ ವಿನಯಾ ಒಕ್ಕುಂದ**
'ನೆಮ್ಮದಿ', ನಂ. ೧೨೪, ಸಿ.ಐ.ಟಿ.ಬಿ. ಕಾಲೋನಿ
ಶ್ರೀನಗರ, ಧಾರವಾಡ – ೫೮೦ ೦೦೩

## ಬದುಕು

ಹೊರಳು ದಾರಿಯಲಿ
ಯಾರೋ ಎಸೆದ
ಗಾಜಿನ ತುಂಡು,
ಕಲ್ಲಿನ ರಾಶಿಗಳು,
ಕಾಲಿಗೆ ಅಂಟದಂತೆ
ಸಾಗಬೇಕು ನಾವು
ಕನಸು ಗುಲಾಬಿ
ಹೂಗಳ ರಾಶಿಯೊಂದಿಗೆ!

**ಶೋಭಾ ಪ್ರಮೋದ್**
ರಾಯ್‌ಗಡ, ಮಹಾರಾಷ್ಟ್ರ



## ಚೀಣಾ ಗಣರಾಜ್ಯಕ್ಕೆ ೭೦ರ ಸಂಭ್ರಮ

**ಚೀ**ಣಾ ಜನತಾ ಗಣರಾಜ್ಯ ಸ್ಥಾಪನೆಯಾಗಿ ಅಕ್ಟೋಬರ್ ೧ಕ್ಕೆ ಎಪ್ಪತ್ತು ವರ್ಷ. ಸುದೀರ್ಘ ಹೋರಾಟದ ನಂತರ ಮಾವೋ ತ್ಸೆ ತುಂಗ್ ನೇತೃತ್ವದಲ್ಲಿ ಸ್ಥಾಪನೆಯಾದ ಚೀಣಾ ಹಲವು ಏರಿಳಿತಗಳನ್ನು ಕಂಡು ಮುನ್ನಡೆದಿದೆ. ಭಾರತಕ್ಕಿಂತ ಸ್ವಲ್ಪ ಹೆಚ್ಚು ಜನಸಂಖ್ಯೆಯುಳ್ಳ ಚೀಣಾ ಇಂದು ಪ್ರಪಂಚದಲ್ಲಿ ಪ್ರಬಲ ರಾಷ್ಟ್ರಗಳಲ್ಲಿ ಒಂದಾಗಿದೆ. ೨೦೪೯ರ ವೇಳೆಗೆ ಸಮಾಜವಾದಿ ರಾಷ್ಟ್ರವಾಗುವ ಗುರಿ ಹೊಂದಿರುವ ಚೀಣಾಂ ಎಪ್ಪತ್ತು ವರ್ಷಗಳಲ್ಲಿ ಆರ್ಥಿಕವಾಗಿ ಸೈನಿಕವಾಗಿ ಏಷಿಯಾ ಖಂಡದಲ್ಲಿ ಮುನ್ನಡೆದಿರುವ ದೇಶ. ಅಮೆರಿಕದೊಂದಿಗೆ ವಾಣಿಜ್ಯ ಸಮರ, ಹಾಂಗ್‌ಕಾಂಗ್‌ನಲ್ಲಿ ಅಸ್ಥಿರತೆ, ಇನ್ನೂ ವಿಮೋಚನೆಯಾಗದ ಟೈವಾನ್, ಆರ್ಥಿಕ ಕುಸಿತ, ಹೀಗೆ ಹತ್ತಾರು ಸಮಸ್ಯೆಗಳಿದ್ದಾಗ್ಯೂ ತನ್ನ ಗುರಿ ಮುಟ್ಟುವ ವಿಶ್ವಾಸ ಹೊಂದಿರುವ ದೇಶ ಚೀಣಾ. 'ನಮ್ಮ ಮಹಾನ್ ರಾಷ್ಟ್ರವನ್ನು, ಅದರ ಮುನ್ನಡೆಯನ್ನು ತಡೆಯಲು ಯಾವ ಶಕ್ತಿಗೂ ಸಾಧ್ಯವಿಲ್ಲ' ಎಂದು ಎಪ್ಪತ್ತರ ಸಂಭ್ರಮದ ಮುನ್ನ ಚೀಣಾದ ಅಧ್ಯಕ್ಷ ಕ್ಸಿಜಿಂಪಿಂಗ್ ಘೋಷಣೆ ಗಮನಿಸಬೇಕಾದ ಸಂಗತಿ.

ಚೀಣೀ ಕಮ್ಯುನಿಸ್ಟ್ ಪಾರ್ಟಿ ನೇತೃತ್ವದಲ್ಲಿ ಚೀಣಾ ಆರ್ಥಿಕವಾಗಿ ಅಪಾರವಾದ ಪ್ರಗತಿ ಸಾಧಿಸಿದೆ. ೧೯೫೨ರಲ್ಲಿ ಚೀಣಾದ ಆರ್ಥಿಕ ಪ್ರಗತಿಯು ೩೦.೫೫ ಬಿಲಿಯ ಡಾಲರುಗಳಿಷ್ಟಿದ್ದುದು ೨೦೧೮ರಲ್ಲಿ ೧೩.೬ ಟ್ರಿಲಿಯನ್ ಡಾಲರುಗಳ ಎತ್ತರಕ್ಕೆ ಬೆಳೆದಿದೆ. ಜಿಡಿಪದ ತಲಾವಾರು ೧೯೫೨ರಲ್ಲಿ ೫೪ ಡಾಲರುಗಳಿದ್ದುದು ಇಂದು ೧೦,೨೦೦ ಡಾಲರುಗಳಿಗೆ ಹೆಚ್ಚಿದೆ. ವರ್ಲ್ಡ್‌ಬ್ಯಾಂಕ್ ವರದಿ ಪ್ರಕಾರ ಚೀಣಾ ಜಾರಿಗೆ ತಂದಿರುವ ಆರ್ಥಿಕ ಸುಧಾರಣೆಗಳಿಂದಾಗಿ ೮೫೦ ಮಿಲಿಯ ಜನ ಬಡತನದಿಂದ ಉದ್ಧಾರಗೊಂಡಿದ್ದಾರೆ. ೨೦೨೧ರ ವೇಳೆಗೆ ದೇಶದಲ್ಲಿ ಬಡತನ ನಿರ್ಮೂಲನದ ಗುರಿಯನ್ನು ಚೀಣಾ ಹೊಂದಿದೆ.





ಅಮೆರಿಕದೊಂದಿಗೆ ವಾಣಿಜ್ಯ ಸಮರ ಮುಂದುವರಿದಿದೆ. ಇದರಿಂದ ಚೀಣಾದ ಆರ್ಥಿಕದ ಮೇಲೆ ಪರಿಣಾಮ ಉಂಟುಮಾಡಿದೆ. ಆರ್ಥಿಕ ಬೆಳವಣಿಗೆಯ ದರ ಕುಂಠಿತವಾಗಿದೆ. ಕೈಗಾರಿಕಾ ಬೆಳವಣಿಗೆಯ ದರ ೪.೮ಕ್ಕೆ ಇಳಿದಿದೆ. ಇದರೊಂದಿಗೆ ಹಾಂಕಾಂಗ್‌ನಲ್ಲಿ ಪರಿಸ್ಥಿತಿ ತೀರಾ ಹದಗೆಟ್ಟಿದೆ. 'ಒಂದು ದೇಶ – ಎರಡು ವ್ಯವಸ್ಥೆಗಳು' ಎಂಬುದನ್ನು ಅಂಗೀಕರಿಸಿದ್ದರೂ ಬ್ರಿಟಿಷರ ಅಧೀನದಲ್ಲಿದ್ದ ಈ ಭೂಭಾಗದ ಪರಿಸ್ಥಿತಿ ಚೀಣಾಗೆ ಭಾರಿ ಸವಾಲಾಗಿದೆ. ಹೆಚ್ಚು ಕಡಿಮೆ ದಿನನಿತ್ಯ ಪ್ರತಿಭಟನಾ ಪ್ರದರ್ಶನಗಳು ಜರುಗುತ್ತಿದ್ದು ಹಿಂಸಾತ್ಮಕ ರೂಪ ತಾಳುತ್ತಿದೆ. ಅಮೆರಿಕ ಪ್ರತಿಭಟನಾಕಾರರಿಗೆ ಸಾಕಷ್ಟು ಹಣ ಹಾಗೂ ಒತ್ತಾಸೆ ನೀಡುತ್ತಿದೆ.

## ಮೋದಿ ಅಮೆರಿಕ ಪ್ರವಾಸ–ಹೌಡಿಗಷ್ಟೇ ಸೀಮಿತ

**ವಿ**ಶ್ವಸಂಸ್ಥೆಯ ಸರ್ವಸದಸ್ಯರ ಸಮಾವೇಶದಲ್ಲಿ ಪಾಲ್ಗೊಳ್ಳಲು ಅಮೆರಿಕ ಪ್ರವಾಸ ಮಾಡಿದ ಭಾರತದ ಪ್ರಧಾನಿ ಅಧ್ಯಕ್ಷ ಡೋನಾಲ್ಡ್ ಟ್ರಂಪ್ ಅವರನ್ನು ಭೇಟಿಯಾಗಿ ಮಾತುಕತೆ ನಡೆಸಿದರು. ಅಮೆರಿಕದ ಹೂಸ್ಟನ್‌ನಲ್ಲಿ ಭಾರತೀಯರನ್ನುದ್ದೇಶಿಸಿ ಈರ್ವರು ನಾಯಕರುಗಳೂ ಭಾಷಣ ಮಾಡಿದ್ದೇ ದೊಡ್ಡ ವಿಷಯ. ಭಾಜಪದವರು 'ಹೌಡಿ'ಯನ್ನೇ ದೊಡ್ಡದು ಮಾಡಿ ಪ್ರಚಾರ ಕೈಗೊಂಡಿದ್ದರೂ ಅಮೆರಿಕ ಪ್ರವಾಸ ನಿರೀಕ್ಷಿತ ಫಲ ನೀಡಲಿಲ್ಲ. ಅಂದ ಹಾಗೆ 'ಹೌಡಿ' ಎಂದರೆ ಏನು? ನಿಘಂಟಿನ ಪ್ರಕಾರ ಅರ್ಥ ಹೇಗಿದ್ದೀರಿ, ಚೆನ್ನಾಗಿದ್ದೀರ, ಕ್ಷೇಮವೇ. ಭಾರತ – ಅಮೆರಿಕ ವಾಣಿಜ್ಯ ವ್ಯವಹಾರದಲ್ಲಿ ಭಾರತದ ಸರಕುಗಳ ಮೇಲೆ ವಿಧಿಸಿರುವ ಸುಂಕ ಕಡಿಮೆಯಾಗಿಸಲು ಯಾವ ನಿರ್ಧಾರಕ್ಕೆ ಬರಲಾಗಲಿಲ್ಲ. ಒಂದು ರೀತಿಯಲ್ಲಿ ಇದು ಕೂಡ ಒಂದು ಬಗೆಯ ವಾಣಿಜ್ಯ ಸಮರವೇ. ಇನ್ನು ಕಾಶ್ಮೀರದ ವಿಚಾರದಲ್ಲಿ ಅಮೆರಿಕ ಮಧ್ಯೆ ಪ್ರವೇಶಿಸಲು ತನ್ನ ಇಚ್ಛೆಯನ್ನು ವ್ಯಕ್ತಗೊಳಿಸಿದ್ದರೂ ಪೂರ್ಣ ಬೆಂಬಲ ದೊರೆಯಲಿಲ್ಲ. ಮೋದಿ ಜೊತೆ ಮಾತುಕತೆ ನಡೆಸಿದ ಅಧ್ಯಕ್ಷ ಟ್ರಂಪ್ ಪಾಕಿಸ್ತಾನದ ಪ್ರಧಾನಿ ಇಮ್ರಾನ್‌ಖಾನ್‌ರೊಂದಿಗೂ ಮಾತುಕತೆ ನಡೆಸಿದರು. ಅಮೆರಿಕ ಯಾವತ್ತೂ ಪಾಕಿಸ್ತಾನದ ನಂಬಿಕಾರ್ಹ ಮಿತ್ರ ಎನ್ನುವುದನ್ನು ಮರೆಯುವಂತಿಲ್ಲ ಭಾರತ. ಏತನ್ಮಧ್ಯೆ ಇರಾನಿನಿಂದ ತೈಲದ ಆಮದು ಹಾಗೂ ವಾಣಿಜ್ಯ ಸಂಬಂಧಗಳಿಗೆ ಅಮೆರಿಕದ ಆರ್ಥಿಕ ದಿಗ್ಬಂಧನದಿಂದ ಭಾರತಕ್ಕೆ ಭಾರೀ ಧಕ್ಕೆಯುಂಟಾಗಿದೆ. ಬೇಕೆಂದಾಗ ಆರ್ಥಿಕ ದಿಗ್ಬಂಧನ ಹೇರುವುದು ಅಮೆರಿಕದ ಬದಲಾಗದ ನೀತಿ. ಆರ್ಥಿಕ ದಿಗ್ಬಂಧನ ಎನ್ನುವ ಅಸ್ತ್ರ ಪರಿಣಾಮಕಾರಿಯಾಗದಿದ್ದಾಗ್ಯೂ ಒಂದು ಬಗೆಯ ಕಿರಿಕಿರಿ ವ್ಯವಹಾರದಲ್ಲಿ. ಈಗ ಅಮೆರಿಕ ರಷ್ಯಾದ ಮೇಲೆ ವಿಧಿಸಿರುವ ಆರ್ಥಿಕ ದಿಗ್ಬಂಧನದಿಂದಾಗಿ ಭಾರತ ರಷ್ಯದಿಂದ ಕೊಳ್ಳುವುದಕ್ಕೆ ಒಪ್ಪಂದ ಮಾಡಿಕೊಂಡಿರುವ ಎಸ್ – ೪೦೦ ಕ್ಷಿಪಣಿಗಳ ಸರಬರಾಜಿಗೆ ಅಡ್ಡಿಯಾಗಿದೆ. ಒಂದು ವರ್ಷಕ್ಕೆ ಹಿಂದೆ ಭಾರತ – ರಷ್ಯಗಳ ಮಧ್ಯೆ ಎಸ್–೪೦೦ ಕ್ಷಿಪಣಿಗಳ ಖರೀದಿಗೆ ಒಪ್ಪಂದವಾಗಿತ್ತು. ಇದರ ಕುರಿತು ೨೦೧೫ರಲ್ಲೇ ಎರಡೂ ದೇಶಗಳ ನಡುವೆ ಮಾತುಕತೆಗಳು ಪ್ರಾರಂಭವಾಗಿದ್ದುವು. ಆಗಿನ್ನೂ ಅಮೆರಿಕದ ದಿಗ್ಬಂಧನದ ಹೊಸಕಾಯಿದೆ ಅಂಗೀಕಾರವಾಗಿರಲಿಲ್ಲ. ಭಾರತ – ರಷ್ಯ ಸಂಬಂಧಗಳು ಯಾವ ರೀತಿ ಅಮೆರಿಕದ ಹಿತಾಸಕ್ತಿಗೆ ಭಂಗ ತರುತ್ತದೆ ಎನ್ನುವುದೇ ಪ್ರಶ್ನೆ. ರಷ್ಯಾ ಯಾವತ್ತೂ ಭಾರತಕ್ಕೆ ಎಲ್ಲ ರೀತಿಯಲ್ಲೂ ಆಪ್ತವಾಗಿದೆ ಎನ್ನುವುದನ್ನು ಮರೆಯುವಂತಿಲ್ಲ.

**ಸೀಯಾರ್ಕೆ**
'ಸೂರ್ಯ ರೆಸಿಡೆನ್ಸಿ', ಫ್ಲಾಟ್ ೧, ನಂ. ೩೧೩೩
೩ನೇ ಅಡ್ಡರಸ್ತೆ, ಗಿರಿನಗರ ೪ನೇ ಫೇಸ್, ಬೆಂಗಳೂರು – ೫೬೦ ೦೮೫

# ಜಾಗತಿಕ ತಾಪಮಾನದಿಂದ ಉರಿಯುತ್ತಿರುವ ಇಂಡೋನೇಷ್ಯಾ ಅರಣ್ಯಗಳು ವಿಷಮ ಹೊಗೆಯಿಂದ ಉಸಿರುಗಟ್ಟಿ ತತ್ತರಿಸುತ್ತಿರುವ ಆಗ್ನೇಯ ಏಷ್ಯಾ ದೇಶಗಳು

ಸೆಪ್ಟೆಂಬರ್ ೧೧ರ ರಾತ್ರಿ ಬೆಂಗಳೂರಿನಲ್ಲಿ ಸಿಂಗಾಪುರ ಅಂತರರಾಷ್ಟ್ರೀಯ ವಿಮಾನದಲ್ಲಿ ಕುಳಿತಾಗ 'ದಿ ಸ್ಟ್ರೈಯಟ್ ಟೈಮ್ಸ್' ಪತ್ರಿಕೆ ಕೈಗೆ ಸಿಕ್ಕಿ ಕಣ್ಣಾಡಿಸಿದೆ. ಆಗ್ನೇಯ ಏಷ್ಯಾ ದೇಶಗಳು ಉರಿಯುತ್ತಿರುವ ಅರಣ್ಯ ಬೆಂಕಿಯ ಹೊಗೆಯಿಂದ ಉಸಿರಾಡಲಾಗದೆ ತತ್ತರಿಸುತ್ತಿವೆ ಎಂಬ ಶೀರ್ಷಿಕೆ ನೋಡಿ ಕುತೂಹಲಗೊಂಡು ಓದಿದೆ. ನನ್ನಲ್ಲಿ ಸಣ್ಣದಾಗಿ ಅಳುಕು ಕಾಣಿಸಿಕೊಂಡಿತು. ಮರುದಿನ ಬೆಳಿಗ್ಗೆ ಸಿಂಗಾಪುರ ವಿಮಾನ ನಿಲ್ದಾಣದಲ್ಲಿ ಇಳಿದಾಗ ದಟ್ಟವಾದ ಹೊಗೆ/ಮಬ್ಬು ಕವಿದಿತ್ತು. ಅಲ್ಲಿಂದ ವಿಮಾನ ಹತ್ತಿ ಮಲೇಷ್ಯಾದ ರಾಜಧಾನಿ ಕೌಲಾಲಂಪುರ್‌ದಲ್ಲಿ ಇಳಿದಾಗಲೂ ಮಬ್ಬು ಕವಿದಿತ್ತು. ಎಲ್ಲಾ ಪತ್ರಿಕೆಗಳ ಮುಖಪುಟಗಳಲ್ಲಿ ಅದೇ ವಿಷಯ ತುಂಬಿಕೊಂಡಿತ್ತು. ರಸ್ತೆಗಳು, ಎತ್ತರೆತ್ತರ ಕಟ್ಟಡಗಳು, ಗಿಡಮರಗಳ ಸುತ್ತ ಹೊಗೆ ಸುತ್ತುವರಿದಿತ್ತು. ಸಾಕಷ್ಟು ಜನರು ಮುಖವಾಡಗಳನ್ನು ಧರಿಸಿ ಓಡಾಡುತ್ತಿದ್ದರು. ಆಗ್ನೇಯ ಏಷ್ಯಾ ದೇಶಗಳೆಲ್ಲ ಸಮಶೀತೋಷ್ಣ ತಾಪಮಾನದಿಂದ ಕೂಡಿದ ದೇಶಗಳಾಗಿವೆ.

ಕೌಲಾಲಂಪುರ ಇಡೀ ನಗರವೇ ಸಂಪೂರ್ಣವಾಗಿ ವಿಷಮ ಗಾಳಿಯಿಂದ ಉಸಿರುಗಟ್ಟಿದಂತೆ ತೋರುತ್ತಿತ್ತು. ಆದರೆ ನನ್ನ ಜೊತೆಗೆ ಬಂದಿದ್ದ ೧೪ ಭಾರತೀಯ ಪ್ಯಾಕೇಜ್ ಪ್ರವಾಸಿಗರು ಯಾವ ಅಳುಕು ಇಲ್ಲದೇ ದಟ್ಟ ಹೊಗೆಯಂತಹ ವಾತಾವರಣದಲ್ಲಿ ನಡೆಯುತ್ತಿದ್ದರು. ಸುತ್ತಮುತ್ತಲೂ ಮಬ್ಬುಮಬ್ಬಾಗಿ ಆಕಾಶವೆಲ್ಲ ಹೊಗೆ ತುಂಬಿಕೊಂಡಿರುವಂತೆ ಕಾಣಿಸುತ್ತಿತ್ತು. ಗೈಡ್‌ನನ್ನು ಕೇಳಿದಾಗ ಇಂಡೋನೇಷ್ಯಾದಲ್ಲಿ ಅರಣ್ಯಗಳು ಹೊತ್ತಿ ಉರಿಯುತ್ತಿದ್ದು ಆ ಹೊಗೆ ಇಲ್ಲಿಗೂ ತಲುಪಿದೆ ಎಂದ. ಜಾಗತಿಕ ತಾಪಮಾನ ಇದಕ್ಕೆ ಕಾರಣ ಎನ್ನುವುದು ತೀರಾ ಸರಳವಾದ ಮಾತಾಗುತ್ತದೆ. ಆದರೆ ಅದರ ವಿಷದ ಬಿಳಲುಗಳು ಮಾತ್ರ ಇಂದಿನ ಆಧುನಿಕ ಜಗತ್ತಿನಲ್ಲಿ ಸಾವಿರಾರು ರೂಪಗಳಲ್ಲಿ ಕಾಣಿಸಿಕೊಳ್ಳುತ್ತಿವೆ. ಅರಣ್ಯನಾಶ ಮನುಷ್ಯ ನಿರ್ಮಿಸಿದ ಅತ್ಯಂತ ವಿಷಮ ವಿಪತ್ತಾಗಿದೆ. ಇಂಡೋನೇಷ್ಯಾದ ಪೂರ್ವ ತಟದಿಂದ ಕೌಲಾಲಂಪುರಕ್ಕೆ ಸುಮಾರು ೨೦೦೦ ಕಿ.ಮೀ.ಗಳು ದೂರವಿದ್ದು ಅಲ್ಲಿಯವರೆಗೂ ಹೊಗೆ ಸಾಗಿಬಂದಿದೆ ಎಂದರೆ ಎಷ್ಟು ಅರಣ್ಯ ಸುಟ್ಟು ಕರಕಲಾಗಿದೆ ಎಂಬುದನ್ನು ಊಹಿಸುವುದು ಕಷ್ಟಸಾಧ್ಯವಾಗಿದೆ. ಇಂಡೋನೇಷ್ಯಾ ೧.೯೦೫ ದಶಲಕ್ಷ ಚ.ಕಿ.ಮೀ. ವಿಸ್ತೀರ್ಣ ಇರುವ ದೊಡ್ಡ ದೇಶವಾಗಿದ್ದು ಅಪಾರ ಮಳೆಕಾಡನ್ನು ಹೊಂದಿರುವ ದೇಶವಾಗಿದೆ.

ಏಷ್ಯಾದ ಆಗ್ನೇಯ ದೇಶಗಳ ಅರಣ್ಯಗಳು ಇತ್ತೀಚೆಗೆ ನಿರಂತರವಾಗಿ ಬೆಂಕಿಗೆ ಆಹುತಿಯಾಗುತ್ತಿದ್ದು ಜಾಗತಿಕ ಮಟ್ಟದಲ್ಲಿ ಪರಿಸರ ಮಾಲಿನ್ಯವಾಗುತ್ತಿದೆ. ಇದರಿಂದ ಈ ದೇಶಗಳ ಜನ ಆರೋಗ್ಯದ ಮೇಲೆ ಅಪಾಯಕಾರಿ ಪರಿಣಾಮ ಬೀರುತ್ತಿದ್ದು ಆರ್ಥಿಕವಾಗಿಯೂ ಹೆಚ್ಚು ನಷ್ಟಕ್ಕೆ ಒಳಗಾಗುತ್ತಿವೆ. ಮುಖ್ಯವಾಗಿ ಬ್ರೂನಿ, ದಾರುಸ್ಸಲಾಮ್, ಇಂಡೋನೇಷ್ಯಾ, ಫಿಲಿಪೈನ್ಸ್, ಥೈಲ್ಯಾಂಡ್, ಸಿಂಗಾಪುರ್, ಮಲೇಷ್ಯಾ ದೇಶಗಳು ಈ ದುರಂತಕ್ಕೆ ಸಿಲುಕಿಕೊಳ್ಳುತ್ತಿವೆ. ಪ್ರತಿ ಬೇಸಿಗೆಯಲ್ಲೂ ದಟ್ಟವಾದ ಅಪಾರ ಮಳೆಕಾಡುಗಳು ಹೊತ್ತಿ ಉರಿಯುತ್ತಿವೆ. ಬ್ರೂನಿ ಪ್ರಾಂತ್ಯದಲ್ಲಿ ಅಳಿವಿನ ಅಂಚಿನಲ್ಲಿರುವ ಒರಾಂಗುಟನ್ ಸಂಕುಲ ಅಪಾಯಕ್ಕೆ ಸಿಕ್ಕಿಕೊಂಡಿದೆ ಎಂಬ ವರದಿಗಳು ಬರುತ್ತಿವೆ. ಡಜನ್‌ಗಟ್ಟಲೆ ಏಪ್ ಮರಿಗಳು ಹೊಗೆಗೆ ಸಿಕ್ಕಿಕೊಂಡು ಉಸಿರಾಡಲಾಗದೆ ರಕ್ಷಣಾ ಕೇಂದ್ರಗಳಲ್ಲಿ ನರಳುತ್ತಿರುವುದಾಗಿಯೂ ತಿಳಿದುಬಂದಿದೆ. ಇಂಡೋನೇಷ್ಯಾ ಜಗತ್ತಿನ ವೈವಿಧ್ಯ ಪ್ರಾಣಿ ಮತ್ತು ಸಸ್ಯಸಂಕುಲ ಇರುವ ತಾಣವಾಗಿದೆ. ಅಪಾರ ಸಸ್ಯ /ಪ್ರಾಣಿಸಂಕುಲ ಉಸಿರುಗಟ್ಟುವ ವಾತಾವರಣದಲ್ಲಿ ಸಿಕ್ಕಿಕೊಂಡು ಜೀವಜಗತ್ತಿನ ಅಮೂಲ್ಯ ಜೈವಿಕವೈವಿಧ್ಯವು ಕಳೆದುಹೋಗುತ್ತಿರುವುದು ಕಳವಳಕಾರಿ ವಿಷಯವಾಗಿದೆ.

ಇಂಡೋನೇಷ್ಯಾದಲ್ಲಿ ನಡೆಯುವ ಅಕ್ರಮ ಕೃಷಿ ಮತ್ತು ಕೈಗಾರಿಕೆಗಳ ಸ್ಥಾಪನೆ ಅರಣ್ಯ ನಾಶಕ್ಕೆ ಮುಖ್ಯ ಕಾರಣವಾಗಿದೆ. ದಕ್ಷಿಣ ಸುಮಾತ್ರಾ, ರಿಯಾವು ಮತ್ತು ಕಲಿಮಂತನ್ ಪ್ರದೇಶಗಳಲ್ಲಿ ಅಕ್ರಮ ಚಟುವಟಿಕೆಗಳು ಹೆಚ್ಚಾಗಿ ನಡೆಯುತ್ತಿದ್ದು ಇದರಲ್ಲಿ ಹೆಚ್ಚು ಪಾಮ್ ಎಣ್ಣೆಗಾಗಿ ಕೃಷಿ ಮತ್ತು ಮರತಿರುಳು ತೆಗೆಯುವುದು ಕಾರಣವಾಗಿದೆ. ಜಗತ್ತಿನ ಪ್ರಖ್ಯಾತ ಬ್ರ್ಯಾಂಡ್ ಕಂಪನಿಗಳು ತಮ್ಮ ಆಹಾರ ಪದಾರ್ಥಗಳ ತಯಾರಿಕೆಗೆ ಪಾಮ್ ಎಣ್ಣೆಯನ್ನು ಉಪಯೋಗಿಸುತ್ತಿದ್ದು ಅದು ಹೆಚ್ಚಾಗಿ ಇಂಡೋನೇಷ್ಯಾದಲ್ಲಿ ಬೆಳೆಯಲಾಗುತ್ತಿದ್ದು ಅರಣ್ಯನಾಶಕ್ಕೆ ಮುಖ್ಯ ಕಾರಣವಾಗಿದೆ. ಅರಣ್ಯನಾಶದಿಂದ ಆಗ್ನೇಯ ದೇಶಗಳ ಜಿಡಿಪಿ ಆಗಾಗ ಕೆಳಕ್ಕೆ ಜಾರಿ ಬೀಳುತ್ತಿರುತ್ತದೆ. ೨೦೧೫ರಲ್ಲಿ ಇದೇ ರೀತಿಯ ವಿಷ ಹೊಗೆ ಆವರಿಸಿಕೊಂಡು ಇಂಡೋನೇಷ್ಯಾ ೨೨೧ ಟ್ರಿಲಿಯನ್ ರೂಪಾಯಿಗಳ ನಷ್ಟವನ್ನು ಅನುಭವಿಸಿತು. ಇದು ಆರೋಗ್ಯ, ಪ್ರವಾಸೋದ್ಯಮ, ಶಿಕ್ಷಣ, ವ್ಯಾಪಾರ, ಅಗ್ನಿಶಾಮಕ, ಗಣಿಗಾರಿಕೆ ಉತ್ಪಾದನೆ ಇತ್ಯಾದಿಗಳಿಂದ.

ಕಳೆದ ಎರಡುಮೂರು ವಾರಗಳಲ್ಲಿ ವಿಷಮಕಾರಿ ಹೊಗೆಯಿಂದ ಇಂಡೋನೇಷ್ಯಾದಲ್ಲಿ ನೂರಾರು ಶಾಲೆಗಳಿಗೆ ರಜಾ ಘೋಷಿಸಲಾಯಿತು. ಸಾಧ್ಯವಾದಷ್ಟು ಜನರನ್ನು ವಿಶೇಷವಾಗಿ ವೃದ್ಧರನ್ನು ಮತ್ತು ಮಕ್ಕಳನ್ನು ಮನೆಗಳ ಒಳಗೆ ಇರುವಂತೆ



**ಡಾ॥ ಎಂ. ವೆಂಕಟಸ್ವಾಮಿ**



**ಇಂಡೋನೇಷ್ಯಾದ ಅಧ್ಯಕ್ಷ ಜೋಕೋ ವಿಡೋಡೊ ಖುದ್ದಾಗಿ ಅರಣ್ಯವನ್ನು ವೀಕ್ಷಿಸುತ್ತಿರುವುದು**

ತಿಳಿಸಲಾಯಿತು. ಆ ವಿಷಗಾಳಿ ಪಕ್ಕದ ಮಲೇಷ್ಯಾ ಮತ್ತು ಸಿಂಗಾಪುರ ದ್ವೀಪದವರೆಗೂ ಬೀಸಿ ಸೂರ್ಯನ ಬೆಳಕು ಕಾಣದಂತೆ ಮಾಡಿತ್ತು. ಎಲ್ಲಿ ನೋಡಿದರೂ ಹೊಗೆಯೇ ತುಂಬಿಕೊಂಡಿತ್ತು. ಸರಕಾರ ಜನರಿಗೆ ಮುಖ ಕವಚಗಳನ್ನು ಹಾಕಿಕೊಂಡು ಓಡಾಡುವಂತೆ ಎಚ್ಚರಿಕೆ ನೀಡಿತ್ತು. ಸ್ಥಳೀಯರು, ಯುರೋಪ್ ಮತ್ತು ಇತರ ಪಶ್ಚಿಮ ದೇಶಗಳ ಜನರು ವಾತಾವರಣದ ಬಗ್ಗೆ ಆಫ್‌ದೇಟ್ ಆಗಿದ್ದು ಮುಖಕ್ಕೆ ಕವಚಗಳನ್ನು ಕಟ್ಟಿಕೊಂಡು ಓಡಾಡುತ್ತಿದ್ದರು. ಗಾಳಿಯಲ್ಲಿ ೧೦ ಮೈಕ್ರೊಮೀಟರ್‌ಗಳಿಗಿಂತ ಸಣ್ಣ ಕಣಗಳು ಹೆಚ್ಚಾಗಿದ್ದರೆ ಅವು ವಿಷಮಕಾರಿ. ಅವು ೧೦ರಿಂದ ೫೦ರ ಒಳಗಿದ್ದರೆ ಪರವಾಗಿಲ್ಲ. ಆದರೆ ೧೦೦ರ ಮೇಲಿದ್ದರೆ ಅಪಾಯಕಾರಿ, ೨೦೦ ದಾಟಿದರೆ ವಿಷಮ ಪರಿಸ್ಥಿತಿ. ಕೆಲವು ಕಡೆ ೨೦೦ ದಾಟಿ ೩೦೦ರವರೆಗೂ ಗಾಳಿಯಲ್ಲಿ ತುಂಬಿಕೊಂಡಿದ್ದವು. ಹೀಗಾದರೆ ಕಣ್ಣು ಉರಿ, ಕೆಮ್ಮು, ಉಬ್ಬಸ, ಚರ್ಮ ಉರಿ, ಉಸಿರಾಟಕ್ಕೆ ತೊಂದರೆಯಾಗಿ ಸಾವುಗಳು ಸಂಭವಿಸುತ್ತವೆ.

ಇಂಡೋನೇಷ್ಯಾದ ಅಧ್ಯಕ್ಷ ಜೋಕೊ ವಿಡೋಡೊ ಖುದ್ದಾಗಿ ಅರಣ್ಯದಲ್ಲಿ ಉಸ್ತುವಾರಿ ನಡೆಸಿದ್ದು ಒಟ್ಟು ೧೪,೦೦೦ ಜನ ಸಿಬ್ಬಂದಿ ಬೆಂಕಿಯನ್ನು ನಂದಿಸುವ ಕೆಲಸದಲ್ಲಿ ತೊಡಗಿಕೊಂಡಿತ್ತು. ಅರಣ್ಯ ಬೆಂಕಿಗೆ ಕಾರಣರಾದ ೨೦೦ ಜನರನ್ನು ಬಂಧಿಸಲಾಗಿತ್ತು. ಇಂಡೋನೇಷ್ಯಾದ ಅಂತರರಾಷ್ಟ್ರೀಯ ವಿಮಾನ ನಿಲ್ದಾಣಗಳಲ್ಲಿ ೪೦ ವಿಮಾನಗಳ ಹಾರಾಟವನ್ನು ಸ್ಥಗಿತಗೊಳಿಸಲಾಯಿತು. ಕೌಲಾಲಂಪುರದ ಜಗತ್ಪ್ರಸಿದ್ಧ ಟ್ವಿನ ಟವರ್ ನೋಡಲು ಹೋದವರಿಗೆಲ್ಲ ನಿರಾಶೆ ಕಾದಿತ್ತು. ಅದರ ಮುಂದೆ ಸರಿಯಾಗಿ ಫೋಟೋ ಕೂಡ ಹಿಡಿದುಕೊಳ್ಳಲು ಆಗಲಿಲ್ಲ. ಕ್ಲೌಡ್ ಸೀಡಿಂಗ್ ಮಾಡಿ ಯಾತ್ರಿಕರಿಗೆ ಕೌಲಾಲಂಪುರ ನೋಡಲು ಅನುಕೂಲ ಮಾಡೋಣವೆಂದರೆ ರಾಸಾಯನಿಕಗಳು ಸುರಿಯಲು ಮೋಡಗಳೆ ಇರಲಿಲ್ಲ. ಇಂಡೋನೇಷ್ಯಾ ಹವಾಮಾನ ಮತ್ತು ಭೂಭೌತಶಾಸ್ತ್ರ ಇಲಾಖೆ ಉಪಗ್ರಹದ ಮೂಲಕ ಅರಣ್ಯದಲ್ಲಿ ಕನಿಷ್ಠ ೧೦೦೦ ಹಾಟ್ಸ್ಪಾಟ್‌ಗಳು ಇರುವುದಾಗಿ ಗುರುತಿಸಿತ್ತು. ದ್ರೋಣ್‌ಗಳು ನಿರಂತರವಾಗಿ ಮಾಹಿತಿ ಒದಗಿಸುತ್ತಿದ್ದವು. ಹೆಲಿಕ್ಯಾಪ್ಟರ್‌ಗಳಲ್ಲಿ ನೀರನ್ನು ಮೇಲಿಂದ ಚೆಲ್ಲುತ್ತಿದ್ದು, ವಿಮಾನಗಳ ಮೂಲಕ ವಾಟರ್ ಬಾಂಬ್‌ಗಳನ್ನು ಎಸೆಯಲಾಗುತ್ತಿತ್ತು. ಇದರ ನಡುವೆ ಆಗಾಗ ಸಣ್ಣದಾಗಿ ಮಳೆ ಹನಿಯುತ್ತಿದ್ದು ಹೊಗೆ ಇನ್ನಷ್ಟು ಹೆಚ್ಚಾಗುತ್ತಿತ್ತು ಎಂಬ ಮಾತುಗಳು ಕೇಳಿಬರುತ್ತಿದ್ದವು. ಇತ್ತೀಚಿನ ದಶಕಗಳಲ್ಲಿ ಅಮೆರಿಕಾ, ಆಸ್ಟ್ರೇಲಿಯಾ, ಆಫ್ರಿಕಾ, ಇನ್ನೂ ಅನೇಕ ದೇಶಗಳಲ್ಲಿ ಸಾವಿರಾರು ಕಡೆ ಅರಣ್ಯಗಳು ಹೊತ್ತಿ ಉರಿಯುತ್ತಿರುವ ಸುದ್ದಿಗಳು ಬರುತ್ತಿವೆ. 'ಭೂಮಿಯ ಶ್ವಾಸಕೋಶ' ಎನ್ನುವ ಅಮೆಜಾನ್ ದಟ್ಟ ಕಾಡುಗಳೆ ಉರಿಯಲು ಪ್ರಾರಂಭವಾಗಿರುವುದು ಭೂಮಿಗೆ ಒಳ್ಳೆಯದಲ್ಲ.

**ಡಾ॥ ಎಂ. ವೆಂಕಟಸ್ವಾಮಿ**
# ೪ಡಿ, ಕಾಸ್ಮಾಸ್ ಟವರ್, ಕ್ಲಾಸಿಕ್ ಲ್ಯಾಂಡ್‌ಮಾರ್ಕ್ ಅಪಾರ್ಟ್‌ಮೆಂಟ್
ಕಸವನಹಳ್ಳಿ ಮುಖ್ಯರಸ್ತೆ, ಅಮೃತ ಎಂಜಿನಿಯರಿಂಗ್ ಕಾಲೇಜ್ ಹತ್ತಿರ
ಬೆಂಗಳೂರು – ೫೬೦ ೦೩೫
Email : alemarimvs@gmail.com

## ಸುದ್ದಿಚಿತ್ರ






ಕಲಬುರಗಿಯ ಕನ್ನಡ ಭವನದ ಸುವರ್ಣ ಸಭಾಭವನದಲ್ಲಿ ಶ್ರೀನಿವಾಸ ಗುಡಿ ಮೆಮೋರಿಯಲ್ ಟ್ರಸ್ಟ್ ಮತ್ತು 'ಹೊಸತು' ಓದುಗರ ಬಳಗದ ವತಿಯಿಂದ ದಿನಾಂಕ ೩೦-೦೯-೨೦೧೯ರಂದು ಏರ್ಪಡಿಸಲಾಗಿದ್ದ 'ಯುವ ಭಾರತ ಉದ್ಯೋಗ ಭಾರತ' ಚರ್ಚಾಗೋಷ್ಠಿಯನ್ನು ಉದ್ಘಾಟಿಸಿ 'ಹೊಸತು' ಮಾಸ ಪತ್ರಿಕೆಯ ಸಂಪಾದಕ ಡಾ॥ ಸಿದ್ದನಗೌಡ ಪಾಟೀಲ ಮಾತನಾಡಿದರು. ಪ್ರೊ॥ ಚಂದ್ರ ಪೂಜಾರಿ, ಮಾರುತಿ ಗೋಖಲೆ, ಡಾ॥ ಶಿವಗಂಗಾ ರುಮ್ಮಾ, ಡಾ॥ ಸಂಗೀತಾ ಕಟ್ಟಿಮನಿ, ಡಾ॥ ಬಸವರಾಜ ಕುಮ್ನೂರ್, ಪ್ರೊ॥ ಎಂ. ಬಿ. ಅಂಬಲಗಿ, ಡಾ॥ ಕೈಲಾಸ ಬಾಬು ಮೊದಲಾದವರು ವೇದಿಕೆಯ ಮೇಲೆ ಉಪಸ್ಥಿತರಿದ್ದರು.

ಅದೇ ವೇದಿಕೆಯಲ್ಲಿ ಮಧ್ಯಾಹ್ನ ಆಯೋಜಿಸಲಾಗಿದ್ದ 'ಹೊಸತು' ಸಂಪಾದಕರೊಡನೆ ಸಂವಾದ ಕಾರ್ಯಕ್ರಮದಲ್ಲಿ ಸಂಪಾದಕ ಡಾ॥ ಸಿದ್ದನಗೌಡ ಪಾಟೀಲರು ಓದುಗರನ್ನುದ್ದೇಶಿಸಿ ಮಾತನಾಡಿದರು. ಮಾರುತಿ ಗೋಖಲೆ, ಪದ್ಮಾವತಿ ಮಾಲಿಪಾಟೀಲ, ರುಕ್ಮಿಣಿ, ಕಾ॥ ಭೀಮಾ ಶಂಕರ ಮಾಡಿಯಾಳ, ಸೂರ್ಯಕಾಂತ ಸೊನ್ನದ, ಡಾ॥ ಮಹೇಶ ರಾಠೋಡ, ಕಾ॥ ಎಚ್. ಎಸ್. ಪಟಕಿ, ಸಂಜಯ ಪಾಟೀಲ, ಡಾ॥ ಶರಣಪ್ಪಾ ಸೈದಾಪೂರ, ನಂದಪ್ಪ, ಸಂಗನಗೌಡ ಹಿರೇಗೌಡ, ರವಿಕಾಂತ ಗೌಳಿ, ಈರಣ್ಣಗೌಡ ಮೊದಲಾದವರು ಸಂವಾದದಲ್ಲಿ ಸಹಭಾಗಿಗಳಾದರು.

# ಊರ ಬೆಳಗಿದ ಜ್ಯೋತಿ

**ಜ್ಯೋ**ತಿ ೬ ವರ್ಷದ ಮಗುವಾಗಿದ್ದಾಗ ದೇವರಿಗೆ ಅಂತ ಊರಿನವರೆಲ್ಲಾ ಸೇರಿ ಮುತ್ತು ಕಟ್ಟಿಸಿದರು. ಇದರ ಬಗ್ಗೆ ಏನೂ ಗೊತ್ತಿರದ ಜ್ಯೋತಿ ಮುತ್ತನ್ನು ಕಟ್ಟಿಸಿಕೊಂಡಿದ್ದಳು. ಜ್ಯೋತಿಯ ತಾಯಿಯು ಇಂತಹುದೇ ಯಾತನೆಗೆ ಒಳಗಾಗಿದ್ದಳು. ಜ್ಯೋತಿಯನ್ನು ಈ ಕೂಪಕ್ಕೆ ತಳ್ಳುವುದು ಬೇಡ ಎಂದು ಎಷ್ಟೆ ಆಲೋಚಿಸಿದ್ದರೂ ಪ್ರತಿಭಟಿಸುವ ಶಕ್ತಿ ಇಲ್ಲದೆ ಮೌನವಾಗಿದ್ದಳು. ಆದರೆ ಶಾಲೆಗೆ ಕಳುಹಿಸುವುದನ್ನು ಮಾತ್ರ ಆ ತಾಯಿ ನಿಲ್ಲಿಸಲಿಲ್ಲ.

ಜ್ಯೋತಿ ಓದಿನಲ್ಲಿ ಚುರುಕಾಗಿದ್ದುದನ್ನು ಗಮನಿಸಿದ ಮಾಸ್ತರ ಬಸ್ಸಪ್ಪ ಅವಳ ಬಗ್ಗೆ ಹೆಚ್ಚು ಕಾಳಜಿ ವಹಿಸುತ್ತಿದ್ದರು. ಆ ಊರಲ್ಲಿ ಇದ್ದದ್ದೆ ನಾಲ್ಕನೇ ತರಗತಿ, ಆ ತರಗತಿಯನ್ನು ದಾಟಿ ಮುಂದಿನ ತರಗತಿಗೆ ಹೋಗಬೇಕಾದರೆ ಜ್ಯೋತಿ ಸಿಟಿಗೆ ಹೋಗಲೇಬೇಕಿತ್ತು. ಮಾಸ್ತರ ಬಸ್ಸಪ್ಪ ಜ್ಯೋತಿಯ ಅಮ್ಮನ ಬಳಿಗೆ ಬಂದು, "ಅವಳನ್ನು ಮುಂದೆ ಶಾಲೆಗೆ ಕಳುಹಿಸು, ಅವಳು ಜಾಣೆ" ಎಂದು ಅವಳ ಮನಸ್ಸಲ್ಲಿ ಸಿಟಿಗೆ ಕಳುಹಿಸಬೇಕು ಎಂಬ ಅಚ್ಚನ್ನು ಒತ್ತಿದರು. ಮಾಸ್ತರು ಮನೆಗೆ ಬಂದು ಹೋಗಿದ್ದನ್ನು ಗಮನಿಸಿದ ಅಕ್ಕ ಪಕ್ಕದ ಜನ ಜ್ಯೋತಿ ತಾಯಿಯನ್ನು, "ಯಾಕೆ ಮಾಸ್ತರು ಬಂದಿದ್ರು?" ಎಂದೆಲ್ಲ ಪೀಡಿಸತೊಡಗಿದರು. ಜ್ಯೋತಿ ಅವರಿಗೆ ವಿಷಯ ತಿಳಿಸಿ ಯಾರಿಗೂ ಹೇಳಬೇಡಿ ಎಂದು ಕೈ ಮುಗಿದು ಅಂಗಲಾಚಿದಳು.

ಜ್ಯೋತಿ ಶಾಲೆ ಕಲಿಯಲು ಸಿಟಿಗೆ ಹೋಗುವ ಸುದ್ದಿ ಬಿರುಗಾಳಿಯಂತೆ ಊರ ತುಂಬೆಲ್ಲ ಹಬ್ಬಿ ಊರ ಗೌಡನ ಮನೆಯ ಆವರಣ ಸೇರಿತು. ಸಿಟ್ಟಿಗೆದ್ದ ಗೌಡ, "ಆ ಕಮಲಿ ಮತ್ತು ಆಕಿ ಮಗಳನ್ನ ಇಬ್ರನ್ನು ಕರ್ಕೊಂಡು ಬನ್ನಿ" ಅಂತ ತನ್ನ ಆಳುಗಳಿಗೆ ಗತ್ತಿನ ಧ್ವನಿಯಲ್ಲಿ ಹೇಳಿದ. ಆಳುಗಳು ಕಮಲಿ ಮನೆಗೆ ಬಂದು ಗೌಡರು ಕರೀತಿದ್ದಾರೆ ಬರಬೇಕು ಎಂದು ಹೆದರಿಕೆ ಬರುವಂತೆ ಮನೆಯ ಮುಂದೆ ಬಂದು ನಿಂತರು. ಗಾಬರಿ, ತಡವರಿಕೆಗಳಿಂದ ಸುಧಾರಿಸಿಕೊಂಡ ಕಮಲಿ, "ಆಯ್ತು ನೀವು ಹೋಗ್ರಿ, ನಾನು ಮಗಳನ್ನ ಕರ್ಕೊಂಡು ಬರ್ತೀನಿ" ಅಂತಾ ಗೌಡನ ಆಳುಗಳನ್ನು ವಾಪಸ್ಸು ಕಳುಹಿಸಿದಳು.

ಈ ಕಡೆ ಮಾಸ್ತರ ಬಸ್ಸಪ್ಪ ಹೇಳಿದ ಮಾತುಗಳು, ಆ ಕಡೆ ಗೌಡ, ಆತನ ಆಳುಗಳು ಬಂದ ಚಿತ್ರಗಳು ಕಮಲಿಯನ್ನು ಕಾಡತೊಡಗಿತು. ಮಾಸ್ತರ ಹೇಳಿದ್ದು ಸರಿ ಮತ್ತು ಈ ಸಮಸ್ಯೆಗೆ ಅವರೇ ಪರಿಹಾರ ಅಂತ ಮಾಸ್ತರ ಮನೆಗೆ ಜ್ಯೋತಿಯನ್ನ ಕರೆದುಕೊಂಡು ಹೊರಟೇ ಬಿಟ್ಟಳು. ಮಾಸ್ತರ ಬಳಿ ಹೋಗಿ ನಡೆದ ವಿಚಾರ ಹೇಳಿ ಗೌಡರ ಆಳು ಬಂದು ಹೋಗಿದ್ದನ್ನು ಹೇಳಿದಳು. ಮಾಸ್ತರರು ಕಮಲಿಗೆ ಧೈರ್ಯ ನೀಡಿ ಆ ಗೌಡನ ಮನೆಗೆ ನೀನೊಬ್ಬಳೇ ಹೋಗಿ ಬಾ, ನಾ ಜ್ಯೋತಿಗೆ ಸಿಟಿಲಿ ಶಾಲೆಗೆ ಸೇರಿಸುವ ವ್ಯವಸ್ಥೆ ಮಾಡ್ತೇನೆ ಅಂತ ಮಾಸ್ತರ ಹೇಳಿದ ಮಾತು ಕೇಳಿ ಕಮಲಿ ಗೌಡನ ಮನೆಗೆ ಹೊರಟಳು. ಇತ್ತ ಮಾಸ್ತರ ಬಸ್ಸಪ್ಪ ತನಗೆ ಪರಿಚಯವಿದ್ದವರ ಸಂಪರ್ಕ ಬೆಳಸಿಕೊಂಡು ಜ್ಯೋತಿಯನ್ನು ಸಿಟಿಯ ಸರಕಾರಿ ಶಾಲೆಗೆ ಸೇರಿಸಿ ಹಾಸ್ಟಲ್ ವ್ಯವಸ್ಥೆಯನ್ನು ಮಾಡಿಸಿದರು.

ಇತ್ತ ಕಮಲಿ ಗೌಡನ ಮನೆಗೆ ಹೋಗಿ ಗೌಡನ ಮುಂದೆ ನಿಂತು, "ಹೇಳಿ ಧಣಿ, ಯಾಕೆ ಕರೆಸಿದ್ರಿ" ಅಂತ ಮೆಲುಧ್ವನಿಯಲ್ಲಿ ತಲೆ ತಗ್ಗಿಸಿ ಕೇಳಿದಳು. "ಎಲ್ಲಿ ನಿನ್ನ ಮಗಳು ?" ಎಂಬ ಗೌಡನ ಗತ್ತಿನ ಪ್ರಶ್ನೆಗೆ ಕಮಲಿಯ ಕೈ ಕಾಲುಗಳು ನಡುಗತೊಡಗಿದವು. ಉತ್ತರಿಸದೆ ಮೌನವಾಗಿ ತಲೆ ತಗ್ಗಿಸಿ ನಿಂತಳು, "ನಿನ್ನ ಮಗಳು ದೇವರಿಗೆ ಬಿಟ್ಟ ಹುಡುಗಿ. ಅವಳು ಈ ಊರಿನ ಸ್ವತ್ತು. ನಾನು ಊರ ಧಣಿ. ನನಗೆ ಗೊತ್ತಿಲ್ದಂಗೆ ಮಗಳನ್ನು ಶಾಲೆಗೆ ಅಂತಾ ಸಿಟಿಗೆ ಕಳಸ್ತೀಯಾ? ನಿಮಗ್ಯಾಕೆ ಬೇಕು ಅಕ್ಷರ? ಅಕ್ಷರ ಕಲಿತು ಏನ ಮಾಡ್ತೀರಿ? ನಿಮ್ಮ ದೇಹ ಏನಿದ್ದರೂ ದೇವರಿಗೆ ಹಂಚಬೇಕು ಅಲ್ವಾ?" ಎಂದಾಗ ಸಿಟ್ಟಿಗೆದ್ದ ಕಮಲಿ, "ದೇವರ ಹೆಸರಲ್ಲಿ ನೀವೆಲ್ಲ ನನ್ನ ದೇಹ ತಿಂದದ್ದು ಸಾಕು. ಇದು ನನಗೆ ಅಂತ್ಯ ಆಗಲಿ. ನನ್ನ ಮಗಳನ್ನ ಇದಕ್ಕೆ ಬಲಿ ಕೊಡಲ್ಲ" ಅಂತ ಗಟ್ಟಿಯಾಗಿಯೇ ಹೇಳಿಬಿಟ್ಟಳು. ಗೌಡನ ಸಿಟ್ಟು ನೆತ್ತಿಗೇರಿತು. ಕಮಲಿಯ ಮಾತು ಗೌಡನ ದರ್ಪಕ್ಕೆ ಅವಮಾನವಾದಂತಾಗಿ, "ನಿನಗೆ ಅಂತ್ಯ ಆಗಬೇಕಾ? ಅಂತ್ಯ ಮಾಡ್ತೀನಿ ಮಾಡ್ತೇನಿ", ಎಂದು ಹೇಳಿ ಆಳುಗಳಿಗೆ ಹೇಳಿ



ಗುರುರಾಜ ದೇಸಾಯಿ

ಕಮಲಿಯನ್ನು ಕಂಬಕ್ಕೆ ಕಟ್ಟಿಸಿ ಬಾರುಕೋಲಿನಿಂದ ಬಾರಿಸಿದ. ಅಷ್ಟೆಲ್ಲ ಏಟು ತಿಂದು ಸುಸ್ತಾದರೂ ಕಮಲಿ ಜ್ಯೋತಿಯ ವಿಷಯದ ಬಗ್ಗೆ ಬಾಯಿ ಬಿಡಲಿಲ್ಲ. ಗೌಡ ಊರ ಜನರನ್ನು ಸೇರಿಸಿ ಈಕೆಗೆ ಬಹಿಷ್ಕಾರ ಹಾಕಬೇಕು ಎಂದು ಆಜ್ಞೆ ಹೊರಡಿಸಿದ. ಇದು ಅನ್ಯಾಯ ಎಂದು ಗೊತ್ತಿದ್ದರೂ ಗೌಡನ ಬಳಿ ಸಾಲ ಸೂಲ ಮಾಡಿಕೊಂಡಿದ್ದ ಊರ ಜನ ಈತನ ನ್ಯಾಯಕ್ಕೆ ತಲೆ ಆಡಿಸಿದರು. ಕಮಲಿಯ ಮನೆಯಲ್ಲಿದ್ದ ವಸ್ತುಗಳನ್ನು ಆಚೆ ಬಿಸಾಕಿದರು, ಊರ ಹೊರ ಹೋಗುವಂತೆ ಗೌಡನ ಆಳುಗಳು ಕಮಲಿಯನ್ನು ಬೆದರಿಸಿದರು. ಮನೆಯೂ ಇಲ್ಲದೆ, ಊಟವೂ ಇಲ್ಲದೆ ಕಮಲಿ ಸತ್ತೇಹೋದಳು. ಆಕೆಯ ದೇಹ ಮಣ್ಣು ಕಾಣದೆ ಊರಾಚೆ ಕೊಳೆತು ಹೋಯಿತು. ಗೌಡನ ಈ ವರ್ತನೆಗೆ ಊರಿನ ಜನ ಕೊತ ಕೊತನೆ ಕುದಿಯುತ್ತಿದ್ದರೂ ನಿತ್ತಿಯ ಸಿಟ್ಟು ಕೈಗೆ ಬರುತ್ತಿದ್ದರೂ ಸಾಲ ಅವರನ್ನು ಕಟ್ಟಿಹಾಕುತ್ತಿತ್ತು.

ಉಪಚುನಾವಣೆ

ಯಾವುದೇ ಕಾರಣಕ್ಕೂ ಮನೆ ಕಟ್ಟಿ ಕೊಡ್ತೀವಿ ಅಂತ ಮಾತ್ರ ಹೇಳಬೇಡಿ..! ಈ ಸಾರಿ ಮಳೆಗೆ ಮನೆಗಳೆಲ್ಲ ಕೊಚ್ಚಿ ಹೋಗಿದಾವೆ ಅದಕ್ಕೆ..!

ಜ್ಯೋತಿ ಸಿಟಿ ಸೇರಿ ಓದಲು ಮಾಸ್ತರ ಬಸ್ಸಪ್ಪ ಕಾರಣ ಎಂಬುದು ಗೌಡನಿಗೆ ಬೇಗ ಗೊತ್ತಾಯ್ತು. ಮಾಸ್ತರರನ್ನು ಎದುರಿಸಲು ಗೌಡನಿಗೆ ಸಾಧ್ಯವಿರಲಿಲ್ಲ. ತನ್ನ ರಾಜಕೀಯ ಶಕ್ತಿಯನ್ನು ಬಳಸಿ ಮಾಸ್ತರರನ್ನು ಬೇರೆ ಕಡೆ ಹೋಗುವಂತೆ ಮಾಡಿದ. ಕಾಕತಾಳೀಯ ಎಂಬಂತೆ ಜ್ಯೋತಿ ಓದುತ್ತಿದ್ದ ಸಿಟಿಗೆ ಮಾಸ್ತರರ ವರ್ಗಾವಣೆಯಾಗಿತ್ತು. ಮಾಸ್ತರ ಕುಟುಂಬ ಸಿಟಿಯಲ್ಲೇ ಮನೆ ಮಾಡಿದರು. ಮಕ್ಕಳಿಲ್ಲದ ಕಾರಣ ಜ್ಯೋತಿಯನ್ನು ಹಾಸ್ಟೆಲ್ ಬಿಡಿಸಿ ತಮ್ಮ ಮನೆಯಲ್ಲಿಯೇ ಉಳಿಸಿಕೊಂಡು ಓದಿಸತೊಡಗಿದರು. ಮಾಸ್ತರರ ಆಶ್ರಯದಿಂದ ಜ್ಯೋತಿ ಗಟ್ಟಿಯಾಗತೊಡಗಿದಳು.

ಜ್ಯೋತಿಗೆ ತನ್ನ ತಾಯಿಯ ಸಾವು ಹೇಗಾಯಿತೆಂದು ನಿಧಾನಕ್ಕೆ ಮಾಸ್ತರರು ತಿಳಿಸಿದರು. ಅವಳಿಗೆ ಮುತ್ತು ಕಟ್ಟಿರುವುದು, ಆ ಪದ್ಧತಿಯ ಕ್ರೌರ್ಯ ಎಲ್ಲವನ್ನೂ ಮಾಸ್ತರರು ಎಳೆ ಎಳೆಯಾಗಿ ವಿವರಿಸಿದರು. ಜ್ಯೋತಿ ಇಂತಹ ಅನಿಷ್ಟ ದೇವದಾಸಿ ಪದ್ಧತಿಗೆ ತಾನು ಬಲಿಯಾಗಿ ಬಿಟ್ಟೆನಲ್ಲ ಎಂದು ಚಡಪಡಿಸಿದಳು. ಆದರೆ ಮಾಸ್ತರ ಬಸ್ಸಪ್ಪನವರು ಜ್ಯೋತಿಯನ್ನು ಮಾನಸಿಕವಾಗಿ ದಿನೇ ದಿನೇ ಗಟ್ಟಿಮಾಡತೊಡಗಿದರು. ರಾಜ್ಯಕ್ಕೆ ಪ್ರಥಮ ಸ್ಥಾನ ಪಡೆಯುವ ಮೂಲಕ ಆ ಶಾಲೆಗೆ ಹಾಗೂ ಮಾಸ್ತರಗೆ ಕೀರ್ತಿ ತಂದಳು. ಮಾಸ್ತರರ ಪ್ರೋತ್ಸಾಹದಿಂದ ಜ್ಯೋತಿ ಉನ್ನತ ಮಟ್ಟಕ್ಕೇರ ತೊಡಗಿದಳು. ಸ್ನಾತಕೋತ್ತರ ಪದವಿ ಮುಗಿಸಿ ಐ.ಎ.ಎಸ್. ತರಬೇತಿ ಪಡೆದು ತಾನು ಓದಿದ್ದ ಸಿಟಿಗೆ ಜಿಲ್ಲಾಧಿಕಾರಿಯಾಗಿ ನೇಮಕವಾದಳು. ವಯಸ್ಸಾಗಿದ್ದ ಮೇಷ್ಟ್ರು ಮತ್ತು ಅವರ ಹೆಂಡತಿ ಅಸುನೀಗಿದ್ದರು. ಮೇಸ್ಟ್ರು ಸಾಯೋವಾಗ "ನೀನು ಅಧಿಕಾರಿಯಾದ ಮೇಲೆ ಆ ಗೌಡನನ್ನು ಕಾನೂನಿನ ಮೂಲಕ ಕಟ್ಟಿಹಾಕಿ ಜೈಲಿಗಟ್ಟಬೇಕು" ಎಂದು ವಚನ ತೆಗೆದುಕೊಂಡಿದ್ದರು. ಅಧಿಕಾರ ವಹಿಸಿ ಕೆಲ ದಿನಗಳು ಕಳೆದ ಬಳಿಕ ಜ್ಯೋತಿ ತನ್ನ ಹುಟ್ಟೂರಿಗೆಭೇಟಿ ನೀಡಿದಳು.

ಜ್ಯೋತಿಗೆ ಊರಿನ ಕೆಲವರ ಹೆಸರು ಗೊತ್ತಿತ್ತು. ಅವರಲ್ಲಿ ಕೆಲವರು ಅಸುನೀಗಿದ್ದರು. ಇದ್ದ ಕೆಲವರನ್ನು ಮಾತನಾಡಿಸುತ್ತ "ನಾನು ಕಮಲಿಯ ಮಗಳು ಜ್ಯೋತಿ, ಈಗ ನಿಮ್ಮ ಜಿಲ್ಲೆಗೆ ಜಿಲ್ಲಾಧಿಕಾರಿಯಾಗಿ ಬಂದಿದ್ದೇನೆ" ಎಂದು ಹೇಳಿದಾಗ ಅಲ್ಲಿದ್ದ ಹಿರಿಯ ಹೆಣ್ಣು ಮಕ್ಕಳು "ನೀನು ಕಮಲಿ ಮಗಳು ಜ್ಯೋತಿ ನಾ!" ಎಂದು ತಲೆ ಸವರಿದರು, ಕುಡಿಯಲು ಎಳೆನೀರು ನೀಡಿ ತಿಂಡಿಯ ವ್ಯವಸ್ಥೆ ಮಾಡಿದರು.

ಅವರ ಪ್ರೀತಿಗೆ ಕೃತಜ್ಞತೆ ಸಲ್ಲಿಸಿ ಜ್ಯೋತಿ ಹೊರಡುತ್ತೇನೆ ಎಂದು ಕೈ ಮುಗಿದಳು. ಸಿಟಿಯಲ್ಲೇ ಮನೆ ಮಾಡಿದಿಯೇನವ್ವ ಎಂದು ಹಿರಿಯ ಕೆಂಚಪ್ಪ ಕೇಳಿದ. ಹೌದು ತಾತ ನನಗೆ ಸರಕಾರವೇ ಇರೋದಕ್ಕೆ ಮನೆ ಕೊಟ್ಟಿದೆ. ಅಲ್ಲೇ ವಾಸವಾಗಿದ್ದೇನೆ ಎಂದಳು. ನಿಮ್ಮ ಮನೆನಾ ಆ ಗೌಡಪ್ಪನ ಮಗ ಮರೇಗೌಡ ಇಸ್ಪೀಟ್ ಅಡ್ಡಾ ಮಾಡ್ಕೊಂಡಾನವ್ವ ಅಂತ ಕಣ್ಣೀರು ಸುರಿಸುತ್ತಾ ಊರಿನ ಹಿರಿಯರು ಮಾಹಿತಿ ನೀಡಿದರು. "ಆ ಗೌಡ ನಮ್ಮನ್ನ ಕಾಡಿ ಕಾಡಿ ಗುಲಾಮರನ್ನಾಗಿ ಮಾಡ್ಕೊಂಡು ಇರೋ ಆಸ್ತಿನೆಲ್ಲಾ ಸಾಲಕ್ಕೆ ಅಂತಾ ತೊಗೊಂಡಬಿಟ್ಟ. ಈಗ ಅವನ ಮಗನ ಹಿಂಸಾನೂ ತಾಳಾಕ ಆಗ್ತಿಲ್ಲ" ಎಂದು ಹೇಳುತ್ತಿದ್ದಂತೆ, ಜ್ಯೋತಿಯ ಕೋಪ ಹೆಚ್ಚಾಯಿತು ಸಮಾಧಾನ ಮಾಡಿ ಕೊಂಡು "ಆ ಗೌಡ ಮತ್ತು ಅವನ ಮಗನಿಗೆ ಸರಿಯಾಗಿ ಮಾಡ್ತೀನಿ" ಅಂತ ಅವರಿಗೆ ಧೈರ್ಯ ಹೇಳಿದಳು.

ಆ ಹಳ್ಳಿಯಿಂದ ಸೀದಾ ಎಸ್‌ಪಿ ಕಚೇರಿಗೆ ಬಂದಳು ಜ್ಯೋತಿ. ಎಸ್‌ಪಿ ಶ್ರೀಧರ ಅವರನ್ನು ಭೇಟಿ ಮಾಡಿ ತನ್ನ ತಾಯಿಗೆ ಗೌಡ ಮಾಡಿದ ಬಹಿಷ್ಕಾರ ಹಾಗೂ ತನಗೆ ಚಿಕ್ಕವಳಿದ್ದಾಗ ಕಟ್ಟಿಸಿದ್ದ ಮುತ್ತಿನ ಬಗ್ಗೆ ಹೇಳಿ ದೂರು ದಾಖಲಿಸಿ ಗೌಡನನ್ನು ಜೈಲಿಗಟ್ಟಿದಳು. ಮರಿಗೌಡನನ್ನು ತನ್ನ ಕಚೇರಿಗೆ ಕರೆಸಿ ಊರಜ್ಜನಿಗೆ ಬಡ್ಡಿ ನೀಡಿ ಅವರಿಂದ ಪಡೆದ ಭೂಮಿಯನ್ನು ಹಿಂದಿರುಗಿಸುವಂತೆ ಹೇಳಿದಳು. ಮರಿಗೌಡ ಕೇಳಲಿಲ್ಲ. ಇವನಿಗೆ ಕಾನೂನು ಮೂಲಕ ಪಾಠ ಕಲಿಸಬೇಕೆಂದು ಯೋಚಿಸಿದಳು. "ಗೌಡರ ಮನೆಯ ಹೆಣ್ಣುಮಕ್ಕಳನ್ನು ಕರೆಸಿ ಹೇಳಿ, ಆಗ ಎಲ್ಲವೂ ಸರಿ ಹೋಗುತ್ತದೆ" ಎಂದು ಆಪ್ತಸಹಾಯಕಿ ಪ್ರಗತಿ ಹೇಳಿದ್ದನ್ನು ಜ್ಯೋತಿ ಜಾರಿ ಮಾಡಲು ಮುಂದಾದಳು. ತನ್ನನ್ನು ಬಂದು ಕಾಣುವಂತೆ ಗೌಡರ ಮನೆಯ ಹೆಣ್ಣು ಮಕ್ಕಳಿಗೆ ಪೊಲೀಸರ ಮೂಲಕ ವಿಷಯ ಮುಟ್ಟಿಸಿದಳು. ಜ್ಯೋತಿಯನ್ನು ಬಂದು ಭೇಟಿ ಮಾಡಿ ಅವಳಿಂದ ತಿಳುವಳಿಕೆ ಪಡೆದ ಆ ಹೆಣ್ಣು ಮಕ್ಕಳು ಮರೀಗೌಡನೊಂದಿಗೆ ಹಠ ಹಿಡಿದರು. ಮೇಡಂ, ನಿಮ್ಮ ಮೇಲೆ ಕೇಸ್ ಮಾಡಿದ್ರೆ ಜೈಲಿಗೆ ಹೋಗ್ತೀರಾ, ನಾವು ಬೀದಿಗೆ ಬರ್ತಿವಿ. ನಮ್ಮ ಮುಖ ನೋಡಿ ಆ ಯಮ್ಮ ನಿಮ್ಮ ಮೇಲೆ ಕೇಸ್ ಹಾಕದೆ ಹಾಗೇ ಬಿಟ್ಟಿದ್ದಾಳೆ" ಎಂದು ಗೌಡನ ಮಕ್ಕಳು ಗಲಾಟೆ ಮಾಡಿದ್ರು, "ನಾಳೆ ಮಕ್ಕಳ ಮದುವೆ ಕಾರ್ಯ ಎಲ್ಲವೂ ಕಷ್ಟ ಆಗುತ್ತೆ. ಇದೇನು ನೀವು ಗಳಿಸಿರೋ ಆಸ್ತಿ ಅಲ್ಲ. ಜನರಿಂದ ಕಿತ್ಕೊಂಡಿರೋದು. ಅವರ ಅಸಲಿಗಿಂತ ಬಡ್ಡಿನೇ ಜಾಸ್ತಿ ಬೆಳೆದಿದೆ. ಇಷ್ಟು ವರ್ಷ ನಾವು ಆ ಭೂಮಿಯಲ್ಲಿ ಸಾಕಷ್ಟು ಬೆಳೆ ತೊಗೊಂಡಿದೀವಿ. ಅವರ ಸಾಲ ಮುಟ್ಟಿ ಹೋಯ್ತು, ಅವರ ಭೂಮಿ ಅವರಿಗೆ ಕೊಟ್ಟುಬಿಡಿ" ಎಂದೆಲ್ಲ ಮನೆಯ ಹೆಣ್ಣುಮಕ್ಕಳು ಮಾತನಾಡ ತೊಡಗಿದರು. "ಕಾಲ ಬದಲಾಗಿದೆ, ಗೌಡ್ಕಿ ಸಾಕು ನಾನು ಇನ್ನ ಮೇಲೆ ಮನುಷ್ಯ ಆಗಿ ಬದುಕೋಣ" ಅಂತ ಗೌಡ ನಿರ್ಧರಿಸಿದ.

ಜ್ಯೋತಿಯನ್ನು ಭೇಟಿಯಾಗಿ ಊರವರ ಆಸ್ತಿ ಪತ್ರಗಳನ್ನು ನೀಡಿ, ತನ್ನನ್ನು ಎಚ್ಚರಿಸಿದ್ದಕ್ಕೆ ಮರಿಗೌಡ ಧನ್ಯವಾದ ಹೇಳಿದ. ಜ್ಯೋತಿಯ ಸಂತೋಷಕ್ಕೆ ಪಾರವೇ ಇರಲಿಲ್ಲ. ಊರಿನವರ ಭೂಮಿ ಅವರ ಕೈ ಸೇರಿತಲ್ಲ ಅಂತ ನಿಟ್ಟುಸಿರು ಬಿಟ್ಟಳು. ಊರಿನವರನ್ನೆಲ್ಲ ಸೇರಿಸಿ, ಅಲ್ಲಿಗೆ ಮರಿಗೌಡರನ್ನು ಬರಲು ಹೇಳಿದಳು. ಎಲ್ಲರ ಸಮಕ್ಷಮ ಸೇರಬೇಕಾದವರ ಭೂಮಿಯನ್ನು ಅವರಿಗೆ ನೀಡಿದಳು. ಮುತ್ತು ಕಟ್ಟಿ ಯಾರನ್ನೂ ದೇವದಾಸಿ ಪದ್ಧತಿಗೆ ತಳ್ಳಬೇಡಿ ಎಂದು ಎಚ್ಚರಿಸಿದಳು. ಮುತ್ತು ಕಟ್ಟಿಕೊಂಡಿದ್ದ ನೂರಾರು ದೇವದಾಸಿಯರು ಆಕೆಯ ಮುಂದೆಯೇ ಅದನ್ನು ಕಿತ್ತು ಬಿಸಾಕಿ ಆ ಕುಂಪೆಯನ್ನು ಸುಟ್ಟರು. ಅವರು ಸ್ವಾವಲಂಬಿ ಬದುಕು ಸಾಗಿಸಲು ದೇವದಾಸಿ ಹೆಣ್ಣುಮಕ್ಕಳ ಸಹಕಾರಿ ಸಂಘ ತೆರೆಯಲು ಪ್ರೋತ್ಸಾಹಿಸಿದಳು. ತನ್ನ ಮನೆಯನ್ನೆ ಅದಕ್ಕೆ ದಾನವಾಗಿ ನೀಡಿ ಕಚೇರಿ ಮಾಡಿಕೊಳ್ಳುವಂತೆ ಹೇಳಿದಳು. ದೇವದಾಸಿ ಹೆಣ್ಣುಮಕ್ಕಳ ಮಕ್ಕಳ ಶಿಕ್ಷಣಕ್ಕೆ ಪ್ರೋತ್ಸಾಹ ನೀಡಿದಳು. ಜ್ಯೋತಿಯ ಈ ಸಾಧನೆಯಿಂದಾಗಿ ಊರವರೆಲ್ಲ ಸೇರಿ ಆ ಗ್ರಾಮಕ್ಕೆ ಜ್ಯೋತಿಪುರ ಎಂದು ಹೆಸರಿಟ್ಟರು.

**ಗುರುರಾಜ ದೇಸಾಯಿ**
ಸಾ॥ ತಲ್ಲೂರು, ಪೊ॥ ಗೆದಗೇರಿ, ತಾ॥ ಯಲಬುರ್ಗಾ
ಜಿ॥ ಕೊಪ್ಪಳ – ೫೮೩೨೩೬
Email : gurutlr@gmail.com

# ಸತ್ಯದ ಹುಡುಕಾಟಕ್ಕಾಗಿ
# ಶೋಧ

*ಲೇಖಕರು*
**ಎಸ್. ಎಫ್. ಯೋಗಪ್ಪನವರ್**

ಪುಟ : ೧೨೪ ಬೆಲೆ : ರೂ. ೧೨೫/-

*ಪ್ರಕಾಶಕರು*
**ಪಲ್ಲವ ಪ್ರಕಾಶನ**
ಚನ್ನಪಟ್ಟಣ,
ಬಳ್ಳಾರಿ ಜಿಲ್ಲೆ – ೫೮೩ ೧೧೩

ನಾನು ಓದಿದ ಪುಸ್ತಕ

**ಚಿನ್ನಸ್ವಾಮಿ ವಡ್ಡಗೆರೆ**

**ಯಾ**ಂತ್ರಿಕ ಜಗತ್ತಿನಲ್ಲಿ ಯಾವುದು ಸತ್ಯ? ಯಾವುದು ಮಿಥ್ಯ? ಕಂಡದ್ದೆ ನಿಜವೆ? ಕಾಣದಿರುವುದು ಸುಳ್ಳೆ? ಅಂತರಂಗ ಮತ್ತು ಬಹಿರಂಗಗಳ ನಡುವೆ ಜೀಕುತ್ತಾ ಸಾಗುವ ಬದುಕಿನ ಸಾರ್ಥಕತೆಯಾದರೂ ಯಾವುದು? ಇಂತಹ ಹತ್ತು ಹಲವು ಪ್ರಶ್ನೆಗಳನ್ನೆ ಮುಂದಿಟ್ಟುಕೊಂಡು ಹುಡುಕಾಟ ನಡೆಸುವ 'ಶೋಧ' ಎಸ್. ಎಫ್. ಯೋಗಪ್ಪನವರ್ ಅವರ ವಿಶಿಷ್ಟ, ಭಿನ್ನ ಕಾದಂಬರಿ.

ಒಂದು ವಿಶಿಷ್ಟ ಬಗೆಯ ಪರಿಸರದಲ್ಲಿ ನಡೆಯುವ ಕತೆಯಲ್ಲಿ ಹಲವು ಪಾತ್ರಗಳಿವೆ. ಆ ಪಾತ್ರಗಳಿಗೆ ಹೆಸರೆಂಬುದಿಲ್ಲ. ನಿರೂಪಕ ಮತ್ತು ಪೊಲೀಸ್ ಈ ಎರಡು ಪಾತ್ರಗಳ ಸುತ್ತಾ ನಡೆಯುವ ಹಲವು ಘಟನಾವಳಿಗಳಿವೆ. ಸ್ವಪ್ನದಲ್ಲಿ ನಡೆಯುವಂತೆ ಕೆಲವೊಂದು ಘಟನೆಗಳು ಶುಭ್ರಸ್ಫಟಿಕದಂತೆ ತಣ್ಣನೆಯ ನೀರಿನ ಝರಿಯಂತೆ ಜುಳುಜುಳು ಹರಿದು ಮುಂದೆ ಸಾಗುತ್ತವೆ. ಕತೆ ಕನಸು ಮತ್ತು ಎಚ್ಚರದಲ್ಲಿ ನಡೆದಂತೆ ಭಾಸವಾಗುತ್ತದೆ.

'ದೇವರ ಹೆಸರಿನಲ್ಲಿ ಪ್ರಮಾಣ ಮಾಡಿ', 'ಪ್ರೀತಿ ಎಂಬುದು ಚಂದ್ರನ ದಯೆ' ಎಂಬ ಎರಡು ಕಾದಂಬರಿಗಳ ನಂತರ ಬಂದ 'ಶೋಧ'ವನ್ನು ವಸ್ತು ಮತ್ತು ಕಥನ ಶೈಲಿಯ ದೃಷ್ಟಿಯಿಂದ ಗಮನಿಸಬೇಕು. ಪಲ್ಲವ ಪ್ರಕಾಶನ ಈ ಕೃತಿಯನ್ನು ಪ್ರಕಟಿಸಿದೆ.

"ನಾವು ಹುಟ್ಟಿ ಬೆಳೆದ ಮಣ್ಣಿನ ಋಣದ ಹಲವು ವಿವರಗಳು ಇಲ್ಲಿವೆ. ನನ್ನಂಥವನಿಗೆ ನನ್ನ ಪರಿಸರ ದೈವಿಕ ಕಂಪನಗಳ ಶಕ್ತಿ ಸ್ಥಳವಾಗಿದೆ. ನಮ್ಮ ಬಿಸಿಲಿನ ಜೊತೆ ಬೆಸೆದುಕೊಂಡ, ಲೌಕಿಕವನ್ನು ದಾಟಿದ ಅತೀತವಾದ ಒಂದು ಹಂಬಲ ಹುಟ್ಟಿನಿಂದ ಸಾಯುವವರೆಗೂ ನಮ್ಮ ಜೊತೆ ಜೊತೆಯಾಗಿ ನೆರಳಿನಂತೆ ಬರುತ್ತದೆ. ಅದರ ಹುಡುಕಾಟವೂ ವಿಚಿತ್ರವಾಗಿರುತ್ತದೆ. ಕಲೆಗೆ ಎಲ್ಲಾ 'ಇಜಂ'ಗಳನ್ನು ದಾಟಿದ ಹಸಿವೆ ಹಾಗೂ ಬಾಯಾರಿಕೆ ಇರುವುದರಿಂದಲೇ ವಿಶಿಷ್ಟವೆನ್ನುವ ಜೀವಪ್ರಾಪ್ತಿ ಯಾಗುತ್ತದೆ" ಎಂದು ಯೋಗಪ್ಪನವರ್ ಹೇಳುವ ಮಾತುಗಳು 'ಶೋಧ' ಓದಿಗೆ ಪ್ರವೇಶಿಕೆಯಂತಿವೆ.

ನೀಲಿಬಾನಿನಲ್ಲಿ ಮೂಡಿದ ಬಿಳಿಯ ಮೋಡಗಳ ಚಿತ್ತಾರದಂತೆ ೨೪ ಕಿರು ಅಧ್ಯಾಯಗಳಲ್ಲಿ 'ಆಕಸ್ಮಿಕ'ವಾಗಿ ಆರಂಭವಾಗುವ ಶೋಧ 'ಹುಣ್ಣಿಮೆ'ಯ ದಿನ ಮುಕ್ತಾಯವಾಗುತ್ತದೆ.

ಕಾದಂಬರಿಯ ನಿರೂಪಕ ಯಾರಿಗೂ ಗೊತ್ತಿದ್ದು ತೊಂದರೆ ಮಾಡಿದವನಲ್ಲ. ವಿನಾಕಾರಣ ಯಾರದಾದರೂ ಸುಖದಲ್ಲಿ ಪಾಲು ಕೇಳಿದವನಲ್ಲ. ಅವನಿಗೆ ತನ್ನ ಇತಿಮಿತಿಗಳ, ಆರ್ಥಿಕ ಸೌಲಭ್ಯಗಳ ಪೂರ್ಣ ಕಲ್ಪನೆ ಇದೆ. ಆದರೂ ತನಗೆ ಗೊತ್ತಿರದಂತೆ ಒಬ್ಬನಿಗಾಗಿ ಕಾಯುತ್ತಿದ್ದಾನೆ. ಅವನ ಚಹರೆ, ಆಕರ, ವಿಳಾಸದ ಬಗ್ಗೆ ಏನೂ ಗೊತ್ತಿಲ್ಲ. ಆದರೂ ಅವನಿಗಾಗಿ ಮನ ಹಂಬಲಿಸುತ್ತಿದೆ. ಇಂಥವನು ಬೆಳ್ಳಂಬೆಳಗ್ಗೆ ಐದು ಗಂಟೆಯ ಸುಖ ನಿದ್ರೆಯ ವೇಳೆಯಲ್ಲಿ ಕನಸಿನಲ್ಲಿ ಬೆಳಕಿನ ಹಾಗೆ ಬಂದವ ಇವನನ್ನು ಎಬ್ಬಿಸಿ ಹೊರಟು ಹೋಗುತ್ತಾನೆ. ಅಲ್ಲಿಂದ ಸಮಸ್ಯೆ ಶುರುವಾಗುತ್ತದೆ.

ಯಾವುದೊ ಒಂದು ಪ್ರಕರಣದಲ್ಲಿ ಪೊಲೀಸರಿಗೆ ಬೇಕಾದ ಅಪರಾಧಿಯ ಚಹರೆ ನಿರೂಪಕನ ಕನಸಿನಲ್ಲಿ ಬಂದವನನ್ನು ಹೋಲುತ್ತದೆ. ಪೊಲೀಸರು ಆರೋಪಿಯ ಪತ್ತೆಗಾಗಿ ನಿರೂಪಕನಿಗೆ ಗಂಟು ಬೀಳುತ್ತಾರೆ.

ಇಬ್ಬರು ಪೊಲೀಸರು ಇವನನ್ನು ಬೆತ್ತಲೆ ಮಾಡಿ ಮೈಯೆಲ್ಲಾ ತೂತುಬಿದ್ದು ರಕ್ತಬರುವಂತೆ ಬಡಿಯುತ್ತಾರೆ. 'ಬಾಯಿಬಿಡಲೇ ಸೂಳೆಮಗನೆ.' ಎಂದು ಬೆಂಕಿಹಾಕಿದಂತೆ ಬಯ್ಯುತ್ತಾರೆ. ಆದರೆ ಬಾಯಿಬಿಡಲು ನಿರೂಪಕನಿಗೆ ಗೊತ್ತಿರುವ ಸರಕಾದರೂ ಏನು? ಹೇಳಲು ಏನಿದೆ? ಒಮ್ಮೆ ಬೆಳಕಿನಂಥ ವ್ಯಕ್ತಿ ಬಂದಿದ್ದ. ಹಾಗೆಯೇ ಅದೇ ಕ್ಷಣದಲ್ಲಿ ಹೊರಟುಹೋಗಿದ್ದ. ಅವನು ಬಂದದ್ದು ಹೋದದ್ದು ಅವನಿಗೇ ಸರಿಯಾಗಿ ಗೊತ್ತಾಗಿಲ್ಲ. ಅಲ್ಲದೆ ಅವನು ನೋಡಿದ ವ್ಯಕ್ತಿ ಅಪರಾಧಿಯಂತೆ ಕಾಣುತ್ತಲೇ ಇರಲಿಲ್ಲ. ಅವನು ಹಾಲಿನಂತೆ ಹೆಪ್ಪುಗಟ್ಟಿದ್ದ. ಜೈನ ಮುನಿಯಂತೆ ಕಾಣುತ್ತಿದ್ದ. ಶುಭ್ರನಾಗಿದ್ದ.

ಆದರೆ ಪೊಲೀಸಿನವರಿಗೆ ಇದೇ ಸಮಸ್ಯೆ. ಬೆಳ್ಳಂಬೆಳಗ್ಗೆ ಯಾರನ್ನೇ ನೋಡಿದರೂ ಶುಭ್ರವಾಗಿಯೇ ಕಾಣುತ್ತಾರೆ. ಅಪರಾಧಿಗಳೆಲ್ಲರೂ ಮಹಾತ್ಮರಂತೆ ಕಾಣುತ್ತಾರೆ. ನಾಗರಿಕರೇ ಅಪರಾಧಿಗಳು!

"ಪೌಡರ್ ಸೆಂಟು ಹಾಕಿಕೊಂಡ ನಾಗರಿಕನ ಸುವಾಸನೆಯ ಹಿಂದೆ ಹುಳುಗಳು ಬುಕುಬುಕು ಅನ್ನುತ್ತವೆ. ಬಹುತೇಕ ಪಾತಕಿಗಳು ಸೆಂಟ್ ಬಾಟಲಿಗಳಂತೆಯೇ ಇರುತ್ತಾರೆ" ಎನ್ನುವುದು ಪೊಲೀಸಿನವರ ವಾದ.

ಪ್ರಕರಣವಾದರೂ ಎಂತಹದು? ಇವನು ಹುಡುಕುತ್ತಿರುವವ ಯಾವ ಗುನ್ಹೆ ಮಾಡಿದ್ದಾನೆ, ಯಾವ ಕೊಲೆ ಸುಲಿಗೆಯಲ್ಲಿ ಭಾಗಿಯಾಗಿದ್ದಾನೆ, ಯಾವ ಪಾತಕ ಕ್ರಿಯೆ ಮಾಡಿದ್ದಾನೆ ಎನ್ನುವ ಬಗ್ಗೆ ಪೊಲೀಸಿನವನು ಒಂದನ್ನೂ ಹೇಳುತ್ತಿಲ್ಲ. ಅವನೊಬ್ಬ

ಅಪರಾಧಿ, ಅವನನ್ನು ನೀನು ನೋಡಿರುವಿ, ನೀನೇ ಅವನನ್ನು ಹುಡುಕಿಕೊಡಬೇಕೆಂದು ಹೇಳುತ್ತಿದ್ದಾನೆ.

ಆದರೆ ನಿರೂಪಕನಿಗೆ ತನ್ನ ಹೊಲ, ಅಲ್ಲಿ ಚಿಗಿಯುವ ಬೆಳೆ, ಆ ಬೆಳೆಯ ಕಾಳುಗಳು ಮಾತ್ರ ಸಾಕು. ಆದರೆ ಇಲ್ಲಿ ಪೊಲೀಸಿನವರು ಅವನನ್ನು ದಿನವೂ ಸಾಯಿಸುತ್ತಿದ್ದಾರೆ. 'ಯಕ್ಷಪ್ರಶ್ನೆ' ಎಂಬ ಅಧ್ಯಾಯ ಹಲವು ಸತ್ಯ ಮಿಥ್ಯಗಳ ಅನಾವರಣಮಾಡುತ್ತದೆ.

'ನೀವು ಅವನನ್ನು ಹಿಡಿಯದಿದ್ದರೆ ನಾವೆಲ್ಲಾ ಕೆಲಸ ಕಳೆದುಕೊಳ್ಳಬೇಕಾಗುತ್ತದೆ. ದೊಡ್ಡವರು ನಮ್ಮನ್ನು ಬಿಡುವುದಿಲ್ಲ' ಎಂದು ಇನ್‌ಸ್ಪೆಕ್ಟರ್ ತನ್ನ ಕೆಳಗಿನ ಅಧಿಕಾರಿಗಳಿಗೆ ಕಡಕ್ ವಾರ್ನಿಂಗ್ ಮಾಡಿದ್ದಾನೆ.

'ಅಪರಾಧಿಯನ್ನು ನೋಡಿದವ ಈಗ ನಿಮ್ಮ ಕೈಗೆ ಸಿಕ್ಕಿದ್ದಾನೆ! ಅವನ ಮುಖಾಂತರ ಅವನನ್ನು ಹಿಡಿಯಿರಿ. ಅವನು ಅಪರಾಧಿಯನ್ನು ತೋರಿಸದೇ ಹೋದರೆ ಅವನ ಎಲುಬುಗಳನ್ನು ಪುಡಿ ಪುಡಿ ಮಾಡಿ ಒಂದು ಚೀಲದಲ್ಲಿ ಕಟ್ಟಿಕೊಂಡು ಬನ್ನಿ, ಮುಂದಿನ ಅಗ್ನಿಸ್ಪರ್ಶ ಕಾರ್ಯ ನನ್ನದು' ಎಂದು ಎಚ್ಚರಿಕೆ ನೀಡುತ್ತಾನೆ. ಪ್ರಕರಣ ತುಂಬ ಗಂಭೀರವಾಗಿದೆ.

ಪದೇ ಪದೇ ಅಪರಾಧಿಯ ಬಗ್ಗೆ ಪೊಲೀಸಿನವನು ಕೇಳಿದಾಗ ನಿರೂಪಕ 'ಅವನು ಬೆಳಕಿನ ಮುದ್ದೆಯಾಗಿದ್ದ. ಬೆಳಕನ್ನು ಬೆಳ್ಳಿಯಾಗಿ ಮಾಡುತ್ತ ಸರಿದು ಹೋಗುವ ನೀರಿನಂತಿದ್ದ. ಬೇಡವೆಂದರೂ ಮೈದಡವಿ ಹೋಗುವ ಹಿತವಾದ ಗಾಳಿಯಂತಿದ್ದ' ಎನ್ನುತ್ತಾನೆ.

ಇದರಿಂದ ಪೊಲೀಸನಿಗೆ ಸಿಟ್ಟು ಬರುತ್ತದೆ. 'ನೀನು ಯಾವಳನ್ನಾದರೂ ಪ್ರೀತಿಸುತ್ತಿರುವೆಯಾ? ನಿನ್ನದು ಲವರ್ಸ್ ಭಾಷೆಯ ಹಾಗೆ ಕಾಣುತ್ತಿದೆ' ಎಂದು ಗದರುತ್ತಾನೆ.

ಆಗ ನಿರೂಪಕ 'ಭಾಷೆ ಮೃದುವಾಗಬೇಕಾದರೆ ಪ್ರೀತಿಸಲೇ ಬೇಕೆಂದಿಲ್ಲ. ನಾನು ರಾತ್ರಿಯೆಲ್ಲಾ ಬೆಂಕಿಯಲ್ಲಿ ಶಬ್ದಗಳನ್ನು ಹಾಕಿ ಸುಡುತ್ತೇನೆ. ಬೆಳಗಾಗುವುದರೊಳಗಾಗಿ ಬಹಳಷ್ಟು ಸತ್ತುಹೋಗುತ್ತವೆ. ಇನ್ನೂ ಕೆಲವು ಉಳಿದುಕೊಳ್ಳುತ್ತವೆ. ಉಳಿದವುಗಳನ್ನು ಬದುಕಿನ ಉಪಯೋಗಕ್ಕಾಗಿ ಬಳಸುತ್ತೇನೆ' ಎಂದು ತಣ್ಣಗೆ ಉತ್ತರಿಸುತ್ತಾನೆ.

ಬೆನ್ನುಡಿಯಲ್ಲಿ ಲಕ್ಷ್ಮೀಶ ತೋಳ್ಪಾಡಿ ಹೇಳಿದಂತೆ "ಎಸ್. ಎಫ್. ಯೋಗಪ್ಪನವರ್ ತಮ್ಮ 'ಶೋಧ'ದಲ್ಲಿ ವಾಸ್ತವವನ್ನು ಅನುಭವಿಸುವ ಇನ್ನೊಂದು ಬಗೆಯನ್ನು ಕಟ್ಟುತ್ತಿದ್ದಾರೆ. ಅನುಭವಿಸುವ ಇನ್ನೊಂದು ಬಗೆಯಿಂದಾಗಿ ವಾಸ್ತವವೂ ಕನಸಿನಂತಾಗಿ ಬಿಡುವುದನ್ನು ತೋರಿಸುತ್ತಿದ್ದಾರೆ. ಹೌದು, ವಾಸ್ತವವನ್ನು ಕನಸಿನಂತೆಯೂ ಅನುಭವಿಸುವುದು ಸಾಧ್ಯ. ವಾಸ್ತವವೂ ಕಗ್ಗಲ್ಲಿನಂತಹ ಅಲುಗಾಡದ ವಾಸ್ತವವಲ್ಲ. ಅದು ಬಾನಿನ ಚುಕ್ಕಿಚಂದ್ರಮರನ್ನು ಪ್ರತಿಫಲಿಸುವ ಹರಿವ ನೀರಿನಂತಹ ವಾಸ್ತವ ಎನ್ನುತ್ತಿದ್ದಾರೆ. ಯೋಗಪ್ಪನವರ್ ಅವರ ಕನ್ನಡ ಎಚ್ಚರ ಮತ್ತು ಕನಸು ಒಂದರೊಳಗೊಂದು ಬೆರೆತಿರುವ ಕನ್ನಡ. ನಮ್ಮ ಎಚ್ಚರವನ್ನು ದಾಟಿ ನಮ್ಮ ಕನಸಿನೊಳಕ್ಕೆ ಬರುವುದಕ್ಕೆ ಕನಸಿನಲ್ಲೇ ಮೈಮುರಿಯುತ್ತಿರುವ ಕನ್ನಡ."

ಕಾದಂಬರಿಯಲ್ಲಿ ಬಳಸಿರುವ ಭಾಷೆಗೆ ಒಂದು ದಿವ್ಯವಾದ ಅನುಭೂತಿ ಪ್ರಾಪ್ತಿಯಾಗಿದೆ. ಇವರು ಹುಡುಕುವವ ಸದಾ ಅವಸರದಲ್ಲಿರುತ್ತಿದ್ದ. ಎಂಥ ಅವಸರವೆಂದರೆ ಬಲು ಮಾಯೆಯ ಅವಸರ. ಎಲ್ಲಾ ಹುಡುಕಾಟಗಳ ಹಣೆಬರಹವೂ ಹೀಗೆ ರೂಪ ಬದಲಿಸುತ್ತಾ ಹೋಗುತ್ತದೆ.

ಇಬ್ಬರಿಗೂ ಬೇಕಾದವನು ಕೊನೆಗೂ ಕಾಣಿಸಿದ. ಹೌದು!

"ನೀರಿನಲ್ಲಿಳಿದು ಕಾಲು ತೊಳೆದುಕೊಳ್ಳುತ್ತಿದ್ದಾನೆ. ಮೈಗೆ ಶಲ್ಯ ಹೊದ್ದಿದ್ದಾನೆ. ಇನ್ನು ತಡಮಾಡಬಾರದು ಅವನನ್ನು ಮುಟ್ಟಿಯೇ ತೀರಬೇಕೆಂದು ಇವನು ನಿರ್ಧರಿಸಿದ. ಆದರೆ ಅವನನ್ನು ಮುಟ್ಟುತ್ತಿದ್ದೇನೆ ಎನ್ನುವಷ್ಟರಲ್ಲಿ ಢಂ ಎಂಬ ಶಬ್ದ ಕೇಳಿಸುತ್ತದೆ. ಅವನ ಮೈಮೇಲಿನ ಶಬ್ದ ಇವನ ಕೈಯಲ್ಲಿರುತ್ತದೆ. ನೋಡು ನೋಡುತ್ತಿದ್ದಂತೆ ಅವನು ಅಲ್ಲಿಂದ ಮರೆಯಾಗುತ್ತಾನೆ. ಹೊರಳಿ ನೋಡಿದರೆ, ಆ ಗುಂಡು ಕಲ್ಲಿನ ಕಂಬಕ್ಕೆ ತಾಗಿ ಮರಳಿ ಅವನ ದೇಹ ಸೇರಿದೆ. ಪೊಲೀಸ್ ಹೆಣವಾಗಿ ಬಿದ್ದಿದ್ದಾನೆ. ಇವನಿಗೆ ಮುಗಿಲು ಹರಿದು ಮೇಲೆ ಬಿದ್ದಂತಾಗುತ್ತದೆ. ಇಬ್ಬರೂ ಅರ್ಥ ಸಿಗದ ಹಾದಿಯಲ್ಲಿ ಪ್ರಯಾಣ ಬೆಳಸಿ ಸಾವಿಗೆ ಸಿಕ್ಕಿಕೊಳ್ಳುತ್ತಾರೆ. ಅಲ್ಲಿಗೆ ಪೊಲೀಸ್ ಸಾವಿನೊಂದಿಗೆ 'ಶೋಧ' ಕೊನೆಗೊಳ್ಳುತ್ತದೆ. ಇದು ಬಹಿರಂಗದ ಹೊಯ್ದಾಟ ನಿಲ್ಲದೆ ಅಂತರಂಗಕ್ಕೆ ಪ್ರವೇಶ ಸುಲಭವಾಗಿ ದಕ್ಕದು ಎನ್ನುವ ಸೂಚನೆಯಾಗಿರಬಹುದೇ?

ಅಪರಾಧಿಯನ್ನು ಹುಡುಕುತ್ತಿದ್ದೇನೆ ಎಂದು ಕೊಂಡಿರುವ ಪೊಲೀಸ್. ತನಗೆ ಆಪ್ಯಾಯಮಾನವಾದ ಅಂತಃಕರಣದ ಬುದ್ಧ, ಯೇಸು, ತೆರೆಸಾ ತರಹದ ಮಾನವೀಯ ಗುಣದ ವ್ಯಕ್ತಿಯನ್ನು ಹುಡುಕುತ್ತಿದ್ದೇನೆ ಎಂದು ನಂಬಿರುವ ನಿರೂಪಕ 'ಶೋಧ'ದಲ್ಲಿ ತೊಡಗಿಕೊಂಡಿದ್ದಾರೆ.

ಅವನು ಹುಡುಕುವ ಕರುಣಾಮಯಿ, ಬಿಳಿಯ ಎತ್ತಾಗಿ, ಶ್ವೇತವರ್ಣದ ಶಲ್ಯ ಧರಿಸಿದ ಶಾಂತಮೂರ್ತಿಯಾಗಿ, ಹೊಲಸಿನಲ್ಲಿ ಮಿಂದುಬಂದ ವ್ಯಕ್ತಿಯನ್ನು ಸ್ವಚ್ಛಗೊಳಿಸುವ ಸೇವಕನಾಗಿ, ಎದೆ ಹಾಲು ಉಣಿಸುವ ಕರುಣಾಮಯಿಯಾಗಿ, ಹಸಿವು ನೀಗಿಸಿ ಪೊರೆವ ತಾಯಿಯಾಗಿ, ಕಣ್ಣುಗಳಲ್ಲಿ ಧಗಧಗಿಸುವ ಬೆಂಕಿ ಉಗುಳುವ ಹೆಣ್ಣಾಗಿಯೂ ಕಾಣಿಸಿ ಕೊಳ್ಳುತ್ತಾಳೆ. ಫ್ಯಾಂಟಸಿ, ರೂಪಕ, ಕಾವ್ಯ ಎಲ್ಲವೂ ಕಥನದಲ್ಲಿ ಮೇಳೈಸಿರುವ ಯೋಗಪ್ಪನವರ್ ಬಳಸುವ ಕನ್ನಡ ಓದುಗ ಬೆರಗಾಗುವಂತೆ ಮಾಡುತ್ತದೆ.

**ಚಿನ್ನಸ್ವಾಮಿ ವಡ್ಡಗೆರೆ**
ಕೃಷಿಕ, 'ಸ್ಪಂದನ', ನಂ. ೧೧೪೬, ೪ನೇ ಮುಖ್ಯರಸ್ತೆ
೨ನೇ ತಿರುವು, ಪಡುವಣ ರಸ್ತೆ
ಟಿ. ಕೆ. ಬಡಾವಣೆ, ಮೈಸೂರು – ೫೭೦ ೦೨೩
Email : vaddagere@gmail.com

# ಹಕ್ಕು



ಹಕ್ಕಿಗೆ ಹಾರುವ ಹಕ್ಕಿದೆ
ರೆಕ್ಕೆಗಳ ಪಟ ಪಟ ಬಡಿಯುತ್ತ
ಹಾರಾಡುತ್ತದೆ ಬಾನಿನ ಉದ್ದಗಲ
ಅದಕ್ಕೆ ರೆಕ್ಕೆಯಿದೆ
ಎತ್ತಿಗೆ ಹಾಯುವ ಹಕ್ಕಿದೆ
ಎದುರಿಸಿದ ಯಾವುದನ್ನೂ
ಯಾರನ್ನೂ
ಬಿಡದೆ ಹಾಯುತ್ತದೆ
ಅದಕ್ಕೆ ಕೊಂಬಿದೆ
ಮನುಷ್ಯನಿಗೆ ಹಕ್ಕಿದೆ
ಎಲ್ಲೂ ಏನೂ ಮಾಡುವ
ಸಾಮರ್ಥ್ಯವಿದೆ
ಅವನಿಗೆ ತಲೆ ಇದೆ
ಉಳ್ಳವಗೆ ಕೇಳಬೇಕೇ,
ಹೇಳಬೇಕೇ?
ಬೇಕಾದಷ್ಟು ಸ್ವಾತಂತ್ರ್ಯ ಇದೆ
ಮಾಡುತ್ತಾನೆ ಇಂಡಸ್ಟ್ರೀ
ಕೊಡುತ್ತಾನೆ ನೂರು ಸಾವಿರ
ಲಕ್ಷ ಲಕ್ಷ ಮಂದಿಗೆ ಉದ್ಯೋಗ

ಪಾಪ, ಕಾರ್ಮಿಕನಿಗೆ
ಹಕ್ಕಿದೆ, ಕೇಳುತ್ತಾನೆ, ಹೇಳುತ್ತಾನೆ,
ಹೋರಾಡುತ್ತಾನೆ,
ಏನು ಮಾಡುವುದು ಹೇಳಿ,
ಶ್ರಮಕ್ಕೆ ಪ್ರತಿಫಲ
ಸಿಗುತ್ತಿಲ್ಲ ಅಷ್ಟೆ.

**ವಿ. ಸುಬ್ರಹ್ಮಣ್ಯ ಭಟ್**
ಉಪನ್ಯಾಸಕರು, ತುಂಬೆ ಪ. ಪೂ. ಕಾಲೇಜು
ತುಂಬೆ – ೫೭೪೧೪೩, ಬಂಟ್ವಾಳ, ದಕ್ಷಿಣ ಕನ್ನಡ







# ಯುವ ಕಲಾವಿದ ವಿಶ್ವೇಶ್ವರ ಪಟಗಾರ



ಯುವ ಕಲಾವಿದ ವಿಶ್ವೇಶ್ವರ ಪಟಗಾರ ಇವರು ಮೂಲತಃ ಉತ್ತರ ಕನ್ನಡ ಜಿಲ್ಲೆಯ ಕುಮಟಾದವರು. ಬಾಲ್ಯದಿಂದಲೂ ನೈಜ ಚಿತ್ರಗಳನ್ನು ಚಿತ್ರಿಸುವಲ್ಲಿ ಆಸಕ್ತಿ ಹೊಂದಿದ್ದು, ಸಮಾಜದಲ್ಲಿ ಬದುಕಲು ಜನರು ಅನೇಕ ಮುಖವಾಡಗಳನ್ನು ಧರಿಸಿ ತಮ್ಮ ಸ್ವಾರ್ಥ ಸಾಧನೆಗಾಗಿ ಸುಮಧುರ ಸಂಬಂಧಗಳನ್ನು ಬಲಿಕೊಡುತ್ತಿದ್ದಾರೆ. ಕಲಾವಿದ ಪಟಗಾರ ಅವರು ತಮ್ಮ ಕಲಾಕೃತಿಗಳಲ್ಲಿ ಇಂತಹ ವಿಷಯಗಳ ಕುರಿತು ಅತ್ಯಂತ ಪರಿಣಾಮಕಾರಿಯಾಗಿ ವರ್ಣ ಸಂಯೋಜನೆಯಲ್ಲಿ ಕ್ಯಾನವಾಸಿನ ಮೇಲೆ ಬಿಂಬಿಸಿದ್ದಾರೆ.

ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಎಂ.ಎಫ್.ಎ. ಸ್ನಾತಕೋತ್ತರ ಪದವಿಯನ್ನು ಪಡೆದ ಇವರು ಬೆಂಗಳೂರು, ಗೋವಾ, ಮುಂಬಯಿ, ಧಾರವಾಡ, ಕಿತ್ತೂರ, ಉಜಿರೆ, ವಿಜಯಪುರ ಮುಂತಾದ ಪ್ರಮುಖ ನಗರಗಳಲ್ಲಿ ತಮ್ಮ ಏಕವ್ಯಕ್ತಿ ಹಾಗೂ ಸಮೂಹ ಕಲಾ ಪ್ರದರ್ಶನಗಳನ್ನು ಏರ್ಪಡಿಸಿದ್ದಾರೆ. ಅನೇಕ ಕಲಾ ಶಿಬಿರಗಳಲ್ಲಿ ಭಾಗವಹಿಸಿದ್ದಾರೆ. ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘವು ಹಿರಿಯ ಕಲಾವಿದರಾದ ಶ್ರೀ ಬಿ. ಮಾರುತಿಯವರ ಹೆಸರಿನಲ್ಲಿರುವ ದತ್ತಿ ಕಾರ್ಯಕ್ರಮದ 'ಚಿತ್ತಾರ ಚೇತನ' ಪ್ರಶಸ್ತಿಯನ್ನು ಪಡೆದಿದ್ದಾರೆ.

– ದೀಪಕ ಬಿ. ಧಾರವಾಡ







Printed & published by Dr. Siddanagouda Patil on behalf of Navakarnataka Publications (P) Ltd., Embassy Centre, Crescent Road, Bengaluru-1 and printed at Sri Vinayaka Printers, No. 738/10, 60th Cross, 5th Block, Rajajinagar, Bengaluru-560 010. Published at Bengaluru. Editor : Dr. Siddanagouda Patil. 

